

# ಕಾದಂಬರಿಕಾರರಾಗಿ ಕಾರಂತ



ಸಂಪಾದಕರು
ಡಾ॥ ಜಿ. ಎಸ್. ಶಿವರುದ್ರಪ್ಪ

ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

Kadambarikararagi Karanta : A Collection of Papers Presented at a Symposium Organised by the Centre of Kannada Studies. Edited by Dr. G. S. Sivarudrappa, (Centre of Kannada Studies Series No. 46) Published by Prasaranga, Bangalore University, Bangalore, Pp. 236+xii, 1983.

ಪ್ರಧಾನ ಸಂಪಾದಕರು
ಡಾ॥ ಜಿ. ಎಸ್. ಶಿವರುದ್ರಪ್ಪ





ಪ್ರಕಾಶಕರು :
ಕೆ. ಸಿ. ಶಿವಪ್ಪ
ನಿರ್ದೇಶಕ (ಕಾರ್ಯನಿರ್ವಾಹಕ)
ಪ್ರಸಾರಾಂಗ
ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು 560 056



ಪ್ರಕಟಣ ಸಹಾಯಕ :
ಬಿ. ಕೆ. ಕರೀಗೌಡ

ಬೆಲೆ : 13–00

ಮುದ್ರಣ :
ಬೆಂಗಳೂರು ವಿಶ್ವವಿದ್ಯಾಲಯ ಮುದ್ರಣಾಲಯ, ಬೆಂಗಳೂರು - 560 056

## ಮೊದಲ ಮಾತು

ಬೆಂಗಳೂರು ವಿಶ್ವವಿದ್ಯಾಲಯದ ಪ್ರಸಾರಾಂಗ ಕನ್ನಡ ಮಾಧ್ಯಮದ ಅವಶ್ಯಕತೆಯನ್ನು ಪೂರೈಸುವ ಸಲುವಾಗಿ ಈಗಾಗಲೇ ಪಠ್ಯಪುಸ್ತಕಗಳನ್ನು ಸಿದ್ಧಪಡಿಸಿ ಪ್ರಕಟಿಸುತ್ತಿದೆ. ಇದರ ಜೊತೆಗೆ ವಿಶ್ವವಿದ್ಯಾಲಯದ ಸಾರ್ವಜನಿಕರಿಗೆ ವರ್ಷಾದ್ಯಂತವೂ ಏರ್ಪಡಿಸಿರುವ ಪ್ರಚಾರೋಪನ್ಯಾಸಗಳನ್ನು ಹಾಗೂ ವಿಶೇಷೋಪನ್ಯಾಸಗಳನ್ನು ಪುಸ್ತಕ ರೂಪದಲ್ಲಿ ಪ್ರಕಟಿಸುತ್ತಿದೆ. ಈ ಪಂಕ್ತಿಗೆ ಇದೀಗ ಬೆಂಗಳೂರು ವಿಶ್ವವಿದ್ಯಾಲಯದ ವಿವಿಧ ಅಧ್ಯಯನ ಶಾಖೆಗಳು ಕೈಗೊಳ್ಳುವ ವೈಯಕ್ತಿಕ ಹಾಗೂ ಸಾಮೂಹಿಕ ಸಂಶೋಧನಾತ್ಮಕ ವ್ಯವಸಾಯಕ್ಕೆ ಗ್ರಂಥರೂಪದ ಅಭಿವ್ಯಕ್ತಿಯನ್ನು ಕೊಡುವ ಕಾರ್ಯವೂ ಸೇರುತ್ತಿದೆ. ಇದರಿಂದಾಗಿ ವಿಶ್ವವಿದ್ಯಾಲಯದ ಒಂದೊಂದು ಅಧ್ಯಯನ ಶಾಖೆಯ ಅಧ್ಯಾಪಕರ ಸಂಶೋಧನಾತ್ಮಕ ಪ್ರವೃತ್ತಿಗೆ ತಕ್ಕಮಟ್ಟಿನ ಪ್ರೇರಣೆಯೂ ದೊರೆಯುತ್ತದೆ. ಈ ರೀತಿ ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಕನ್ನಡ ಅಧ್ಯಯನ ಕೇಂದ್ರ ಇಂಥ ಕೃತಿಗಳನ್ನು ಪ್ರಕಟಣೆಗೆ ಸಿದ್ಧಪಡಿಸುತ್ತಿರುವುದು ಪ್ರಶಂಸನೀಯವಾಗಿದೆ. ಪ್ರತಿಯೊಂದು ವಿಭಾಗವೂ ಹೀಗೆ ತನ್ನ ವಿಭಾಗದ ಹೆಸರಿನಲ್ಲಿ ಕೃತಿಗಳನ್ನು ಬೆಂಗಳೂರು ವಿಶ್ವವಿದ್ಯಾಲಯ ಪ್ರಸಾರಾಂಗದ ಮೂಲಕ ಹೊರತರಲು ಮುಂದೆ ಬರುವುದೆಂದು ನಂಬಿದ್ದೇನೆ.

ವಿಶ್ವವಿದ್ಯಾಲಯದ ನಿಜವಾದ ಹಿರಿಮೆ ಅದರ ಬೌದ್ಧಿಕ ಸಾಧನೆ ಹಾಗೂ ಅಭಿವ್ಯಕ್ತಿಗಳಲ್ಲಿದೆ. ಆದರೆ ಈ ಕಾರ್ಯದಲ್ಲಿ ಆತುರ ಸಲ್ಲದು ವಿಶ್ವವಿದ್ಯಾಲಯ ಪ್ರಕಟಿಸುವ ಕೃತಿಗಳು ಅದರ ಮತ್ತು ವಿವಿಧ ಅಧ್ಯಯನ ವಿಭಾಗಗಳ ಘನತೆಯನ್ನು ಕಾಯ್ದುಕೊಳ್ಳುವಂತಿರಬೇಕು. ಈ ಕಾರ್ಯದಲ್ಲಿ ನಾವು ಹೊರತರುವ ಕೃತಿಗಳ ಸಂಖ್ಯೆ ಮುಖ್ಯವಲ್ಲ ; ಗಾತ್ರ ಮುಖ್ಯವಲ್ಲ ; ಗುಣ ಮುಖ್ಯ.

ಪ್ರಸ್ತುತ ಕೃತಿ 'ಕಾದಂಬರಿಕಾರರಾಗಿ ಕಾರಂತ' ಕಳೆದ ವರ್ಷ ಕನ್ನಡ ಅಧ್ಯಯನ ಕೇಂದ್ರವು ಏರ್ಪಡಿಸಿದ್ದ ವಿಚಾರ ಸಂಕಿರಣದಲ್ಲಿ ಮಂಡಿಸಿದ ಹದಿನೈದು ಪ್ರಬಂಧಗಳ ಸಂಕಲನ. ಕನ್ನಡದ ಸಮಕಾಲೀನ ಸಾಹಿತಿಗಳಲ್ಲಿ ಪ್ರಮುಖರಾದ ಡಾ॥ ಕಾರಂತರ ಒಟ್ಟು ಕಾದಂಬರಿ ಸಾಹಿತ್ಯದ ಮೇಲೆ ನಡೆಸಿದ ವಿಚಾರ ಸಂಕಿರಣದ ಈ ಲೇಖನಗಳು ಬಹು ಮುಖ್ಯವಾದವುಗಳಾಗಿವೆ. ಕನ್ನಡ ಸಾಹಿತ್ಯವಿಮರ್ಶೆಯ ಕ್ಷೇತ್ರಕ್ಕೆ ಇದೊಂದು ಮೌಲಿಕ ಕೃತಿಯೆಂದು ನನ್ನ ಭಾವನೆ. ಈ ಕೃತಿಯನ್ನು ಸಿದ್ಧಪಡಿಸುವುದರಲ್ಲಿ ನೆರವಾದ ಕನ್ನಡ ಅಧ್ಯಯನ ಕೇಂದ್ರದ ಡಾ॥ ಜಿ. ಎಸ್. ಶಿವರುದ್ರಪ್ಪನವರಿಗೂ, ಈ ಕೃತಿಯ ಪ್ರಕಟಣೆಯಲ್ಲಿ ನೆರವಾದ ಎಲ್ಲ ಲೇಖಕರಿಗೂ ನನ್ನ ಅಭಿನಂದನೆಗಳು.

ಎಂ. ಎಸ್. ವಿಶ್ವನಾಥಯ್ಯ
ಉಪಕುಲಪತಿ
ಬೆಂಗಳೂರು ವಿಶ್ವವಿದ್ಯಾಲಯ

## ಮುನ್ನುಡಿ

ಕಳೆದ ಮಾರ್ಚಿ ತಿಂಗಳ (1982), 29, 30 ಮತ್ತು 31ನೆಯ ದಿನಾಂಕ ಕನ್ನಡ ಅಧ್ಯಯನ ಕೇಂದ್ರವು, 'ಕಾದಂಬರಿಕಾರರಾಗಿ ಕಾರಂತ' ಎಂಬ ವಿಷಯವನ್ನು ಕುರಿತು ಏರ್ಪಡಿಸಿದ ಮೂರು ದಿನದ ವಿಚಾರ ಸಂಕಿರಣದಲ್ಲಿ ಮಂಡಿತವಾದ ಹದಿನೆಂಟು ಉಪನ್ಯಾಸ-ಲೇಖನಗಳನ್ನು ಒಳಗೊಳ್ಳುವ ಸಂಕಲನ ಇದು. ಕನ್ನಡದ ಸುಪ್ರಸಿದ್ಧ ಕಾದಂಬರಿಕಾರರಾದ ಡಾ|| ಎಸ್. ಎಲ್. ಭೈರಪ್ಪನವರು ಉದ್ಘಾಟಿಸಿದ ಈ ವಿಚಾರ ಸಂಕಿರಣದ ಐದು ಗೋಷ್ಠಿಗಳನ್ನು, ಅನುಕ್ರಮವಾಗಿ ಡಾ. ಜಿ. ಎಸ್. ಆಮೂರ್, ಪ್ರೊ. ಎಲ್. ಎಸ್. ಶೇಷಗಿರಿರಾವ್, ಶ್ರೀ ಪಿ. ಲಂಕೇಶ್, ಪ್ರೊ. ಎಂ. ಗೋಪಾಲ ಕೃಷ್ಣ ಅಡಿಗ ಮತ್ತು ಶ್ರೀ ಯಶವಂತ ಚಿತ್ತಾಲ ಇವರು ನಡೆಯಿಸಿಕೊಟ್ಟರು.

ಕಾರಂತರು ಬಹುಮುಖ ಪ್ರತಿಭೆಯ ಕಲಾವಿದರು. ಅವರನ್ನು ಕೇವಲ ಲೇಖಕರು ಎಂದು ಕರೆಯುವುದಕ್ಕಿಂತ, ಮಹತ್ವದ ಕಲೆಗಾರರು ಎಂದು ಕರೆಯುವುದು ಹೆಚ್ಚು ಉಚಿತವೆಂದು ತೋರುತ್ತದೆ. ಈ ಕಲಾವಿದ ತನ್ನನ್ನು ಅಭಿವ್ಯಕ್ತಿಸಿಕೊಂಡ ಪ್ರಕಾರಗಳು ಹಲವಾರು. ಅವುಗಳಲ್ಲಿ ಕಾದಂಬರಿಯೂ ಒಂದು. 'ಒಂದು' ಮಾತ್ರ ವಲ್ಲ; ವಾಸ್ತವವಾಗಿ ಬಹು ಮುಖ್ಯವಾದದ್ದು ಕೂಡ. ಅವರ ಅಭಿವ್ಯಕ್ತಿಯ ಇನ್ನಿತರ ಪ್ರಕಾರಗಳಲ್ಲಿನ ಅವರ ಸಾಧನೆಯನ್ನು ಕುರಿತು, ಪ್ರತ್ಯೇಕವಾದ ಹಲವು ವಿಚಾರ ಸಂಕಿರಣಗಳನ್ನು ಏರ್ಪಡಿಸುವಷ್ಟು ಸಮೃದ್ಧವಾಗಿದೆ, ಅವರ ಕೊಡುಗೆ. ಆದರೆ ಪ್ರಸ್ತುತ ವಿಚಾರ ಸಂಕಿರಣ ಅವರ ಕಾದಂಬರೀ ಪ್ರಪಂಚಕ್ಕೆ ಮಾತ್ರ ಸೀಮಿತ ವಾಗಿದೆ.

ಕಾದಂಬರಿಕಾರರಾಗಿ ಕಾರಂತರನ್ನು ಕುರಿತ ಈ ವಿಚಾರ ಸಂಕಿರಣದ ವಿಷಯ ವಿಂಗಡಣೆ ಮತ್ತು ಅವುಗಳನ್ನು ಈ ತಲೆಮಾರಿನ ತರುಣ ಲೇಖಕರು ನೋಡಿರುವ ರೀತಿ, ಕಾರಂತರ ಕಾದಂಬರಿಗಳ ಅರ್ಥವಂತಿಕೆಗೆ ಮಹತ್ವದ ಕೊಡುಗೆಯಾಗಿದೆ ಎಂದು ನನ್ನ ನಮ್ರವಾದ ತಿಳಿವಳಿಕೆ. ಕನ್ನಡ ಅಧ್ಯಯನ ಕೇಂದ್ರ ಕನ್ನಡದ ಮಹತ್ವದ ಲೇಖಕರನ್ನು ಕುರಿತು, ಸಾಹಿತ್ಯದ ಪ್ರಮುಖ ವಿಚಾರಗಳನ್ನು ಕುರಿತು ಕಳೆದ ಹನ್ನೆರಡು ವರ್ಷಗಳಿಂದಲೂ ಈ ಬಗೆಯ ವಿಚಾರ ಸಂಕಿರಣಗಳನ್ನು ಏರ್ಪಡಿಸುತ್ತಾ, ಹೊಸಗನ್ನಡ ಸಾಹಿತ್ಯದ ಪುನರ್ ಮೌಲ್ಯ ಪ್ರಯತ್ನದಲ್ಲಿ ಪ್ರಮುಖವಾದ ಪಾತ್ರವನ್ನು ವಹಿಸುತ್ತಿದೆ ಎಂಬುದನ್ನು ಹೊಸದಾಗಿ ಹೇಳಬೇಕಾದ ಅಗತ್ಯವಿಲ್ಲ. ಕಾರಂತರ ಕಾದಂಬರಿಗಳನ್ನು ಕುರಿತು, ಹೊಸನಿಟ್ಟಿನ ಅಧ್ಯಯನವೊಂದು ನಡೆದಿರುವುದು ಬಹುಶಃ ಇಲ್ಲಿಯೇ.

ಈ ಕೃತಿಯ ಅನುಬಂಧವಾಗಿ ಕೆಲವು ಅಧ್ಯಕ್ಷ ಭಾಷಣಗಳನ್ನು ಕೊಡಲು ಸಾಧ್ಯವಾಗಿದೆ—ಅದೂ 'ಶೂದ್ರ' ಪತ್ರಿಕೆಯ ಶ್ರೀನಿವಾಸ್ ಅವರ ಪ್ರಯತ್ನದಿಂದ. ಕೆಲವು ಪ್ರಬಂಧಗಳನ್ನು ಕುರಿತು ಎದ್ದ ಪ್ರಶ್ನೋತ್ತರಗಳನ್ನೂ ಇದರ ಜತೆಗೆ ಕೊಡಲಾಗಿದೆ.

ಇಂದಿನ ಕನ್ನಡ ಸಾಹಿತ್ಯದಲ್ಲಿ ಮಾತ್ರವಲ್ಲ, ಇಡೀ ಭಾರತೀಯ ಸಾಹಿತ್ಯದಲ್ಲಿಯೆ, ಅನನ್ಯ ವ್ಯಕ್ತಿತ್ವ ಉಳ್ಳ ಕಾರಂತರ ಕಾದಂಬರಿಗಳನ್ನು ಕುರಿತ ಈ ಒಂದು ವಿಚಾರ ಸಂಕಿರಣವನ್ನು ವ್ಯವಸ್ಥೆಗೊಳಿಸಲು ನೆರವು ನೀಡಿದ ಬೆಂಗಳೂರು ವಿಶ್ವವಿದ್ಯಾಲಯಕ್ಕೆ, ಈ ಸಂಕಿರಣದಲ್ಲಿ ಭಾಗವಹಿಸಿ, ಅನಂತರ ಲೇಖನಗಳನ್ನು ಪರಿಷ್ಕರಿಸಿಕೊಟ್ಟ ಸಾಹಿತಿ ಮಿತ್ರರಿಗೆ, ಅಧ್ಯಕ್ಷತೆ ವಹಿಸಿ ನಡೆಯಿಸಿಕೊಟ್ಟ ಹಿರಿಯ ಸಾಹಿತಿಗಳಿಗೆ, ಈ ಕೃತಿಯನ್ನು ಸೊಗಸಾಗಿ ಪ್ರಕಟಿಸಿರುವ ಪ್ರಸಾರಾಂಗದ ಕಾರ್ಯನಿರ್ವಾಹಕ ನಿರ್ದೇಶಕರಾದ ಶ್ರೀ ಕೆ. ಸಿ. ಶಿವಪ್ಪನವರಿಗೆ, ಈ ಕೃತಿಯ ಕರಡು ತಿದ್ದುವ ಕೆಲಸವನ್ನು ನಿರ್ವಹಿಸಿದ ಸಂಶೋಧನ ಸಹಾಯಕರಾದ ಎಸ್. ಎನ್. ರೇಣುಕಾರಾಧ್ಯ ಅವರಿಗೆ ನಾನು ಕೃತಜ್ಞ ನಾಗಿದ್ದೇನೆ.

ಮಾರ್ಚಿ 1983

ಜಿ. ಎಸ್. ಶಿವರುದ್ರಪ್ಪ
ಕನ್ನಡ ಅಧ್ಯಯನ ಕೇಂದ್ರ
ಬೆಂಗಳೂರು ವಿಶ್ವವಿದ್ಯಾಲಯ

## ಪ್ರಕಾಶಕರ ಮಾತು

ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸುವ ಸದುದ್ದೇಶದಿಂದ ಬೆಂಗಳೂರು ವಿಶ್ವವಿದ್ಯಾಲಯದ ಪ್ರಸಾರಾಂಗ ಪಠ್ಯ ಹಾಗೂ ಪಠ್ಯೇತರ ಕೃತಿಗಳನ್ನು ಪ್ರಕಟಿಸುವುದರ ಜೊತೆಗೆ ಇತರ ವಿಷಯದಲ್ಲಿ ಪ್ರಸಿದ್ಧರಾದ ವಿದ್ವಾಂಸರಿಂದ ಗ್ರಂಥಗಳನ್ನು ಸಿದ್ಧಪಡಿಸಿ ಪ್ರಕಟಿಸುವ ಕಾರ್ಯವನ್ನು ನಿರ್ವಹಿಸುತ್ತಿದೆ. ಆಧುನಿಕ ಕನ್ನಡ ಸಾಹಿತ್ಯದ ಆವರಣಕ್ಕೆ ಆಗತ್ಯವಾದ ಹಾಗೂ ಜನಸಾಮಾನ್ಯರಿಗೆ ಜ್ಞಾನವನ್ನು ನೀಡಬಲ್ಲ ಸಾಹಿತ್ಯ, ಕಲೆ, ವಿಜ್ಞಾನ, ತತ್ವಶಾಸ್ತ್ರ, ಚರಿತ್ರೆ, ಧರ್ಮ, ನೀತಿ, ಸಂಸ್ಕೃತಿ, ಜಾನಪದ, ಸಾಮಾಜಿಕ ಹಾಗೂ ಮಾನವಿಕಶಾಸ್ತ್ರ ಮುಂತಾದ ವಿಷಯಗಳ ಮೇಲೆ ಪ್ರಸಾರಾಂಗವು ಈಗಾಗಲೇ ಅನೇಕ ಹೊತ್ತಿಗೆಗಳನ್ನು ಪ್ರಕಟಿಸಿದೆ. ಬರಲಿರುವ ವರ್ಷಗಳಲ್ಲಿ ಇಂಥ ಹಲವಾರು ವಿಷಯಗಳ ಮೇಲೆ ಮಹತ್ತರವಾದ ಹೊತ್ತಿಗೆಗಳನ್ನು ಪ್ರಕಟಿಸಬೇಕೆಂಬ ಉದ್ದೇಶವನ್ನು ಪ್ರಸಾರಾಂಗ ಹೊಂದಿದೆ.

'ಕಾದಂಬರಿಕಾರರಾಗಿ ಕಾರಂತ' ಈ ದಿಕ್ಕಿನಲ್ಲಿ ಕನ್ನಡ ವಿಮರ್ಶನಾ ಸಾಹಿತ್ಯ ಕ್ಷೇತ್ರಕ್ಕೊಂದು ವಿಶಿಷ್ಟ ಕೃತಿ. ಕಳೆದ ವರ್ಷ ಕನ್ನಡ ಅಧ್ಯಯನ ಕೇಂದ್ರವು ಕಾರಂತರನ್ನು ಕುರಿತ ವಿಚಾರ ಸಂಕಿರಣವನ್ನು ಏರ್ಪಡಿಸಿತ್ತು. ಈ ಸಂಕಿರಣದಲ್ಲಿ ಮಂಡಿಸಲಾದ ಲೇಖನಗಳ ಸಂಕಲನವೇ ಈ ಕೃತಿ. ಕಾರಂತರ ಕಾದಂಬರಿಗಳ ನೆಲೆ-ಬೆಲೆಯನ್ನು ಕುರಿತು ಈ ಪ್ರಬಂಧಗಳಲ್ಲಿ ಸುದೀರ್ಘವಾಗಿ ವಿವೇಚಿಸಲಾಗಿದೆ. ಈ ಮೌಲಿಕ ಕೃತಿಯನ್ನು ಸಿದ್ಧಪಡಿಸಿ, ಪ್ರಸಾರಾಂಗದ ಪ್ರಕಟಣೆಗೆ ಅನುವುಮಾಡಿಕೊಟ್ಟ ಕನ್ನಡ ಅಧ್ಯಯನ ಕೇಂದ್ರ ಮಾಲೆಯ ಪ್ರಧಾನ ಸಂಪಾದಕರಾದ ಡಾ॥ ಜಿ. ಎಸ್. ಶಿವರುದ್ರಪ್ಪನವರಿಗೆ ವಿಶ್ವವಿದ್ಯಾಲಯದ ಪರವಾಗಿ ನಾನು ತುಂಬ ಆಭಾರಿ. ಈ ಕೃತಿಯ ಪ್ರಕಟಣೆಯಲ್ಲಿ ತುಂಬು ಹೃದಯದಿಂದ ಸಹಕರಿಸಿದ ಎಲ್ಲ ಲೇಖಕರಿಗೆ ನನ್ನ ಹಾರ್ದಿಕ ವಂದನೆಗಳು. ಈ ಕೃತಿಯನ್ನು ಸುಂದರವಾಗಿ ಮುದ್ರಿಸಿದ ವಿಶ್ವವಿದ್ಯಾಲಯ ಮುದ್ರಣಾಲಯದ ಸಿಬ್ಬಂದಿ ಮಿತ್ರರಿಗೆ ಕೃತಜ್ಞತೆಗಳು.

ಕೆ. ಸಿ. ಶಿವಪ್ಪ
ನಿರ್ದೇಶಕ (ಕಾರ್ಯನಿರ್ವಾಹಕ)
ಪ್ರಸಾರಾಂಗ

ಪರಿವಿಡಿ

# ಕಾದಂಬರಿಕಾರರಾಗಿ ಕಾರಂತರು : ಪ್ರಾಸ್ತಾವಿಕ

ಎಸ್. ಎಲ್. ಭೈರಪ್ಪ

ಶೀರ್ಷಿಕೆಯೇ ಸೂಚಿಸುವಂತೆ ಕಾರಂತರಿಗೆ ಇತರ ಆಯಾಮಗಳೂ ಇವೆ. ಒಬ್ಬ ವ್ಯಕ್ತಿಯ ಪ್ರಧಾನ ಕೊಡುಗೆಯನ್ನು ಗಮನಿಸಿ ನಾವು ಆತನಿಗೆ ಶೀರ್ಷಿಕೆ ಕೊಡುತ್ತೇವೆ. ಯಕ್ಷಗಾನದ ಪರಿಷ್ಕಾರಕ ಕಾರಂತ, ಸಣ್ಣ ಕಥೆಗಾರ ಕಾರಂತ, ಪ್ರಬಂಧಕಾರ ಕಾರಂತ, ನಾಟಕಕಾರರ ಕಾರಂತ, ನೃತ್ಯಕಾರ ಕಾರಂತ, ಚಲನಚಿತ್ರ ನಿರ್ದೇಶಕ ಕಾರಂತ, ಪ್ರವಾಸ ಕಥನಕಾರ ಕಾರಂತ, ಕಲಾವಿಮರ್ಶಕ ಕಾರಂತ, ವಿಜ್ಞಾನ ಗ್ರಂಥಕರ್ತೃ ಕಾರಂತ, ವಿದ್ಯಾ ಕ್ಷೇತ್ರದಲ್ಲಿ ಪ್ರಯೋಗಕಾರ ಕಾರಂತ—ಹೀಗೆ ಅವರ ಕ್ರಿಯಾ ವಲಯ ಹಲವು ಹತ್ತು ಬಗೆಯದು. ಜೀವನಾನುಭವವೂ ಅಷ್ಟೆ, ಇವೆಲ್ಲಕ್ಕಿಂತ ಹೆಚ್ಚಿನದು. ಜೀವನಾನುಭವವನ್ನು ವಿಸ್ತರಿಸಿಕೊಳ್ಳಬೇಕೆಂಬ, ಆಳವಾಗಿಸಿಕೊಳ್ಳಬೇಕೆಂಬ ಅವರ ಪ್ರಯತ್ನವು ಸತತವಾದುದು, ಶ್ರದ್ಧಾಪೂರ್ಣವಾದುದು. ಈ ದೃಷ್ಟಿಯಿಂದ ಅವರು ಇಂದಿನ ಕನ್ನಡ ಸಾಹಿತ್ಯದಲ್ಲಿ ಮಾತ್ರವಲ್ಲ, ಇಡೀ ಭಾರತೀಯ ಸಾಹಿತ್ಯ ವಿಸ್ತಾರದಲ್ಲಿ ಅನನ್ಯರು. ಕಾರಂತರಂತಹ ವ್ಯಕ್ತಿಯನ್ನು ಆಧುನಿಕ ಭಾರತೀಯ ಸಾಹಿತ್ಯದ ಯಾವ ಭಾಷೆಯಲ್ಲೂ ನಾನು ಕೇಳರಿಯೆ.

ನಮ್ಮಲ್ಲಿ ಒಂದು ಪ್ರಧಾನ ಪ್ರಕಾರದಲ್ಲಿ ಬರೆಯುವುದರ ಜೊತೆಗೆ ಇತರ ಪ್ರಕಾರಗಳಲ್ಲೂ ಕೈ ಆಡಿಸಿರುವ ಲೇಖಕರಿದ್ದಾರೆ. ಮೂಲತಃ ಕವಿಯಾದ ಬೇಂದ್ರೆಯವರು ನಾಟಕ, ಕಥೆ, ಹರಟೆ, ವಿಮರ್ಶೆ, ದರ್ಶನ ಮೊದಲಾದುವುಗಳನ್ನು ಬರೆದಿದ್ದಾರೆ. ಪುಟ್ಟಪ್ಪನವರು ಕಾದಂಬರಿ, ಜೀವನಚಿತ್ರ, ನಾಟಕ ಮೊದಲಾದುವುಗಳನ್ನು ಬರೆದಿದ್ದಾರೆ. ಹೀಗೇ ಮಾಸ್ತಿ, ದೇವುಡು, ಅನಕೃ, ತರಾಸು, ಶ್ರೀರಂಗ ಮೊದಲಾದವರು ಬೇರೆ ಬೇರೆ ಪ್ರಕಾರಗಳಲ್ಲಿ ಕೆಲಸಮಾಡಿದರೂ ಯಾವುದೋ ಒಂದು ವಿಶಿಷ್ಟ ಪ್ರಕಾರದಿಂದ ತಮ್ಮ ಎತ್ತರವನ್ನು ಮುಟ್ಟಿರುವವರು. ಈ ಎಲ್ಲ ಲೇಖಕರೊಡನೆ ಹೋಲಿಸಿದಾಗ ಕೂಡ ಕಾರಂತರು ತುಂಬ ಎತ್ತರದವರು ಎನ್ನಿಸುತ್ತದೆ.

ಈ ಹಿನ್ನೆಲೆಯನ್ನು ಗಮನಿಸದಿದ್ದರೆ ಕಾರಂತರ ಕಾದಂಬರಿಗಳ ಪ್ರೇರಣೆಯು ಅರ್ಥವಾಗುವುದಿಲ್ಲ. ಜೀವನವನ್ನು ಅರಿಯುವ, ಅನುಭವಿಸುವ, ಉತ್ತಮಗೊಳಿಸುವ ಅವರ ಬಯಕೆ ಪ್ರಯತ್ನಗಳು ನಿರಂತರವಾದುವು. ಲಲಿತಕಲೆಗಳಲ್ಲಿ ಅವರಿಗಿರುವ ಆಸಕ್ತಿ ಹೆಚ್ಚಿನದು ; ಆದರೆ ವಿಜ್ಞಾನದಲ್ಲಿರುವ ಆಸಕ್ತಿ ಇನ್ನೂ ಹೆಚ್ಚಿನದು. ಇವತ್ತು ಜೀವನವನ್ನು ಕುರಿತು ವಿಜ್ಞಾನದ ಬೇರೆ ಬೇರೆ ಪ್ರಕಾರಗಳು ಏನು ಹೇಳುತ್ತವೋ

ಅದಕ್ಕಿಂತ ಆಚೆಗೆ ಮಾತನಾಡುವುದು ಒಣ ಹರಟೆ ಎಂಬಷ್ಟುಮಟ್ಟಿನ ಶ್ರದ್ಧೆ ಅವರದು. ಹಾಗೆಯೇ ಲಲಿತಕಲೆಯ ವಿವಿಧ ಪ್ರಕಾರಗಳ ಬಗೆಗೆ, ಮಾಧ್ಯಮಗಳ ಸಾಧ್ಯತೆಯ ಬಗೆಗೆ ಅವರಲ್ಲಿ ಅತೀವ ಆಸಕ್ತಿ ಇದೆ. ಸತ್ಯಕ್ಕೆ ಬಂದರೆ ವಿಜ್ಞಾನ, ಭಾವನೆಗೆ ಬಂದರೆ ವಿವಿಧ ಲಲಿತಕಲೆಗಳು ಎಂಬ ಗೆರೆ ಎಳೆದು ಚೊಕ್ಕಗೊಳಿಸಿದ ದೃಷ್ಟಿ ಅವರದು. ಮತಧರ್ಮ, ಅನುಭಾವ ಮೊದಲಾದ ಅತೀಂದ್ರಿಯ ಅಥವಾ ಬುದ್ಧಿಗೆ ಅಗಮ್ಯವಾದ ಅನುಭವವಲಯವನ್ನಾಗಲಿ ಅರಿವಿನ ಮಟ್ಟವನ್ನಾಗಲಿ ಅವರು ನಂಬುವುದಿಲ್ಲ.

ಇಂಥ ಮನೋಧರ್ಮದವರು ಸೃಜನಶೀಲ ಸಾಹಿತಿಯಾದಾಗ ವಾಸ್ತವವಾದಿಯಾಗುವುದು ಸಹಜವೇ. ವಾಸ್ತವವಾದ ಎಂದ ತಕ್ಷಣ ಯಾವ ಜಾತಿಯ ಯಾವ ಬಣ್ಣದ, ಯೂರೋಪಿನಲ್ಲಿ ನಡೆದ ವಾಸ್ತವವಾದೀ ಸಂಪ್ರದಾಯದಲ್ಲಿ ಯಾವುದಕ್ಕೆ ಸಮೀಪವಾದ ವಾಸ್ತವತೆ ಎಂಬ ಹಲವು ಪ್ರಶ್ನೆಗಳು ಸಾಹಿತ್ಯಾಭ್ಯಾಸಿಗಳ ಮನಸ್ಸಿನಲ್ಲಿ ಏಳುವುದು, ಎದ್ದು ಗೊಂದಲ ಹುಟ್ಟಿಸುವುದು ಸಹಜ. ಇಂಥ ವಿಚಾರ ಸಂಕಿರಣದಲ್ಲಿ ಇವರ ಮೇಲೆ ಚರ್ಚೆ ನಡೆಯುವುದೂ ಪ್ರಯೋಜನಕಾರಿಯೇ. ಆದರೆ ಇಲ್ಲಿ ನಾನು ಹೇಳಬೇಕೆಂದಿರುವುದೇನೆಂದರೆ : ಕಾರಂತರ ಕಾದಂಬರಿ ಸೃಷ್ಟಿಯ ಪ್ರಥಮ ಅವಧಿಯಲ್ಲಿ ಬಂದ, ಅವರನ್ನು ನಿಜವಾಗಿ ಕಾದಂಬರಿಕಾರರನ್ನಾಗಿಸಿದ "ಮರಳಿ ಮಣ್ಣಿಗೆ", "ಬೆಟ್ಟದ ಜೀವ", "ಕುಡಿಯರ ಕೂಸು", "ಚೋಮನದುಡಿ"ಗಳ ಗುಣ ಲಕ್ಷಣಗಳಿಗೂ ಆ ಅವಧಿಗೆ ಮುನ್ನ ಮತ್ತು ಆ ಅವಧಿಯಲ್ಲಿ ಕನ್ನಡದಲ್ಲಿ ಬಂದ ಕಾದಂಬರಿಗಳ ಗುಣಲಕ್ಷಣಗಳಿಗೂ ಇರುವ ವ್ಯತ್ಯಾಸವನ್ನು ಹೋಲಿಸಿದರೆ, ವಾಸ್ತವವಾದಿ ನೆಲೆಗಟ್ಟಿನ ಪ್ರಧಾನ ಲೇಖಕರಾಗಿ ಬೆಳೆದ ಪ್ರಥಮ ಕಾದಂಬರಿಕಾರರೆಂದು ಕಾರಂತರನ್ನು ಕರೆಯಬೇಕಾಗುತ್ತದೆ. ಗಳಗನಾಥ, ವೆಂಕಟಾಚಾರ್ಯ ಮೊದಲಾದವರು ಕಾರಂತರಿಗಿಂತ ಹಿಂದಿನವರು. ಅನಕೃ, ದೇವುಡು ಮೊದಲಾದವರು ಕಾರಂತರ ಸಮಕಾಲೀನರು. ಈ ಹಿನ್ನೆಲೆಯಲ್ಲಿ ನಾವು ಆಗಿನ ಕಾರಂತರ ಕೃತಿಗಳನ್ನು ನೋಡಬೇಕು. ಪ್ರತಿವಾಕ್ಯದಲ್ಲೂ ಅನುಭವದ ತೂಕ, ಪ್ರಾದೇಶಿಕ ಸೊಗಡು, ನಾಟಕೀಯತೆಯು ಎಲ್ಲೂ ತಲೆ ಹಾಕದ ನಿರೂಪಣೆ, ಭಾವನಾಭಿವ್ಯಕ್ತಿಯ ಸಂಯಮ, ಪ್ರಕೃತಿ ಮತ್ತು ಬಾಹ್ಯವಿವರಗಳ ವರ್ಣನೆಗಳು ಇವರ ಕಾದಂಬರಿಗಳಿಗೆ ಗಟ್ಟಿ ಅನುಭವದ ನೆಲಗಟ್ಟಾಗಿ ನಿಂತವು. ಇಂತಹ ನಿರೂಪಣಾ ವಿಧಾನದಲ್ಲಿ ಹಲವು ಕಾದಂಬರಿಗಳನ್ನು ರಚಿಸಿದ ಕಾರಂತರು ಕ್ರಮೇಣ ಬೌದ್ಧಿಕತೆ ಹಾಗೂ ವಿಚಾರಗಳು ಒಡೆದು ಕಾಣುವಂತಹ ಕೃತಿಗಳನ್ನು ಬರೆಯಲು ತಿರುಗಿದರು. ಈ ತಿರುವಿನ ಕಾರಣವನ್ನು ನಾವು ಹುಡುಕಿ ಗುರುತಿಸುವುದು ಅವಶ್ಯಕ. ತಮ್ಮ ಬದುಕಿನ ಬಗೆಗೆ ಅಷ್ಟೊಂದು ವಿವರವಾಗಿ ಬರೆದಿರುವ ಈ ಲೇಖಕರು ತಮ್ಮ ಕೃತಿರಚನೆಯ ವಿಧಾನ, ಅವುಗಳ ಸ್ವರೂಪ, ತಂತ್ರ, ಅವುಗಳ ಮಾರ್ಪಾಟನ್ನು ಕುರಿತು ತಮ್ಮ ಮನಸ್ಸಿನಲ್ಲಿ ನಡೆದ ಆಲೋಚನೆಗಳನ್ನು ಬರೆದಿರುವುದು ನನಗೆ ತಿಳಿದಿಲ್ಲ. ಆದರೆ ಶುದ್ಧ ಜೀವನಚಿತ್ರಣದ ವಾಸ್ತವ ಜಾತಿಯ ಕಾದಂಬರಿಗಳಿಂದ ಅವರು

ವಿಚಾರಾತ್ಮಕ ಕೃತಿಗಳ ರಚನೆಗೆ ಹೇಗೆ, ಏಕೆ ತಿರುಗಿದರು ಎಂಬುದನ್ನು ನಾವು ಊಹಿಸಬಹುದು. ನೇರ ನಿರೂಪಣಾ ವಿಧಾನದಲ್ಲಿ ಒಬ್ಬ ಲೇಖಕನು ಎಷ್ಟು ಕೃತಿಗಳನ್ನು ಬರೆಯಬಹುದು ? ಏಳೆಂಟು, ಹತ್ತು ಕಾದಂಬರಿ ಬರೆದು ಮುಗಿಸುವುದರಲ್ಲಿ ಎಷ್ಟು ವಿಶಾಲಾನುಭವದ ಲೇಖಕನಾದರೂ ತನ್ನ ಮೂಲಧನವನ್ನು ಕರಗಿಸಿ ಮುಗಿಸಿಕೊಂಡಿರುತ್ತಾನೆ. ಅದೇ ವಿಧಾನದಲ್ಲಿ ಇನ್ನೂ ಬರೆಯಹೋದರೆ ಹಿಂದಿನದರ ಪುನರಾವರ್ತನೆಯಾಗುತ್ತದೆ. ಬರವಣಿಗೆಯ ವಿಧಾನವನ್ನು ಬದಲಿಸಿಕೊಂಡಾಗ ಮಾತ್ರ ಅವನ ಬರವಣಿಗೆಯು ಜೀವಂತವಾಗಿ ಮುಂದೆ ಸಾಗಬಲ್ಲದು. ಕನ್ನಡದ ಕೆಲವು ಪ್ರಸಿದ್ಧ ಕಾದಂಬರಿಕಾರರ ಬೆಳವಣಿಗೆಯು ಒಂದು ಹಂತದ ನಂತರ ನಿಂತುಹೋದ ಕಾರಣವು ಇದೇ ಎಂದು ನನಗೆ ಎನ್ನಿಸುತ್ತದೆ. ಬರವಣಿಗೆಯ ವಿಧಾನವನ್ನು ಬದಲಿಸುವುದೆಂದರೆ ಬರೀ ತಂತ್ರದ ಬದಲಾವಣೆಯಲ್ಲ. ತಂತ್ರದ ಬದಲಾವಣೆಯು ಲೇಖಕನ ವಿಚಾರದ, ಜೀವನದೃಷ್ಟಿಯ, ಸಂವೇದನೆಯ, ಆ ಮೂಲಕ ಭಾಷೆಯ ಬದಲಾವಣೆಯ ಅಗತ್ಯವಾಗಿ ಬರಬೇಕು. ಹೊಸ ದೃಷ್ಟಿಯಿಂದ ನೋಡಿದಾಗ ಈಗಾಗಲೇ ಬರೆದು ಮುಗಿಸಿರುವ ಹಳೇ ಅನುಭವದ್ರವ್ಯವೇ ಹೊಸವಸ್ತುವಾಗಿ ಕಾಣುತ್ತದೆ. ಅದಕ್ಕೆ ತಕ್ಕ ಪರಿಕರ ಬದಲಾವಣೆಯಿಂದ ಹೊಸ ಕಾದಂಬರಿಯ ಹುಟ್ಟು ಸಾಧ್ಯವಾಗುತ್ತದೆ. ಕಾರಂತರ ಬರವಣಿಗೆಗೆ ಎರಡನೇ ಮಜಲು ಬಂದದ್ದನ್ನು ಈ ಹಿನ್ನೆಲೆಯಲ್ಲಿ ನಾವು ಅರ್ಥ ಮಾಡಿಕೊಳ್ಳಬಹುದು. ಅವರಲ್ಲಿ ಮೊದಲಿನಿಂದಲೂ ಇದ್ದ ವಿಚಾರಗಳು ಈ ಘಟ್ಟದಲ್ಲಿ ಮಾರ್ಪಾಟಾಗಿ, ಹೊಸ ಜೀವನದೃಷ್ಟಿಯೇ ಹುಟ್ಟಿತೋ ಅಥವಾ ಈ ಹಿಂದೆ ಸುಪ್ತವಾಗಿ ಸಂಪೂರ್ಣ ಮರೆಯಲ್ಲಿದ್ದ ದೃಷ್ಟಿಯು ಇಲ್ಲಿಂದ ಮುಂದೆ ಸ್ಪಷ್ಟ ಬೌದ್ಧಿಕ ರೂಪದಲ್ಲಿ ಒಡೆದು ನಿಂತವೋ ಎಂಬುದು ಕೂಡ ವಿಚಾರಿಸಬೇಕಾದ ಅಂಶ. ಆಂತ್ರೋಪಾಲಜಿಯ ಆಸ್ಥೆ ಅವರಿಗೆ ಮೊದಲಿನಿಂದಲೂ ಇತ್ತು. "ಬಾಲಪ್ರಪಂಚ"ದ ಕಾಲದಲ್ಲೇ ವಿಜ್ಞಾನದ ಆಸ್ಥೆಯುಳ್ಳವರಾಗಿದ್ದರೂ ಅವರು ಭೌತವಿಜ್ಞಾನ ಮತ್ತು ತಂತ್ರವಿಜ್ಞಾನಗಳ ವಿವರವಾದ ಅಭ್ಯಾಸವನ್ನು "ವಿಜ್ಞಾನ ಪ್ರಪಂಚ"ದ ರಚನೆಯ ಕಾಲಕ್ಕೆ ಮಾಡಿದರು. ತತ್ವಶಾಸ್ತ್ರದ ಸೂಕ್ಷ್ಮ ವ್ಯಾಸಂಗವನ್ನು ಅವರು ಮಾಡಿದಂತೆ ತೋರುವುದಿಲ್ಲ. ಒಟ್ಟಿನಲ್ಲಿ ಅವರ ವೈಚಾರಿಕತೆಯ ಆಧಾರವು ವಿಜ್ಞಾನದ ವಿಧಿವಿಧಾನಗಳನ್ನು ಅನುಸರಿಸುತ್ತದೆ.

ನಾನು ಆರಂಭದಲ್ಲೇ ಗಮನಿಸಿದಂತೆ ಕಲೆಯ ಹಲವಾರು ಪ್ರಕಾರಗಳಲ್ಲಿ ಕಾರಂತರಿಗೆ ಪರಿಶ್ರಮವಿದೆ. ಅವರು ಸ್ವತಃ ನೃತ್ಯಮಾಡಿ ಬಲ್ಲರು, ಹಾಡಿ ಬಲ್ಲರು ; ಚಿತ್ರ ಬರೆದು ಬಲ್ಲರು, ಯಕ್ಷಗಾನ ಕುಣಿದು, ಕುಣಿಸಿ ಬಲ್ಲರು, ವಾಸ್ತುಶಿಲ್ಪವನ್ನು ತುಲನಾತ್ಮಕವಾಗಿ ನೋಡಿ ಬಲ್ಲರು. ಮುದ್ರಣ ಮೊದಲಾದ ತಂತ್ರ ಕುಶಲತೆಗಳಲ್ಲಿ ಕೂಡ ಅವರಿಗೆ ಅತ್ಯಾಧುನಿಕ ಸಂಗತಿಗಳ ಮಾಹಿತಿ ಇದೆ. ಇದು ಅವರ ಕಾದಂಬರಿ ರಚನೆಗೆ ದೊರೆತ ಅನುಕೂಲವೂ ಹೌದು. "ಮೊಗಪಡೆದ ಮನ"ದಂತಹ ಒಂದೊಂದು

ಕೃತಿಗಳ ರಚನೆಗೆ ವಾಸ್ತವಾನುಭವ ಮತ್ತು ಪರಿವೀಕ್ಷಣೆಗಳನ್ನು ಈ ಪರಿಶ್ರಮದ ಒಂದೊಂದು ಮುಖವೂ ಕೊಟ್ಟಿತು. ಈ ಎಲ್ಲ ಪರಿಶ್ರಮಗಳ ಒಟ್ಟು ಪರಿಣಾಮ ವನ್ನು ಹೀರಿಕೊಂಡು ಕಾದಂಬರಿಕಾರರಾಗಿ ಬೆಳೆಯುವ ಪ್ರಯತ್ನವನ್ನು ಅವರು ಮಾಡಿದಂತೆ ಕಾಣುವುದಿಲ್ಲ. ಸಂಗೀತದ ಪರಿಶ್ರಮವುಳ್ಳ ಕಾದಂಬರಿಕಾರನು ತನ್ನ ಕೃತಿಯಲ್ಲಿ ಸಂಗೀತದ ಹದವನ್ನೇ ಸಾಧಿಸಲು ಯತ್ನಿಸುವುದು ಸಹಜ. ಚಿತ್ರಕಲೆಯ ಪರಿಶ್ರಮವುಳ್ಳವನು ಚಿತ್ರಕಲೆಯಲ್ಲಿ ನಡೆಯುವ ಪ್ರತಿಯೊಂದು ಪ್ರಯೋಗವನ್ನೂ ಗಮನಿಸಿ ತನ್ನ ಮಾಧ್ಯಮ ಮತ್ತು ಪ್ರಕಾರವಾದ ಕಾದಂಬರಿಯಲ್ಲಿ ಸಾಧಿಸಿಕೊಳ್ಳಲು ಪ್ರಯತ್ನಿಸುತ್ತಾನೆ. ಹೀಗೆ ಒಂದೊಂದು ವಿಧವಾದ ಕಲಾವಿದನೂ ಇತರ ಕಲೆಗಳ ಮೂಲಾಂಶಗಳನ್ನು ನಿಕಟವಾಗಿ ನಿರೀಕ್ಷಿಸುತ್ತಾ ಅವುಗಳ ಸಾರವನ್ನು ಹೀರಿ ತನ್ನ ಕಲೆಯ ಬೆಳವಣಿಗೆಗೆ ಬಳಸಿಕೊಳ್ಳುವುದು ಆಧುನಿಕ ಕಲೆಯ ಪ್ರಮುಖ ಲಕ್ಷಣವಾಗಿದೆ. ಆಧುನಿಕ ಕಲೆಯ ಎಲ್ಲ ರೂಪಗಳೂ ಇಂತಹ ಪರಸ್ಪರ ಕ್ರಿಯೆ, ಪ್ರಕ್ರಿಯೆ, ಪ್ರಚೋದನೆ ಗಳಿಂದ ಹೊಸ ಹೊಸ ಸ್ವರೂಪ ಪಡೆಯುತ್ತಿವೆ. ಆದರೆ ಕಾರಂತರು ತಮ್ಮ ಅನುಭವದ ಒಂದೊಂದು ಮುಖದ ಅಭಿವ್ಯಕ್ತಿಗೂ ಒಂದೊಂದು ಪ್ರಕಾರವನ್ನು ಆಶ್ರಯಿಸು ವಂತೆ ಕಾಣುತ್ತದೆ. ಪುರಾಣ ಪ್ರಮಾಣದ ಪಾತ್ರಗಳು, ಮಾಯಾ ಮಂತ್ರಗಳನ್ನು ಒಪ್ಪಿಕೊಳ್ಳುವಂತಹ ಭಾವನೆಯ ಒತ್ತಡ ಬಂದಾಗ ಅವರಿಗೆ ಯಕ್ಷಗಾನದ ಆಶ್ರಯ ಸಿಕ್ಕುತ್ತದೆ. ಶುದ್ಧ ಭಾವನೆಯ ಅಭಿವ್ಯಕ್ತಿಗೆ ಸಂಗೀತದ ನೆರವಿದೆ. ಹೀಗೆಯೇ ಚಿತ್ರಕಲೆ ಮೊದಲಾದ ಅಧ್ಯಯನವೂ ಅವರ ಒಂದು ಮುಖದ ಅಭಿವ್ಯಕ್ತಿಗೆ ಸಹಾಯಕವಾಗು ತ್ತದೆ. ಸಾಹಿತ್ಯಕ್ಕೆ ಬಂದಾಗ ಮಾತ್ರ ಅವರು ವಾಸ್ತವ ನೆಲೆಗಟ್ಟನ್ನು ಬಿಟ್ಟು ಮೇಲೆ ಹಾರಲು ಸಿದ್ಧರಾಗುವುದಿಲ್ಲ. ಇದರಿಂದ ಕಾದಂಬರಿಯ ವ್ಯಾಪ್ತಿಯು ವಿಸ್ತರಿಸಿಕೊಳ್ಳು ವುದಿಲ್ಲ. ಒಂದು ಕಲ್ಲು, ಒಂದು ಸ್ಥಳವನ್ನು ಮುಟ್ಟಿ ಅದರೊಡನೆ ಬೆರೆತ ಇತಿಹಾಸ ವನ್ನೆಲ್ಲ ಕಂಡು ಹೇಳುವ ಮೂಕಜ್ಜಿಯ ಶಕ್ತಿಯನ್ನು ಕೂಡ ಅವರು ಕಾದಂಬರಿಯ ಬಾಹ್ಯ ತಂತ್ರವಾಗಿ ಎಂದರೆ ಆದಿವಾಸಿ ಕಾಲದಿಂದ ಇದುವರೆಗಿನ ಇತಿಹಾಸದಲ್ಲಿ ತಮಗೆ ಬೇಕಾದ ಭಾಗಗಳ, ಅಂಶಗಳನ್ನು ತೋರಿಸುವ ತಾಂತ್ರಿಕ ಸಾಧನವಾಗಿ ಬಳಸಿ ಕೊಂಡಿದ್ದಾರೆ. ಆದರೆ ಅಂತಹ ಅದ್ಭುತ ದೃಷ್ಟಿಶಕ್ತಿಯುಳ್ಳ ಮೂಕಜ್ಜಿಯ ಮನಸ್ಸು ಬುದ್ಧಿ,ಅಂಥ ಮನೋಬುದ್ಧಿಗಳ ತಳಮಳ, ಅದರಿಂದುದ್ಭವಿಸಬಹುದಾದ ಭಾವವೆಂಥದು ಎಂಬುದರ ಕಡೆಗೆ ಅವರ ಗಮನ ಹರಿಯುವುದಿಲ್ಲ. ಮುದುಕಿಯ ವಾಸ್ತವಾತೀತ ಅತೀಂದ್ರಿಯ ಶಕ್ತಿಯನ್ನು ತಂತ್ರದ ಮಟ್ಟಿಗೆ ಮಾತ್ರ ಒಪ್ಪಿಕೊಂಡ ಅವರು ತಂತ್ರವು ಕಾದಂಬರಿಯ ದ್ರವ್ಯದ ಸಂಪೂರ್ಣ ಧ್ವನಿಗೆ ಒಳಪಡಬೇಕೆಂಬುದನ್ನೇಕೆ ಗಮನಿಸಲಿಲ್ಲ? ಈ ದೃಷ್ಟಿಯಿಂದ ಇತ್ತೀಚೆಗೆ ಬಂದ The Flounder ಕಾಂದಬರಿಯಲ್ಲಿ ಗುಂಟರ್ ಗ್ರಾಸನು ಸರ್ವಜ್ಞವಾದ ಮೀನಿನ ಪಾತ್ರವನ್ನು ಹೇಗೆ ಬಳಸಿಕೊಳ್ಳುತ್ತಾನೆಂಬುದನ್ನು ನಾವು ಹೋಲಿಸಬೇಕು. ಗುಂಟರ್ ಗ್ರಾಸನು ಸರ್ವಜ್ಞ ಶಕ್ತಿಯ ಮೀನಿನ ಪಾತ್ರವನ್ನು ಸೃಷ್ಟಿಸುವುದು, ಅದನ್ನು ವಿಚಾರಣೆಗೆ ಒಳಪಡಿಸುವುದು ತಂತ್ರಸೌಲಭ್ಯಕ್ಕಾಗಿಯೇ. ಆದರೆ

ಈ ಸೌಲಭ್ಯವು ಕೊಡುವ ಎಲ್ಲ ಅರ್ಥತರಂಗಗಳನ್ನೂ ಅವನು ಸ್ವೀಕರಿಸಿ ಕಾದಂಬರಿಯ ಅರ್ಥಸಮೃದ್ಧಿಯನ್ನು ಹೆಚ್ಚಿಸುತ್ತಾನೆ. ಮೂಕಜ್ಜಿಯ ಅತೀಂದ್ರಿಯ ಶಕ್ತಿಯನ್ನು ಕೇವಲ ಒಂದು ಇತಿಹಾಸ ಪುಸ್ತಕದ ಬದಲಿಗೆ ಉಪಯೋಗಿಸಿಕೊಳ್ಳುವ ಕಾರಂತರಿಗೆ ಅದರ ಉಳಿದ ಸಾಧ್ಯತೆಗಳು ಕಾಣುವುದೇ ಇಲ್ಲವಾಗಿ ಅವರ ಈ ಕಾದಂಬರಿಯು ಬಡಕಲು ಹಂದರವಾಗಿದೆ. ಇದರ ಕಾರಣವು ಅವರ ವಾಸ್ತವಿಕಪ್ರಜ್ಞೆ ಮತ್ತು ಅವರ ಸಾಹಿತ್ಯಪ್ರಜ್ಞೆಯನ್ನು ಆವರಿಸಿಕೊಂಡಿರುವ ವಿಜ್ಞಾನದ ವಿಶ್ವಾಸವೇ ಆಗಿದೆ. ಆರಂಭದ ದೆಶೆಯಲ್ಲಿ ಅವರಿಗೆ ಗಟ್ಟಿ ನೆಲೆಗಟ್ಟಾದ ವಾಸ್ತವಿಕತೆಯ ಸಿಮೆಂಟ್ ಜಗುಲಿಯೇ ಅವರನ್ನು ಕಚ್ಚಿ ಹಿಡಿದುಕೊಂಡಿರುವಂತೆ ಕಾಣುತ್ತದೆ. ಇದನ್ನೇ ಬೇರೆ ಮಾತಿನಲ್ಲಿ ಹೇಳಬೇಕಾದರೆ, ಕಾರಂತರ ಕಾದಂಬರಿಗಳು ಅವರು ಸ್ವೀಕರಿಸಿರುವ ಜ್ಞಾನಮೀಮಾಂಸೆಯ ಮಿತಿಗೆ ಒಳಪಡುತ್ತವೆ.

ಕಾದಂಬರಿಕಾರರಾಗಿ ಕಾರಂತರು ಎಂಬ ಶೀರ್ಷಿಕೆಯನ್ನು ಮತ್ತೆ ಪರಿಶೀಲಿಸಿ ವ್ಯಕ್ತಿ ಕಾರಂತರನ್ನು ಕಾದಂಬರಿಕಾರ ಕಾರಂತರೊಡನೆ ಹೋಲಿಸಿ ನೋಡಬೇಕು. ಜೀವನೋತ್ಸಾಹ, ಜೀವನಶ್ರದ್ಧೆ, ಕುತೂಹಲ, ಕ್ರಿಯಾಶೀಲತೆಗಳಲ್ಲಿ ಮಾತ್ರವಲ್ಲ ನೀತಿನಿಷ್ಠೆಗಳಲ್ಲಿ ಕೂಡ ಕಾರಂತರಂಥವರು ಅತಿ, ಅತಿ ವಿರಳ. ಅವರಂಥ ನೈತಿಕ ಸತ್ತ್ವ, ಆ ಮೂಲಕ ಬರುವ ನಿರ್ಭಯತೆಗಳನ್ನು ಸಾಧಿಸಿಕೊಂಡವರಂತೂ ಇನ್ನೂ ವಿರಳ. ನನಗಂತೂ ಇತ್ತೀಚಿನ ವರ್ಷಗಳಲ್ಲಿ ಜಯಪ್ರಕಾಶ ನಾರಾಯಣ, ಆಚಾರ್ಯ ಕೃಪಲಾನಿ ಇಂಥವರೇ ಕಾರಂತರೊಡನೆ ಹೋಲಿಕೆಗೆ ನಿಲ್ಲಬಲ್ಲವರಾಗಿ ಕಾಣುತ್ತಾರೆ. ಕಾದಂಬರಿಕಾರ ಕಾರಂತರಿಗಿಂತ ವ್ಯಕ್ತಿ ಕಾರಂತರು ದೊಡ್ಡವರು. ಆದರೆ ನಾವು ಸಾಹಿತ್ಯದ ದೃಷ್ಟಿಯಿಂದ ನೋಡುವಾಗ ಈ ದೊಡ್ಡ ವ್ಯಕ್ತಿಯು ಏಕೆ ಬರೆಯುತ್ತಾರೆ? ಬರವಣಿಗೆಯೇ ಅವರ ಕ್ರಿಯಾಶೀಲತೆಯ ಮಾಧ್ಯಮವಾಗಿ ಏಕಿದೆ? ಎಂಬ ಪ್ರಶ್ನೆಗಳು ನಿಲ್ಲುತ್ತವೆ. ಈ ಜೀವನದಿಂದ ತಾನು ಇಷ್ಟೆಲ್ಲ ಪಡೆದಿದ್ದೇನೆ, ಸಾಧ್ಯವಿದ್ದಷ್ಟನ್ನು ಅದಕ್ಕೆ ತಾನು ಸಲ್ಲಿಸಬೇಕು ಎಂಬ ಪ್ರೇರಣೆಯು ಅವರಲ್ಲಿ ಸತತವಾಗಿ ಉದ್ಯುಕ್ತವಾಗಿರುವಂತೆ ತೋರುತ್ತದೆ. ತಮ್ಮ ಭಾಷಣಗಳಲ್ಲಿ ಬರಹಗಳಲ್ಲಿ ಸಮಾಜಕ್ಕೆ ಸಲ್ಲಿಸುವ ಕೆಲಸವನ್ನು ಅವರು ಸಲ್ಲಿಸುತ್ತಲೇ ಇದ್ದಾರೆ. ಸಮಾಜಕ್ಕೆ ಏನುಬೇಕು? ಕನ್ನಡ ನಾಡಿಗೆ ಏನು ಬೇಕು? ಎಂಬ ಬಗೆಗೆ ಇತರರು ಮಾತನಾಡುತ್ತಾರೆ; ಕಾರಂತರು ಮಾಡಿ ತೋರಿಸುತ್ತಾರೆ. ಶಬ್ದಕೋಶದಿಂದ ಹಿಡಿದು ವಿಜ್ಞಾನಕೋಶ ಬಾಲಕೋಶಗಳವರೆಗೆ, ಚಿತ್ರಕಲೆಯಿಂದ ಹಿಡಿದು ಆರ್ಥಿಕ ಸಮೀಕ್ಷೆಯ ಲೇಖನಗಳವರೆಗೆ ಒಂದೇ ಸಮನೆ ಕೊಡುತ್ತಾ ಬಂದಿದ್ದಾರೆ. ಇದೇ ಪ್ರೇರಣೆಯಿಂದಲೇ ಕಾದಂಬರಿಗಳನ್ನೂ ಬರೆಯುತ್ತಿರುವಂತೆ ಕಾಣುತ್ತದೆ. ತುರ್ತುಸ್ಥಿತಿಯಲ್ಲಿ ಅವರು ವಹಿಸಿದ ನಿರ್ಭಯ ಕ್ರಿಯೆ, ಮಾರ್ಗದರ್ಶಕ ನಡತೆ ಮಾಡಿದ ಭಾಷಣಗಳು ಉತ್ತುಂಗ ಮುಟ್ಟಿದವು. ಆದರೆ ಆ ಸ್ಥಿತಿಯ ಮಂಥನದ ರೂಪವಾಗಿ ಬರೆದ ಕಾದಂಬರಿ "ನಾವು ಕಟ್ಟಿದ ಸ್ವರ್ಗ" ಕಲೆಯ ಹದ ಮುಟ್ಟಿದ ಬೌದ್ಧಿಕ

ವಿಚಾರದ ಭಾಷಣರೂಪದ್ದು. ಕಲಾವಿದನಿಗೆ ಜೀವನ ಶ್ರದ್ಧೆ, ನೈತಿಕ ಶ್ರದ್ಧೆ ಬೇಕು, ಆದರೆ ತನ್ನ ಕಲೆಯ ಬಗೆಗೆ ಅದಕ್ಕೂ ಹೆಚ್ಚಿನ ಶ್ರದ್ಧೆ ಬೇಕು. ಜೀವನಶ್ರದ್ಧೆಯೂ ನೈತಿಕ ಶ್ರದ್ಧೆಯ ಒಂದು ಸ್ವರೂಪವೇ. ಇದರ ತೂಕ ಹೆಚ್ಚಾದರೆ ಕಲೆಯು ಕುಂಠಿತ ವಾಗುತ್ತದೆ. ಒಮ್ಮೆ ಬರೆದ ಕೃತಿಯನ್ನು ತಂತ್ರದ ದೃಷ್ಟಿಯಿಂದ, ಸ್ವರೂಪದ ದೃಷ್ಟಿ ಯಿಂದ ಪಾತ್ರವಿನ್ಯಾಸದ ದೃಷ್ಟಿಯಿಂದ, ಮಾಧ್ಯಮದ ಸರ್ವ ಸಾಧ್ಯತೆಗಳ ದೃಷ್ಟಿ ಯಿಂದ ಮತ್ತೆ ಮತ್ತೆ ತಿದ್ದುತ್ತಿದ್ದು, ಅದನ್ನೇ ಮರು ರಚಿಸುವುದು, ಅದರಲ್ಲೇ ಪುನಃ ಪುನಃ ತನ್ಮಯರಾಗಿ ಆಲೋಚಿಸುವುದು—ಹೀಗೆ ಜೀವನದ ಅಂಟಿನಿಂದ ದೂರವಾಗಿ ಕಲೆ ಯನ್ನೇ ಸದ್ಯಸರ್ವಸ್ವವಾಗಿ ಭಾವಿಸುವ ನಿರ್ಲಿಪ್ತತೆ ಕಾರಂತರಿಗೆ ಇದ್ದಿದ್ದರೆ ಸಾಹಿತ್ಯಾ ಸಕ್ತರಿಗೆ ಇನ್ನಷ್ಟು ತೃಪ್ತಿಯಾಗುತ್ತಿತ್ತು.*

---

* ಈ ವಿಚಾರ ಸಂಕಿರಣದ ಉದ್ಘಾಟನೆಯ ಸಂದರ್ಭದಲ್ಲಿ ಆಡಿದ ಮಾತುಗಳು.

# ಕನ್ನಡ ಕಾದಂಬರಿ ಪರಂಪರೆ ಮತ್ತು ಕಾರಂತರು

1

ಡಿ. ಆರ್. ನಾಗರಾಜ್

ಯಾವುದೇ ನಾಡಿನ ಕಾದಂಬರಿಪ್ರಕಾರದ ಪರಂಪರೆಯ ಅಧ್ಯಯನಕ್ಕೆ ಆ ಜನಾಂಗದ ಆಧುನಿಕ ಚರಿತ್ರೆಯ ಒಳಹೆಣಿಗೆಗಳ ಸೂಕ್ಷ್ಮಗ್ರಹಿಕೆ ಇದ್ದೇ ತೀರಬೇಕಾಗುತ್ತದೆ. ಬಹುಶಃ ಯಾವ ಸಾಹಿತ್ಯ ಪ್ರಕಾರವೂ ಸಮಾಜವನ್ನು ಇಷ್ಟರಮಟ್ಟಿಗಿನ ಆಳದಲ್ಲಿ ತಳುಕು ಹಾಕಿಕೊಂಡಿಲ್ಲ. ಹೀಗಾಗಿ, ಕಾದಂಬರಿ ಪ್ರಕಾರದ ಸಮಗ್ರ ತಿಳುವಳಿಕೆಗೆ ಆ ಜನಾಂಗದ ಚರಿತ್ರೆಯ ಆಧುನೀಕರಣದ ಸೂಕ್ಷ್ಮಗಳ ಬಗ್ಗೆ ತಿಳುವಳಿಕೆ ಇರಬೇಕಾಗುತ್ತದೆ.

ಸಂಸ್ಕೃತಿವಿಶಿಷ್ಟ ವಿಮರ್ಶೆಯ ಪರಿಭಾಷೆಯಲ್ಲಿ ಎಷ್ಟೇ ನಂಬಿಕೆಯಿದ್ದರೂ ಕಾದಂಬರಿ ಪ್ರಕಾರದ ಬಗ್ಗೆ ಬರೆಯುವಾಗ ಅನಿವಾರ್ಯವಾಗಿಯೇ ವಿಶ್ವಸ್ಥ ಪರಿಭಾಷೆಯನ್ನು ಆಶ್ರಯಿಸಬೇಕಾಗುತ್ತದೆ. ನಡಿಗೆಯ ಹಾಗೆ ವಿಮರ್ಶೆ ಕೂಡಾ ಯೂನಿವರ್ಸಲ್ ಕಲೆ ಎಂಬ ಬ್ಲಾಕ್‌ಮರ್‌ನ ಮಾತು ಎಲ್ಲ ಕಡೆಗಳಿಗಿಂತ ಇಲ್ಲಿ ಹೆಚ್ಚು ಅನ್ವಯವಾಗುತ್ತದೆ.

ಹೊಸ ಚಾರಿತ್ರಿಕ ಯುಗಗಳು ತಮ್ಮ ಅಭಿವ್ಯಕ್ತಿಗೆ ಹೊಸ ಪ್ರಕಾರಗಳನ್ನು ಹುಡುಕಿಕೊಳ್ಳುತ್ತವೆ ಎಂಬ ಮಾತಿನ ಹಿನ್ನೆಲೆಯಲ್ಲಿ ನೋಡುವುದಾದರೆ, ಕಾದಂಬರಿ ಪ್ರಕಾರ ಆಧುನಿಕ ಬಂಡವಾಳಶಾಹಿ ಜಗತ್ತಿನ ಕೂಸು ಅಥವಾ ಹೃದಯ. ಮಧ್ಯಮ ವರ್ಗಗಳ ಮಹಾಕಾವ್ಯ ಕಾದಂಬರಿ ಎಂದು ಹೆಗೆಲ್ ಹೇಳಿದ್ದು ಈ ಅರ್ಥದಲ್ಲಿಯೇ. ಒಂದು ವಿಶಿಷ್ಟ ಜೀವನದರ್ಶನ ಕಾದಂಬರಿ ಪ್ರಕಾರದ ಅಸ್ತಿತ್ವದೊಳಗೇ ಮೂಲಭೂತವಾಗಿ ಬೆರೆತಿರುತ್ತದೆ. ಅಂದರೆ, ವ್ಯಕ್ತಿ ಮತ್ತು ಸಮಾಜಗಳ ನಡುವಿನ ದುರಂತ ಬಿರುಕು ಕಾದಂಬರಿ ಪ್ರಕಾರದ ಮೂಲಭೂತ ತಾತ್ವಿಕ ನಿಲುವು.

ಆದರೆ, ಕಲೋನಿಯಲ್ ಅನುಭವಗಳ ಬಗ್ಗೆ ಮಾತನಾಡುವಾಗ ಎಲ್ಲವೂ ತಲೆಕೆಳಗಾಗಿರುತ್ತದೆ. ಮೂಲ ದೇಶದಲ್ಲಿ ದೇವತೆಯಂತೆ ಕಂಡದ್ದು ಇಲ್ಲಿ ರಾಕ್ಷಸನ ಹಾಗೆ ಕಾಣುತ್ತದೆ. ಇಲ್ಲಿಯ ದೇವತೆಗಳಂತೂ ಅಲ್ಲಿಯವರಿಗೆ ರಾಕ್ಷಸರ ಹಾಗೆ ಕಂಡದ್ದಕ್ಕೆ ಧಂಡಿಯಾಗಿ ದಾಖಲೆಗಳು ಸಿಗುತ್ತವೆಯಲ್ಲ. ಈ ಹಿನ್ನಲೆಯಿಂದ ವಸಾಹತುಗಳಲ್ಲಿಯ ಕಾದಂಬರಿ ಪ್ರಕಾರದ ಅಧ್ಯಯನ ತುಂಬ ಸ್ವಾರಸ್ಯಕರ ಸಂಗತಿಗಳನ್ನು ಹೊರ ಚೆಲ್ಲುತ್ತದೆ ಎಂಬ ನಂಬಿಕೆ ಈ ಲೇಖನದು. ಪ್ರತಿಭಾವಂತ ವಿಮರ್ಶೆ ಸಮಾಜ ಮತ್ತುಸಾಹಿತ್ಯಗಳ ನಡುವಿನ ಸಂಬಂಧವನ್ನು ಹೊಚ್ಚ ಹೊಸ ಒಳನೋಟಗಳಲ್ಲಿ ಹೇಳಬಲ್ಲುದು ಇಂಥ ಕಡೆಗಳಲ್ಲಿ.

ಕನ್ನಡ ಕಾದಂಬರಿ ಪರಂಪರೆಯ ಬಗ್ಗೆ ಮಾತನಾಡುವ ವಿಮರ್ಶಕರು ಗಮನಿಸ ಬೇಕಾದ ಮೊದಲ ಸಂಗತಿ ಎಂದರೆ ಸುಭದ್ರವಾದ ಮಹಾವಾಸ್ತವತಾವಾದಿ ಪರಂಪರೆಯೊಂದರ ಗೈರು ಹಾಜರಿ. ಫ್ರಾನ್ಸಿನಲ್ಲಿ, ರಷ್ಯದಲ್ಲಿ, ಇಂಗ್ಲೆಂಡಿನಲ್ಲಿ ಅಥವಾ ಒಟ್ಟಾರೆಯಾಗಿ ಯೂರೋಪಿನಲ್ಲಿ ಕಾಣುವಂಥ ಪರಂಪರೆ ಕನ್ನಡ ಕಾದಂಬರಿಗಳಲ್ಲಿ ಕಾಣುವುದಿಲ್ಲ. ಇದೇನೋ ಮಹಾ ಕೊರತೆ ಎಂದೇನೂ ಆಗಬೇಕಿಲ್ಲ. ಒಂದು ಕಡೆಗೆ ಕಳೆಕೊಂಡದ್ದನ್ನು :ಇನ್ನೊಂದು ಕಡೆಗೆ ಜನಾಂಗವೊಂದು ತುಂಬಿಕೊಳ್ಳುತ್ತದೆ. ಆ ವಿಷಯ ಹಾಗಿರಲಿ. ಇಲ್ಲಿ ನಾವು ಚರ್ಚಿಸಬೇಕಾದ ಸಂಗತಿ ಎಂದರೆ, ಈ ಗೈರು ಹಾಜರಿಯ ಕಾರಣಗಳು. ಈ ನೆಲೆಯಲ್ಲಿ ಚರ್ಚೆಯನ್ನು ಇನ್ನೂ ಸರಳಗೊಳಿಸ ಬಹುದೇನೊ. ಮಹಾವಾಸ್ತವತಾವಾದಿ ಪರಂಪರೆಯ ಗೈರುಹಾಜರಿ ಎಂದರೆ ವೈದೃಶ್ಯ ಗಳಿರುವ, ಗಾಢ ವ್ಯತ್ಯಾಸಗಳಿರುವ ಕಾದಂಬರಿಕಾರರು ಸಿಗುವುದಿಲ್ಲ. ಕಾರಂತರೊಡನೆ ಹೋಲಿಸಿ ಚರ್ಚಿಸಬಹುದಾದ ಇನ್ನೊಬ್ಬ ಪ್ರಮುಖ ಕಾದಂಬರಿಕಾರ ಸಿಕ್ಕುವದಿಲ್ಲ. ಇವತ್ತಿಗೂ ಅಂಥ ಗಾಢ ಚರ್ಚೆಯ ಸಾಧ್ಯತೆ ಇರುವುದು ಕುವೆಂಪು ಮತ್ತು ಕಾರಂತರ ನಡುವೆ ಮಾತ್ರ. ಮಹಾವಾಸ್ತವತಾವಾದಿ ಕಾದಂಬರಿಗಳು ಅಂತ ಗುರುತಿಸಬಹುದಾದ ಕಾದಂಬರಿಗಳು ಇರುವುದು ಐದೊ, ಆರೊ ಅಷ್ಟೆ. ಹಾಗೆ ನೋಡಿದರೆ, ಮಹಾನ್ ಕಾದಂಬರಿಕಾರರ ನಡುವಿನಿಂದ ಬರೆದ ಲುಕಾಚ್ಸ್‌ನಂತಹ ವಿಮರ್ಶಕನ ಸೌಭಾಗ್ಯ ಸದ್ಯಕ್ಕಂತೂ ಬೇರೆ ಯಾರಿಗೂ ಇಲ್ಲ. ಕತ್ತಲ ಖಂಡಗಳಾದ ಮೂರನೆ ಜಗತ್ತಿನಿಂದ ಬರುವ ಕೃತಿಗಳನ್ನು ನಾವಿನ್ನೂ ಕಾಯಬೇಕಾಗಿದೆ. ಹೀಗಾಗಿ, ಕನ್ನಡದ ಕೊರತೆಯು ಆರ್ಥಿಕತೆಯಲ್ಲಿಯೇ ವಿಮರ್ಶಕ ತನ್ನ ಚಿಂತನೆಗಳನ್ನು ಒರೆಗೆ ಹಚ್ಚಬೇಕಾಗಿದೆ. ದೇಶದ ಒಟ್ಟಾರೆ Scarcity Economy ಯಲ್ಲಿ ಅರ್ಥಶಾಸ್ತ್ರಜ್ಞರು ಒದ್ದಾಡ ಬೇಕಾಗಿದೆ. ಈ ಉಪಮಾ ಸಾದೃಶ್ಯ ಒಂದೇ ಸನ್ನಿವೇಶದ ನಿರ್ಮಾಣ ಎಂಬ ನಂಬಿಕೆ ಈ ಲೇಖಕನದು.

ಮಹಾವಾಸ್ತವತಾವಾದಿ ಪರಂಪರೆಯ ಗೈರು ಹಾಜರಿಯ ಕಾರಣಗಳನ್ನು ಹುಡುಕಬೇಕಾದರೆ ಆಧುನಿಕ ಭಾರತೀಯ ಚರಿತ್ರೆಗೇ ಹೋಗಬೇಕು. ಭಾರತದಲ್ಲಿಯ ಆಧುನೀಕರಣದ ಪ್ರತಿಮೆಯನ್ನು ಅರ್ಥಮಾಡಿಕೊಂಡರೆ ಇದು ಅರ್ಥವಾದೀತು. ನೂಲಿನಂತೆ ಸೀರೆ, ತಾಯಿಯಂತೆ ಮಗಳು ತಾನೇ. ಭಾರತದ ಬಂಡವಾಳಶಾಹಿ ವ್ಯವಸ್ಥೆಗೆ ಹೊಸಕ್ರಾಂತಿಕಾರೀ ಪಾತ್ರವನ್ನು ನಿರ್ವಹಿಸುವ ಶಕ್ತಿ ಇಲ್ಲ. ಸಮಾಜದಲ್ಲಿ ಆಮೂಲಾಗ್ರ ಬದಲಾವಣೆಯನ್ನು ತರಬಲ್ಲ ಶಕ್ತಿ ಅದಕ್ಕಿಲ್ಲ. ವಸಾಹತುವಾದದ್ದಕ್ಕೆ ನಾವು ತೆರಬೇಕಾಗಿ ಬಂದ ಬೆಲೆ ಅದು. ಇಲ್ಲಿಯ ಸಂಪತ್ತು ಪೂರಾ ಅಲ್ಲಿಗೆ ಹರಿದು ಇಲ್ಲಿ ನಾಡು ಬಂಜಾರಾದಾಗ ಶಕ್ತಿ ಎಲ್ಲಿಂದತಾನೆ ಬರಲು ಸಾಧ್ಯ. ಇಷ್ಟಕ್ಕೂ ರಾಷ್ಟ್ರೀಯ ವಾದಿಗಳು ತಮ್ಮ ಹೋರಾಟ ಪ್ರಾರಂಭಿಸಿದ್ದು ಈ ಸ್ಥಿತಿಯಲ್ಲಿಯೆ. ದಾದಾಭಾಯಿ ನವರೋಜಿ ತಮ್ಮ ಪುಸ್ತಕದಲ್ಲಿ ಅತ್ಯಂತ ಜಾಣ್ಮೆಯಿಂದ, ಪ್ರಬುದ್ಧತೆಯಿಂದ,

ಪಾಂಡಿತ್ಯದಿಂದ ವಾದಿಸಿದ್ದು ಇದನ್ನೆ. ನಾಡಿನ ದಾಸ್ಯ ತೊಲಗಬೇಕಾದದ್ದು ಬರೀ ಭಾವುಕ, ಸಾಂಸ್ಕೃತಿಕ ಕಾರಣಗಳಿಗೆ ಮಾತ್ರವೇ ಅಲ್ಲ. ಆರ್ಥಿಕ ಕಾರಣ ಕೂಡಾ ಸಾಕಷ್ಟು ಬಲವಾದದ್ದೆ. 'ರಾಷ್ಟ್ರೀಯತೆಯ ಉಗಮ ಇರುವುದು ಮಾರುಕಟ್ಟೆಯಲ್ಲಿ' ಎಂಬ ಸ್ಟಾಲಿನ್ನನ ಮಾತು ವ್ಯಂಗ್ಯವಲ್ಲ ಎಂಧು ಅರಿವಿಗೆ ಬರುವುದು 'ಇಂಥ ಕಡೆಗಳಲ್ಲಿಯೇ.

ಹೀಗಾಗಿ, ಕಲೋನಿಯಲ್ ಶಕ್ತಿಯ ರಾಕ್ಷಸೀ ಗರ್ಭದಿಂದ ಬಂದ ಬಂಡವಾಳಶಾಹಿ ಕೂಸು ದುರ್ಬಲವಾಗಿಯೇ ಇತ್ತು. ಹಳೆಯ ವ್ಯವಸ್ಥೆಯನ್ನು ಕರಗಿಸಿ, ಸುಟ್ಟು ಅದರ ಮಧ್ಯದಿಂದ ಇದು ಸೀಳಿ ಬರಲಿಲ್ಲ. ಈ ಕಾರಣಕ್ಕಾಗಿಯೇ ಭಾರತದಲ್ಲಿ ಬಂಡವಾಳಶಾಹಿಯ ಹುಟ್ಟು ಮೃದುವಾದದ್ದು. ಈ ಪ್ರತಿಮೆಯನ್ನು ಇಂಗ್ಲೆಂಡಿನ ಜೊತೆಗೊ, ಫ್ರಾನ್ಸಿನ ಜೊತೆಗೊ ಹೋಲಿಸಿದರೆ ವ್ಯತ್ಯಾಸ ಸ್ಪಷ್ಟವಾಗುತ್ತದೆ. ಎರಡೂ ಕಡೆಗಳಲ್ಲಿ ನಿಜವಾಗಿಯೂ ಪ್ರಳಯದ ಅನುಭವ ಉಂಟಾಯಿತ್ತು 'ಕಲಿಯುಗ'ದ ಆಗಮನಕ್ಕೆ ಅಲ್ಲಿಯ ಸಮಾಜದ ನರಮಂಡಲ ಕಂಪಿಸಿತು. ಹಳೆಯದರ ಗರ್ಭದಿಂದ ಹೊಸದು ಅಲ್ಲಿ ಸಿಡಿದು ಬಂತು.

ಇಲ್ಲಿ ಇಂಥ ದುರ್ಬಲ ವ್ಯವಸ್ಥೆಯ ಕೂಸು ಕಾದಂಬರಿ ಪ್ರಕಾರವಾದ್ದರಿಂದ ಇಲ್ಲೂ ಕೂಡಾ ಆ ಲಕ್ಷಣಗಳು ಎದ್ದು ಕಾಣುತ್ತವೆ. ಹಿಂದುಳಿದ ಅಥವಾ ದುರ್ಬಲ ಬಂಡವಾಳಶಾಹಿ ಬೆಳವಣಿಗೆಯಿಂದಾಗಿ ಯಾವಾಗಲೂ ಕಾದಂಬರಿ ಪ್ರಕಾರ ಪ್ರಬುದ್ಧ ಸ್ಥಿತಿಗೆ ಏರುವುದಿಲ್ಲ ಎಂದು ಇಲ್ಲಿ ನಾನು ವಾದಿಸುತ್ತಿಲ್ಲ. ರಷ್ಯಾ ಕೂಡಾ ಇಂಥದೇ ಹಿಂದುಳಿದ ಸ್ಥಿತಿಯಲ್ಲಿದ್ದು ಅಲ್ಲಿ ವಾಸ್ತವವಾದ ಸಮೃದ್ಧವಾಗಿ ಅರಳಿದ್ದನ್ನು ಕುರಿತು ಜಾರ್ಜ್ ಲುಕಾಚ್ಸ್ ತನ್ನ ಲೇಖನವೊಂದರಲ್ಲಿ ಚರ್ಚಿಸುತ್ತಾನೆ. ಹೀಗಾಗಿ, ನಮ್ಮಲ್ಲಂತೂ ಹೀಗಾಯಿತು ಎಂದಷ್ಟೆ ಈಗ ಹೇಳಲು ಸಾಧ್ಯ. ಕಾದಂಬರಿಯಲ್ಲಿ ನಾವು ಕಳೆದುಕೊಂಡದ್ದು ಬೇಂದ್ರೆಯಂಥ ಕವಿಯಲ್ಲಿ ತುಂಬಿತೇನು ?

## 2

ಕಾರಂತರಿಗಿಂತ ಮುಂಚೆ ನಮ್ಮಲ್ಲಿ ಕಾದಂಬರಿ ಎಂದು ಕರೆಯಬಹುದಾದ ಪ್ರಕಾರದಲ್ಲಿ ನಡೆದಿದ್ದ ಕೃಷಿ ಕಡಿಮೆ. ತೀರಾ ಕಡಿಮೆ ಎಂದರೂ ಸಲ್ಲುತ್ತದೆ. ಡಾ. ಅಮೂರರು ಈ ಬಗೆಗೆ ತಮ್ಮ ಅಧ್ಯಯನದಲ್ಲಿ ತುಂಬಾ ಉತ್ಸಾಹದಿಂದಲೇ ಚರ್ಚಿಸಿದ್ದಾರೆ. ಆದರೆ, ಅಂಥ ಉತ್ಸಾಹ ನನಗೆ ಸಾಧ್ಯವಾಗುತ್ತಿಲ್ಲ. ಕಾರಣ, ಕೆರೂರು, ಗುಲ್ವಾಡಿ, ಪುಟ್ಟಣ್ಣನವರ ಕೃತಿಗಳನ್ನು ನಿಷ್ಕೃಷ್ಟ ಅರ್ಥದಲ್ಲಿ ಕಾದಂಬರಿ ಎಂದು ಕರೆಯಲು ಸಾಧ್ಯವೆ? ಎಂಬ ಪ್ರಶ್ನೆಗೆ ಸಿಗುವ ಉತ್ತರ ಸಂಕೀರ್ಣವಾದುದ್ದು. ಏಕೆಂದರೆ, ಕಾದಂಬರಿ ಪ್ರಕಾರದ ಮುಖ್ಯ ನೆಲೆಯಾದ ಸಮಾಜ ಮತ್ತು ವ್ಯಕ್ತಿಯ Radical Rupture ಇಲ್ಲಿ ಕಾಣುವುದಿಲ್ಲ. ಕಳೆದ ಅಥೆಂಟಿಕ್ ಜಗತ್ತಿನ ಬಗೆಗೆ ದುರಂತ

ಪ್ರಜ್ಞೆಯ ನೆಲೆಯಿಂದಲೇ ಕಾದಂಬರಿ ಹುಟ್ಟುವುದು. ಆದರೆ, ಈ ಕಾದಂಬರಿಗಳು ಸೃಷ್ಟಿಯಾಗಿರುವ ನೆಲೆಯೇ ಬೇರೆ. ಅದ್ಭುತದ ಕಲ್ಪನೆ, ರಮ್ಯದ ಕಲ್ಪನೆ, ತನ್ಮಯತೆಯ ಕಲ್ಪನೆ ಇಲ್ಲಿ ಸಮೃದ್ಧವಾಗಿ ಹರಿದಿದೆ. ಈ ಮಾತುಗಳನ್ನು ನೇತ್ಯಾತ್ಮಕ ಟೀಕೆಯೆಂದು ನಾನು ಹೇಳುತ್ತಿಲ್ಲ. ವಾಸ್ತವವಾಗಿ, ನನಗೂ ಈ ರೀತಿಯ ಕಥನದಲ್ಲಿ, ಹಳೆಯ ಭಾರತದ ಸೃಷ್ಟಿಯಾದ ಕಥನಗಳಲ್ಲಿ ಅಪಾರ ಆಸಕ್ತಿ ಇದೆ. ಬಹುಶಃ ಕನ್ನಡ ನವೋದಯದ ಈ ಮೊದಲ ಹಂತದ ಕಥನರೂಪ ಮುಂದುವರೆದಿದ್ದರೆ, ಪಾಶ್ಚಾತ್ಯರಿಗಿಂತ ಪೂರ್ಣವಾಗಿ ಭಿನ್ನವಾದ 'ಕಾದಂಬರಿ' ರೂಪವನ್ನು ನಾವು ಸೃಷ್ಟಿಸಲು ಸಾಧ್ಯವಿತ್ತೇನೊ. ಒಬ್ಬ ಭಾರತೀಯ ಮಾರ್ಕ್ವೆಜ್ ಹುಟ್ಟಲು ಸಾಧ್ಯವಿತ್ತೇನೊ.

ಆದರೆ, ಪುಟ್ಟಣ್ಣನವರ ಮಾರ್ಗ ಅಲ್ಪಾಯುಷಿಯಾಯಿತು. ಅದನ್ನು ಆಧುನಿಕವಾಗಿ, ಪ್ರಬುದ್ಧವಾಗಿ ಮುಂದುವರಿಸಬಲ್ಲ ಸಾಹಿತಿಗಳು ಮುಂದೆ ಬರಲಿಲ್ಲ. ಅಥವಾ ಅಷ್ಟರಲ್ಲಿ ಬೇರೆ ರೀತಿಯ ಕಥೆಯ ಆಗಮನವಾಯಿತು. ಪುಟ್ಟಣ್ಣನವರ ಘಟ್ಟವನ್ನು ಸಾಂಪ್ರದಾಯಿಕ ಘಟ್ಟವೆಂದು ಕರೆಯಬಹುದು. ಜೀವನ ದರ್ಶನಕ್ಕಿಂತ ಹೆಚ್ಚಾಗಿ ಆಕೃತಿಯ ಹಂತದಲ್ಲಿ ಸಾಂಪ್ರದಾಯಿಕ ಭಾರತಕ್ಕೆ ಹತ್ತಿರವಿದ್ದ ಘಟ್ಟ ಇದು.

ಇದಕ್ಕಿಂತ ಭಿನ್ನವಾದ ವಲಯವೆಂದರೆ ರಾಷ್ಟ್ರೀಯವಾದಿ ಕಾದಂಬರಿ. ನಮ್ಮಲ್ಲಿ ಕಾದಂಬರಿ ಎಂದು ವಿಶಾಲಾರ್ಥದಲ್ಲಿ ಕರೆಯಬಹುದಾದ ರಚನೆ ವ್ಯಾಪಕವಾಗಿ ಕಾಣಿಸಿಕೊಂಡದ್ದು 'ಚಾರಿತ್ರಿಕ ಕಾದಂಬರಿಗಳಲ್ಲಿಯೇ'. ಕರ್ನಾಟಕದಲ್ಲಿ ವಸಾಹತುಶಾಹಿಯ ಪ್ರಮುಖ ಹೊಡೆತವೆಂದರೆ ನಾಡಿನ ಛಿದ್ರೀಕರಣ. ವಿಜಯನಗರ ಅವನತಿಯ ಹೊತ್ತಿನಲ್ಲೇ ಪ್ರಾರಂಭವಾಗಿದ್ದ ಪ್ರಕ್ರಿಯೆ ದುರಂತ ರೀತಿಯಲ್ಲಿ ಪೂರ್ಣಗೊಂಡದ್ದು ಇಲ್ಲಿಯೇ. ಬಹುಶಃ ಭಾರತದ ಯಾವ ನಾಡೂ ಇಂಥ ಏಟು ತಿಂದಿರಲಿಲ್ಲ. ಹೀಗಾಗಿ, ನಮ್ಮಲ್ಲಿ ಮೊದಲು ಉತ್ಕಟವಾಗಿ ಪ್ರಾರಂಭವಾದದ್ದೆ ಚಾರಿತ್ರಿಕ ಕಾದಂಬರಿಗಳು. Rise of individualism ನ ಜತೆಯಲ್ಲಿ ಕಾದಂಬರಿ ಪ್ರಕಾರದ ಉಗಮ ಎಂದು ಪಾಶ್ಚಿಮಾತ್ಯ ವಿಮರ್ಶೆ ಹೇಳಿಕೊಟ್ಟಿದ್ದರೆ, ನಮ್ಮಲ್ಲಿ ಅದು ಕರ್ನಾಟಕತ್ವದ ಸಮಷ್ಟಿ ಹುಡುಕಾಟದೊಡನೆ ಪ್ರಬುದ್ಧ ಸ್ಥಿತಿಗೆ ಬಂತು. ಕನ್ನಡ ಕಾದಂಬರಿ ಪರಂಪರೆಯ ಬೇರುಗಳು ಇಳಿದದ್ದೆ ಸಮಷ್ಟಿ ಕರ್ನಾಟಕತ್ವದ ಹುಡುಕಾಟದಲ್ಲಿ. ಗಳಗನಾಥ ಈ ವಲಯದ ಪ್ರಮುಖ ಧ್ವನಿ.

3

ಮೇಲೆ ಸೂಚಿಸಿದ ಎರಡೂ ಧಾರೆಗಳಿಗಿಂತ ಭಿನ್ನವಾಗಿ ಬಂದದ್ದೆ ಕಾರಂತ ಧಾರೆ. ಕನ್ನಡ ಕಾದಂಬರೀ ಲೋಕದಲ್ಲಿ ಸಂಪೂರ್ಣವಾಗಿ ಹೊಸ ಶಕ್ತಿಶಾಲೀ ಯುಗವೊಂದು ಕಾರಂತ ರೂಪದಲ್ಲಿ ಬಂತು. ಈ ಹಿನ್ನಲೆಯಲ್ಲಿಯೇ ಗಾಂಧೀವಾದಿ

ರಾಜಕಾರಣ ಕೂಡಾ ಪ್ರಾರಂಭವಾಗಿತ್ತು, ವ್ಯಾಪಕವಾಗಿ ಬೆಳೆಯತೊಡಗಿತ್ತು ಎನ್ನುವುದು ಮುಖ್ಯ. ವಾಸ್ತವವಾದ ಅನ್ನುವ ಪ್ರಭೇದವನ್ನು ಕಾರಂತರೇ ತಮ್ಮ ವ್ಯಕ್ತಿವಿಶಿಷ್ಟತೆಯೊಡನೆ ಕಟ್ಟಿದರು.

ರಾಷ್ಟ್ರೀಯವಾದಿ ಕಾದಂಬರಿ ಧಾರೆ ಗಾಂಧೀವಾದವನ್ನು ಅಳವಡಿಸಿಕೊಂಡು ಕೆಲವು ಕಾದಂಬರಿಗಳನ್ನು ಸೃಷ್ಟಿಸಿತು. ಆನಂದಕಂದರ ಕಾದಂಬರಿಗಳು ಇದಕ್ಕೆ ಉದಾಹರಣೆ. ಆದರೆ, ಗಾಂಧೀವಾದದ ತಿರುಳನ್ನು ಬಳಸಿಯೂ ರಾಷ್ಟ್ರೀಯವಾದ ಕನ್ನಡದಲ್ಲಿ ಒಳ್ಳೆಯ ಕಾದಂಬರಿಗಳನ್ನು ಸೃಷ್ಟಿಸಲಾಗಲಿಲ್ಲ. ಈ ಅರ್ಥದಲ್ಲೇ ಕಾರಂತರು ಒಂದು ಸ್ವತಂತ್ರ ಪರಂಪರೆಯಾಗಿ ಬೆಳೆದರು. ರಾಷ್ಟ್ರೀಯವಾದಿ ಕಾದಂಬರಿ ಧಾರೆ ಐವತ್ತರ ದಶಕದ ತನಕ ಪ್ರಭಾವಶಾಲಿಯಾಗಿತ್ತು. ಈ ಧಾರೆಯಲ್ಲಿ ಆನಂದಕಂದ, ಗೊರೂರು, ಅನಕೃ, ಕಟ್ಟೀಮನಿ, ತರಾಸು ಮುಂತಾದವರು ಸೇರುತ್ತಾರೆ ಎಂಬ ಅಂಶದ ಹಿನ್ನಲೆಯಲ್ಲಿ ಕಾರಂತರ ಸಾಧನೆಗಳನ್ನು ನೋಡಬೇಕು. ಗುಡ್ಡಗಳಿಂದ ಸುತ್ತುವರಿದ ಮಹಾ ಪರ್ವತದಂತೆ ಅವರು ಕಾಣುತ್ತಾರೆ. ಈ ಅಂಶವನ್ನು ಒಂದಿಷ್ಟು ವಿವರವಾಗಿ ಚರ್ಚಿಸಬಹುದು.

ರಾಷ್ಟ್ರೀಯವಾದಿಗಳು ತಮ್ಮ ಆದರ್ಶಗಳ, ಕನಸುಗಳ ಮುಗ್ಧ ಹಳಹಳಿಕೆಯಲ್ಲಿರುವಾಗ ಕಾರಂತರು ನಮ್ಮ ಬದುಕಿನ, ಮೂಲಭೂತ ಸತ್ಯಗಳತ್ತ ಮುಖ ಮಾಡಿದ್ದರು. ಅದನ್ನು ಆದಷ್ಟು ನಿರ್ಲಿಪ್ತವಾಗಿ, ವೈದ್ಯನೊಬ್ಬನ ಸರ್ಜರಿ ತೀಕ್ಷ್ಣತೆಯಲ್ಲಿ ಹಿಡಿಯತೊಡಗಿದ್ದರು. 'ಸುದರ್ಶನ' ಮತ್ತು 'ಚೋಮನದುಡಿ'ಗಳ ನಡುವಿನ ವ್ಯತ್ಯಾಸ ನೋಡಿದರೆ ಈ ಮಾತು ಸ್ಪಷ್ಟವಾಗುತ್ತದೆ. ಅಥವಾ 'ಹೇಮಾವತಿ', 'ಚೋಮನದುಡಿ'ಗಳ ನಡುವಣ ಇರುವ ವ್ಯತ್ಯಾಸವನ್ನು ನೋಡಿದರೂ ಕಾರಂತರ ಮಹತ್ವ ಅರ್ಥವಾಗುತ್ತದೆ.

ಸೈದ್ಧಾಂತಿಕ ಆದರ್ಶಗಳನ್ನೆ ವಾಸ್ತವವೆಂದು ಭ್ರಮಿಸಿ, ದಿನನಿತ್ಯದ ಬದುಕಿನೊಳಗಣ ಸತ್ಯಗಳಿಗೆ ರಾಷ್ಟ್ರೀಯವಾದಿ ಸಾಹಿತಿಗಳು ಪ್ರತಿಸ್ಪಂದಿಸಲಾರದೆ ಹೋಗಿದ್ದರು. ಈಗ ಓದಿದರಂತೂ ಅವರ ಪಾತ್ರಗಳು ಮಹಾ ತಮಾಷೆಯ ಪಾತ್ರಗಳಾಗಿ, ವಾಸ್ತವದ ಅರಿವಿಲ್ಲದ ಪಾತ್ರಗಳಾಗಿ ಕಾಣುತ್ತವೆ. ಈ ನಾಡಿನ ದಲಿತರ ನಿಜವಾದ ಸಮಸ್ಯೆ, ಭೂಮಿಯ ಸಮಸ್ಯೆ, ಶೋಷಣೆಯ ಸಮಸ್ಯೆ ಎಂಬುದನ್ನು ಕಾರಂತರು ಭಾವನೆಗಳ ಅಬ್ಬರವಿಲ್ಲದೆ ಗ್ರಹಿಸಿದ್ದರು. ಅದನ್ನು ಆಡಂಬರವಿಲ್ಲದೆ, ಸರಳವಾಗಿ, ಆದರೆ ಅಪಾರ ತೀವ್ರತೆಯಿಂದ ಹೇಳುವುದನ್ನು ಸಾಧಿಸಿದ್ದರು. ಎಲ್ಲಕ್ಕಿಂತ ಹೆಚ್ಚಾಗಿ ವಾಸ್ತವತಾವಾದಿ ಕಾದಂಬರಿಗಳ ಆಕೃತಿಯ ಸಮಸ್ಯೆಯನ್ನು ಬಗೆಹರಿಸಿಕೊಂಡಿದ್ದರು. ಸಾರ್ರೂಪೀ ವಿವರಗಳಿಂದ ಕೂಡಿದ ವಾಸ್ತವತೆಯ ಶೈಲಿಯೊಂದನ್ನು ನಿರ್ಮಿಸಿಕೊಂಡಿದ್ದರು.

ರಾಷ್ಟ್ರೀಯವಾದಿಗಳ ಮೊದಲ ತಲೆಮಾರಿನ ಕಾದಂಬರಿಗಳಿಗೂ ಕಾರಂತರಿಗೂ ಇರುವ ವ್ಯತ್ಯಾಸವನ್ನು ಮೇಲಿನ ಪ್ಯಾರಾ ಸೂಚಿಸಿದೆ. ಈ ವ್ಯತ್ಯಾಸ ಇನ್ನು ತೀಕ್ಷ್ಣ

ರೀತಿಯಲ್ಲಿ ಮುಂದುವರಿಯುತ್ತಾ ಹೋಗುತ್ತದೆ. ಅನಕೃ, ಕಟ್ಟೀಮನಿ, ತರಾಸುರಂಥ ಕಾದಂಬರಿಕಾರರು 1947ರ ಹಿಂಚು ಮುಂಚಿನಲ್ಲಿ ಅಪಾರ ವೀರಾವೇಶದ, ತ್ಯಾಗದ, ಬಲಿದಾನದ, ಸಂಭ್ರಮದ ಕಾದಂಬರಿಗಳನ್ನು ಬರೆದಿದ್ದರೆ, ಕಾರಂತರು ಆ ಜಗತ್ತನ್ನು ಬಿಟ್ಟು ಬಹುದೂರ ಸರಿದಿದ್ದರು. ಕಾರಂತರ ಮಟ್ಟಿಗೆ ಅದು "ಮುಗಿದ ಅಧ್ಯಾಯ" ವಾಗಿತ್ತು. ಹೀಗಾಗಿ, ಕಾರಂತರ ಭವಿಷ್ಯದರ್ಶಿ ಪ್ರತಿಭೆ ಮುಂದೆ ನಮ್ಮ ರಾಷ್ಟ್ರಜೀವನ ಕಂಡ ದುರಂತಗಳನ್ನೆಲ್ಲ ಕಂಡರಿಸತೊಡಗಿತ್ತು. ತನ್ಮಯತೆಯ ಬದಲಾಗಿ ಸಂದೇಹ, ಸಂಭ್ರಮತೆಯ ಬದಲಾಗಿ ಸಿನಿಕತೆ ಕಾರಂತರ ಸಾಮಾಜಿಕ ದರ್ಶನದಲ್ಲಿ ದಟ್ಟವಾಗ ತೊಡಗಿತ್ತು. ನಮ್ಮ ರಾಜಕಾರಣಿಗಳ ಭ್ರಷ್ಟತೆ, ತತ್ವಹೀನ ರಾಜಕಾರಣ, ಅಭದ್ರ ವ್ಯಕ್ತಿತ್ವಗಳಿಗೆ ಕಾರಂತರು ರಾಹುಗನ್ನಡಿ ಹಿಡಿದು ತೋರಿಸತೊಡಗಿದ್ದರು. ಹೊಸ ಸಂಭ್ರಮದ ಒಳಗೆ ಮೊಳೆಯುತೊಡಗಿದ ರೋಗಗ್ರಸ್ತ ಜಂತುಗಳು ಅವರಿಗೆ ಕಾಣ ತೊಡಗಿತ್ತು. 'ಮುಗಿದ ಯುದ್ಧ', 'ಔದಾರ್ಯದ ಉರುಳಲ್ಲಿ' ಕೃತಿಯ ಹಿಂದೆ ಕೆಲಸ ಮಾಡಿರುವ ಜೀವನ ದರ್ಶನ ಇಂಥದೇ.

ಇದರರ್ಥ ರಾಷ್ಟ್ರೀಯವಾದಿ ಆದರ್ಶಗಳಿಂದ, ಸಿದ್ಧಾಂತದ ಚೌಕಟ್ಟಿನಿಂದ ಕಾರಂತರು ಪೂರ್ಣವಾಗಿ ಹೊರಗಿದ್ದಾರೆ ಎಂದಲ್ಲ. ವಾಸ್ತವವಾಗಿ, ರಾಷ್ಟ್ರೀಯತೆ ಕಾರಂತರ ಸಂವೇದನೆಯನ್ನು ರೂಪಿಸುವ ಪ್ರಮುಖ ಶಕ್ತಿಗಳಲ್ಲಿ ಒಂದು. ಈ ವ್ಯತ್ಯಾಸ ಗಳನ್ನು ಚರ್ಚಿಸಿದ್ದರ ಉದ್ದೇಶ ರಾಷ್ಟ್ರೀಯತೆಯ ಸೈದ್ಧಾಂತಿಕ, ಲೋಕಗ್ರಹಿಕೆಯ ಮಿತಿಗಳನ್ನು ಕಾರಂತರು ಮೀರಿರುವ ರೀತಿ ಸ್ಪಷ್ಟವಾಗಲಿ ಎಂದು.

ಗಾಂಧೀವಾದದೊಡನೆ ಕಾರಂತರಿಗೆ ವೈಚಾರಿಕವಾಗಿ ಯಾವುದೇ ಭಿನ್ನಾಭಿ ಪ್ರಾಯಗಳಿದ್ದರೂ, ಅದು ಕಾರಂತರ ಸಂವೇದನೆಯಲ್ಲಿಯ ರಾಷ್ಟ್ರೀಯತೆಯ ಅಂಶ ಗಳನ್ನು ಮೊಂಡು ಮಾಡಿಲ್ಲ. ಹಸಿವಾಸ್ತವಕ್ಕಾಗಿ ತಹತಹಿಸುವ ಕಾರಂತ ಪ್ರತಿಭೆ ಎಲ್ಲ ರೀತಿಯ ಸಿದ್ಧಾಂತಗಳ ಹೊರಗೆ ಹೋಗುವ ರೀತಿಗೆ ಇದೊಂದು ಉದಾಹರಣೆ ಅಷ್ಟೆ. ಆದರೆ, ಇಲ್ಲಿ ಸಂವೇದನೆ ಮತ್ತು ಸಿದ್ಧಾಂತಗಳ ನಡುವೆ ಇರುವ ಸೂಕ್ಷ್ಮ ಆದರೂ ಮಹತ್ವದ ವ್ಯತ್ಯಾಸಗಳನ್ನು ಸ್ಪಷ್ಟಪಡಿಸಬೇಕಾಗಿದೆ. ಕಾರಂತ ಪ್ರತಿಭೆಯ ಹಿಂದಿನ ಪ್ರೇರಣೆಗಳನ್ನು ಸಮಗ್ರವಾಗಿ ಅರ್ಥಮಾಡಿಕೊಳ್ಳಲು ಇದು ಅನಿವಾರ್ಯ.

1922–47ರ ತನಕದ ಭಾರತೀಯ ಸಾಮಾಜಿಕ-ರಾಜಕೀಯ ಜೀವನದ ಅನು ಭವಗಳು ಕಾರಂತ ಸಂವೇದನೆಯನ್ನು ಪೂರ್ಣವಾಗಿ ರೂಪಿಸಿವೆ ಮತ್ತು ನಿಯಂತ್ರಿಸಿವೆ. ಆಧುನಿಕ ಭಾರತದ ಚರಿತ್ರೆಯಲ್ಲಿ ಅತ್ಯಂತ ಮುಖ್ಯವಾದ ಯುಗ ಇದು. ಭಾರತ ಅತ್ಯಂತ ತೀವ್ರವಾಗಿ ಬದುಕಿದ ಯುಗ ಇದು. ಭಾರತದ ಸಾಮಾಜಿಕ-ರಾಜಕೀಯ ಜೀವನದ ಎಲ್ಲ ಶಕ್ತಿಗಳು, ಬೆಳವಣಿಗೆಗಳು ಮೂರ್ತೀಭವಿಸಿದ, ಸ್ಫುಟಗೊಂಡ ಘಟ್ಟ ಇದು. ಈ ಯುಗದ ಕನ್ನಡಿ ಕಾರಂತ.

ಕಾರಂತರ ರಿಯಲಿಸ್ಟ್ ಪ್ರಭೇಧಕ್ಕೂ ಈ ಸಾಮಾಜಿಕ ಅನುಭವಕ್ಕೂ ಇರುವ ಒಳ ಸಂಬಂಧಗಳನ್ನು ಇನ್ನಷ್ಟು ವಿವರವಾಗಿ ಹೇಳುವ ಅಗತ್ಯವಿದೆ. ಎಲ್ಲ ದೊಡ್ಡ ವಾಸ್ತವತಾವಾದಿ ಕಾದಂಬರಿಕಾರರೂ ಒಂದು ನಿರ್ದಿಷ್ಟ ಕಾಲದ ಸೃಷ್ಟಿಗಳು. ಆ ಯುಗದ ತಲ್ಲಣ, ರೋಮಾಂಚನಗಳು ಅವರ ರಿಯಲಿಸ್ಟ್ ಪ್ರತಿಭೆಯನ್ನು ಸೃಷ್ಟಿಸಿ ರುತ್ತವೆ. ರೂಪಿಸಿರುತ್ತವೆ. ಆ ಕಾಲದ ಅನುಭವಕ್ಕೆ ಮಹತ್ವದ ರೂಪಕಗಳನ್ನು ಅವರು ತಮ್ಮ ಕೃತಿಗಳಲ್ಲಿ ಸೃಷ್ಟಿಸಿರುತ್ತಾರೆ. ಲೆನಿನ್ ಟಾಲ್‌ಸ್ಟಾಯ್‌ನನ್ನು ವಿಶ್ಲೇಷಿ ಸಿದ ರೀತಿ ಇಲ್ಲಿ ನೆನಪಾಗುತ್ತದೆ. 1861-1905 ರ ಕಾಲದ ಕನ್ನಡಿ ಟಾಲ್‌ಸ್ಟಾಯ್ ಎಂದು ಲೆನಿನ್ ವಿಶ್ಲೇಷಿಸಿದ. ತುಂಬ ಅರ್ಥ ಪೂರ್ಣ ವಿಶ್ಲೇಷಣೆ ಇದು. 1861 ರಲ್ಲಿ ಪ್ರಾರಂಭವಾದ ಒಂದು ನಿರ್ದಿಷ್ಟ ಪ್ರಕ್ರಿಯೆ 1905ರ ಕ್ರಾಂತಿಯಲ್ಲಿ ಶೃಂಗ ತಲುಪಿತು. ರಷ್ಯನ್ ಬದುಕಿನಲ್ಲಿ ತುಂಬ ಮಹತ್ವದ ಘಟ್ಟ ಇದು. ಟಾಲ್‌ಸ್ಟಾಯ್ ಈ ಕಾಲದ ರನ್ನಗನ್ನಡಿ. ಕಾರಂತರು ಕೂಡಾ ಹಾಗೆಯೇ.

ಕಾರಂತರ ಇನ್ನೊಂದು ಮಿತಿಯೂ ಬೆಳಕಿಗೆ ಬರುವುದು ಇಲ್ಲಿಯೇ. ಕಾರಂತರ ರಾಜಕೀಯ ತಿಳುವಳಿಕೆ 1947ಕ್ಕೇ ನಿಲ್ಲುತ್ತದೆ. ಅಂದರೆ, ಎಲ್ಲವನ್ನೂ 1947ರ ಹಿಂದಿನ ರಾಜಕೀಯಾನುಭವದ ಬೆಳಕಿನಲ್ಲೇ ನೋಡುತ್ತಾರೆ. ಸ್ವಾತಂತ್ರ್ಯೋತ್ತರ ಭಾರತದ ರಾಜಕಾರಣ ಕಾರಂತರಿಗೆ ತುಂಬ ಸುಲಭ. ಮುಂದೆ ನಡೆದದ್ದೆಲ್ಲವೂ ವಿಶ್ವಾಸ ದ್ರೋಹದ, ತಾಯ್ಗುಂಡತನದ, ಬೆನ್ನಲ್ಲಿಯ ಇರಿತದ ಕಥೆ. ಮುಂದಿನ ಮೂರು ದಶಕಗಳಲ್ಲಿ ಭಾರತದ ಸಾಮಾಜಿಕ, ರಾಜಕೀಯ ಜೀವನದಲ್ಲಿ ರೂಪುಗೊಂಡ ಹೊಸ ಶಕ್ತಿಗಳು, ಗುಂಪುಗಳು ಕಾರಂತರಿಗೆ ಅಪ್ರಸ್ತುತ. ಅವುಗಳ ಕನಸು, ಸಿದ್ಧಾಂತ, ಮನಸ್ಸು ಎಲ್ಲವೂ ಅವರಿಗೆ ಅಪರಿಚಿತ. ತೇಜಸ್ವಿಯವರ 'ಅಬಚೂರಿನ ಪೋಸ್ಟಾಫೀಸು' ಕೃತಿಯ ಹಿಂದಿನ ಜೀವನ ದರ್ಶನಕ್ಕೂ 'ನಾವು ಕಟ್ಟಿದ ಸ್ವರ್ಗ' ಕೃತಿಗೂ ಇರುವ ವ್ಯತ್ಯಾಸ ಈ ಮಾತನ್ನು ಸ್ಪಷ್ಟ ಪಡಿಸುತ್ತದೆ.

ಈ ಕಾರಣದಿಂದಾಗಿಯೇ 1947 ರಿಂದಾಚೆಗಿನ ಭಾರತದ ಸಾಮಾಜಿಕ–ರಾಜಕೀಯ ಅನುಭವದ ಬಗ್ಗೆ ಕಾರಂತರ ಕಾದಂಬರಿಗಳು ಹೊಸ ಅನುಭವವನ್ನಾಗಲೀ, ಒಳ ನೋಟವನ್ನಾಗಲೀ ನೀಡುವುದಿಲ್ಲ. ಈ ಘಟ್ಟದಲ್ಲಿ ಅವರ ಸಾಧನೆಗಳೇನಿದ್ದರೂ ವ್ಯಕ್ತಿಯ ಬದುಕಿನ ಬಗ್ಗೆ ಅವರಿಗಿರುವ ಶೋಧನಾ ಸಾಮರ್ಥ್ಯಕ್ಕೆ ಸಂಬಂಧಿಸಿದ್ದು.

## 4

ಎಲ್ಲ ದೊಡ್ಡ ಲೇಖಕರಲ್ಲಿ ಆಗುವ ಹಾಗೆ ಕಾರಂತರಲ್ಲಿಯೂ ಅವರ ಶಕ್ತಿಗಳೇ ಮಿತಿಗಳೂ ಹೌದು. ಈ ಭಾಗದಲ್ಲಿ ಕಾರಂತ ಪ್ರತಿಭೆಯ ನಿರ್ದಿಷ್ಟತೆಯನ್ನು ವ್ಯಕ್ತಿವಿಶಿಷ್ಟತೆಯನ್ನು ಚರ್ಚಿಸುವ ಪ್ರಯತ್ನ ಮಾಡಲಾಗುವುದು.

ಕಾರಂತಪ್ರತಿಭೆ ಮೂಲತಃ ಸಾಮಾಜಿಕವಾದದ್ದು. ಅಂದರೆ, ಮನುಷ್ಯನ ಸಾಮಾಜಿಕ ವ್ಯಕ್ತಿತ್ವವೇ ಅವರಿಗೆ ಪ್ರಧಾನ. ಇದನ್ನೇ 'Enlightenist severity' ಎಂದು ಕರೆಯಬಹುದು. ಜೀವನದ ನಿಗೂಢ, ಅಥವಾ ಧಾರ್ಮಿಕ, ಅನುಭಾವೀ ಆಯಾಮಗಳ ಕಡೆಗೆ ಕಾರಂತರು ಅಷ್ಟಾಗಿ ಪ್ರತಿಸ್ಪಂದಿಸುವುದಿಲ್ಲ. ಹೀಗಾಗಿ, ಧರ್ಮದ ಬಗೆಗೆ, ಅನುಭಾವದ ಬಗೆಗೆ ಅವರದು ಯಾವಾಗಲೂ ಸಂದೇಹದ ದೃಷ್ಟಿ ಕೋನವೇ. ಆದರೆ, ಕುವೆಂಪು ಹಾಗಲ್ಲ, ಕುವೆಂಪು ಪ್ರತಿಭೆಗೆ ಜೀವನದ ಈ ಆಯಾಮದ ಬಗ್ಗೂ ವಿಶೇಷ ಕುತೂಹಲವಿದೆ.

ಕಾರಂತರ ತೀಕ್ಷ್ಣವೈಚಾರಿಕತೆ, ಅನೇಕ ಕಡೆ ಒಣ ರೂಪವನ್ನು ತಾಳುವ ಅವರ ವೈಚಾರಿಕತೆ ಬರುಬರುತ್ತಾ ದೊಡ್ಡ ಸಮಸ್ಯೆಯೇ ಆಗಿಬಿಟ್ಟಿತು. ಅವರಲ್ಲಿದ್ದ ಇನ್ನೊಂದು ಧಾರೆಯನ್ನು ಗೌಣವಾಗಿಸುವತನಕ ಅದು ವಿಜೃಂಭಿಸಿತು. ಇದನ್ನೆ ಇನ್ನೊಂದು ರೀತಿಯಲ್ಲಿ ಹೀಗೆ ವಿವರಿಸಬಹುದು. ಕಾರಂತ ಪ್ರತಿಭೆಯಲ್ಲಿ ಮೂಲತಃ ಎರಡು ಧಾರೆಗಳಿವೆ. ಒಂದು, ಕಾವ್ಯಾತ್ಮಕ. ಇನ್ನೊಂದು, ವೈಚಾರಿಕ. ಕಾವ್ಯಾತ್ಮಕ ಧಾರೆಯ ಅತ್ಯುತ್ತಮ ಕೃತಿ 'ಮರಳಿ ಮಣ್ಣಿಗೆ'. ಈ ಧಾರೆಯ ಇನ್ನೊಂದು ಪ್ರಮುಖ ಕೃತಿ ಎಂದರೆ 'ಬೆಟ್ಟದ ಜೀವ'. ಈ ವೈಚಾರಿಕ ಧಾರೆಯ ಶ್ರೇಷ್ಠಕೃತಿ 'ಅಳಿದ ಮೇಲೆ'.

ಐವತ್ತರ ದಶಕದತನಕ ಕಾರಂತರ ಕೃತಿಗಳಲ್ಲಿ ಈ ಎರಡೂ ಧಾರೆಗಳ ಸೃಜನಾತ್ಮಕ ಅಂತರ್‌ವ್ಯಾಪಾರಗಳನ್ನು ಕಾಣುತ್ತೇವೆ. ಆದರೆ, ಐವತ್ತರ ದಶಕ ದಿಂದಾಚೆಗೆ ಅವರಲ್ಲಿ ವೈಚಾರಿಕ ಧಾರೆಯೇ ಪ್ರಮುಖವಾದದ್ದನ್ನು ಕಾಣುತ್ತೇವೆ. ಆದರೂ, 'ಮೈಮನಗಳ ಸುಳಿಯಲ್ಲಿ' ಕಾದಂಬರಿಯಲ್ಲಿ ಮತ್ತೆ ಇವೆರಡೂ ಧಾರೆಗಳ ಸೃಜನಾತ್ಮಕ ಸಂಗಮದ ಪ್ರಯತ್ನವಿದೆ. ಈ ಕಾರಣದಿಂದಲೇ ಈ ಕಾದಂಬರಿಯಲ್ಲಿ ವಿಚಿತ್ರ ಬಗೆಯ ಲವಲವಿಕೆ, ಕಾವ್ಯಾತ್ಮಕ ಸಲಿಲತೆಯನ್ನು ಕಾಣಬಹುದು.

ಈ ಹಂತದಲ್ಲಿ ಕುವೆಂಪು ಮತ್ತು ಕಾರಂತರ ನಡುವಿನ ವ್ಯತ್ಯಾಸಗಳ ಚರ್ಚೆ ತುಂಬ ಕುತೂಹಲಕಾರಿ ಸಂಗತಿಗಳನ್ನು ಹೊರಚೆಲ್ಲುತ್ತದೆ. ಕುವೆಂಪು ಕಾದಂಬರಿಗಳು ಎಪಿಕ್-ಡ್ರಮಾಟಿಕ್ ಮಾದರಿಯವು. ಅದರಲ್ಲಿಯೂ ಈ ಮಾತು 'ಕಾನೂರು ಹೆಗ್ಗಡಿತಿ'ಗೆ ವಿಶೇಷವಾಗಿ ಸಲ್ಲುವಂಥದು. 'ಮಲೆಗಳಲ್ಲಿ ಮದುಮಗಳು' ಕೂಡಾ ವಿವರಪೂರ್ಣಸಮೃದ್ಧತೆಯಲ್ಲಿಯೂ ಅದ್ಭುತ ನಾಟಕ ಗುಣವನ್ನು ಹೊಂದಿದೆ. ಎಂಥದೇ ತೀವ್ರ ಕ್ರಿಯೆಯಿರಲಿ ಕುವೆಂಪು ಬೀದಿ ಬದಿಯ ಹೂವನ್ನು ಬಾಗಿ ಎತ್ತಿಕೊಳ್ಳುವಷ್ಟರ ವ್ಯವಧಾನವನ್ನು ಉಳಿಸಿಕೊಂಡಿರುತ್ತಾರೆ. ಇಲ್ಲವೆ, ವಿವರ ಗಳನ್ನೆ ಕ್ರಿಯೆಯನ್ನಾಗಿ ಪರಿವರ್ತಿಸುತ್ತಾರೆ. ಈ ದೃಷ್ಟಿಯಿಂದ ಕಾರಂತರದು ಬಿಗಿಹುಬ್ಬಿನ ಬರವಣಿಗೆ. ಸ್ಟೆಂಡಲನಿಗೆ ಹೆಚ್ಚು ಸಮೀಪವಿರುವಂಥದು. ಕುವೆಂಪು ಬಾಲ್ಜಾಕನಿಗೆ ಹೆಚ್ಚು ಹತ್ತಿರ.

ಕಡೆಯಲ್ಲೊಂದು ದೊಡ್ಡ ಕೊರಗಿನ ಪ್ರಸ್ತಾಪ ಮಾಡಬೇಕಾಗಿದೆ. ಯಾವುದೇ ಪರಂಪರೆಯ ಪ್ರಮುಖ ಲಕ್ಷಣವಾದ 'Vital contrast 'ನ ಗೈರುಹಾಜರಿಯ ಬಗೆಗಿನ ದುಃಖ ಅದು. ಈ ಕಾರಣದಿಂದಲೇ ಕನ್ನಡದಲ್ಲಿ ಮಹಾ ವಾಸ್ತವವಾದಿ ಪರಂಪರೆ ಇಲ್ಲ ಎಂದದ್ದು. ಇರುವ ವ್ಯತ್ಯಾಸಗಳು 'ಹೆಗ್ಗಡಿತಿ' 'ಮರಳಿ ಮಣ್ಣಿಗೆ'- 'ಗ್ರಾಮಾಯಣ'ಕ್ಕೆ ನಿಂತು ಬಿಡುತ್ತವೆ.

ಈಚೆಗಿನ ಕಾರಂತರ ಬಗೆಗೆ ಬರೆಯಲು ಅಷ್ಟೊಂದು ಉತ್ಸಾಹ ಬರುವುದಿಲ್ಲ. ಕಾರಂತರು ಕಾದಂಬರಿ ರೂಪದ ಬಗೆಗೆ ತಳೆದ ಅಲಕ್ಷ್ಯ ಅವರಲ್ಲೊಂದು ಬಗೆಯ ಅಸೂಕ್ಷ್ಮತೆ ಹುಟ್ಟಲು ಕಾರಣವಾಯಿತು ಎಂದು ಲಂಕೇಶರು ಬರೆದ ಮಾತು ನಿಜ ಎನ್ನಿಸುತ್ತದೆ. ಕಾರಂತರಿಗೆ ಈಚೆಗೆ ಮನುಷ್ಯರಲ್ಲಿ ಆಸಕ್ತಿ ಇಲ್ಲ. ಜೀವನದ ಸೂಕ್ಷ್ಮಗಳಲ್ಲಿ ಆಸಕ್ತಿ ಇಲ್ಲ. ಪಾತ್ರಗಳಿಗೆ ಬದಲಾಗಿ ಸಿದ್ಧಾಂತಗಳು ತುಂಬಿಹೋಗಿವೆ.

ಈ ರೀತಿಯ ಕೊರಗು ಏನೇ ಇದ್ದರೂ ಅದು ಗೌಣ ಎಂದು ಈ ಲೇಖಕನ ಅನಿಸಿಕೆ. ಏಕೆಂದರೆ, ಮರಳಿ ಮಣ್ಣಿಗೆ, ಬೆಟ್ಟದ ಜೀವ, ಅಳಿದ ಮೇಲೆ, ಮೈಮನಗಳ ಸುಳಿಯಲ್ಲಿ-ಕೃತಿಗಳನ್ನು ನೀಡಿದ ಲೇಖಕ ನಿಸ್ಸಂದೇಹವಾಗಿ ಕನ್ನಡ ಕಾದಂಬರಿ ಪರಂಪರೆಯಲ್ಲಿ ಅತ್ಯಂತ ದೊಡ್ಡ ಲೇಖಕ.

ಈಗ ಏನಿದ್ದರೂ ಕಾರಂತರನ್ನು ದಾಟಿ ಹೋಗುವ ಪ್ರಯತ್ನವಾಗಬೇಕು. ಕನ್ನಡದಲ್ಲಿ ಅಂಥ ಪ್ರಯತ್ನವಾಗಿದೆ. ಲಂಕೇಶ್, ಅನಂತಮೂರ್ತಿ, ಆಲನಹಳ್ಳಿ, ಕಂಬಾರ, ದೇಸಾಯಿ ಮುಂತಾದವರು ಕನ್ನಡ ಕಾದಂಬರಿ ಪರಂಪರೆಯಲ್ಲಿ ಕಾರಂತರಿಗಿಂತ ಸಂಪೂರ್ಣ ಭಿನ್ನವಾಗಿ ಸೃಷ್ಟಿಸಿದ್ದಾರೆ. ಆದ್ದರಿಂದ ಕನ್ನಡ ಕಾದಂಬರಿಯ ದಾರಿ ಮುಂದೆ ಆಶಾಪೂರ್ಣ.

(1) [illegible] – ಮರಳಿ ಮಣ್ಣಿಗೆ
ಬೆಟ್ಟದ ಜೀವ

(2) ವೈಚಾರಿಕ – "ಅಳಿದ ಮೇಲೆ"

1950ರ [illegible]
[illegible]
[illegible]
" [illegible]

# ಕಾರಂತರ ಕಾದಂಬರಿಗಳಲ್ಲಿ ಜೀವನಶ್ರದ್ಧೆ ಮತ್ತು ಶೋಧನೆ*

ಜಿ. ಎಚ್. ನಾಯಕ

ಜೀವನಶ್ರದ್ಧೆ ಶಿವರಾಮ ಕಾರಂತರ ಕಾದಂಬರಿಗಳ ಕೇಂದ್ರ ವಸ್ತುವಾಗಿದೆ. ಆದರ ಶೋಧನೆ ಕಾದಂಬರಿಕಾರ ಕಾರಂತರ ಪ್ರಧಾನ ಕಾಳಜಿಯಾಗಿದೆ. ಆ ಶ್ರದ್ಧೆ ಮತ್ತು ಆದರ ಶೋಧನೆಯ ಪ್ರಕ್ರಿಯೆಯಲ್ಲಿ ಪಡೆಯುವ ಅನುಭವ ಮತ್ತು ಸೋಸಿ ಕೊಳ್ಳುವ ಅರಿವು ಕಾರಂತರ ಕಾದಂಬರಿಗಳ ಜೀವದ್ರವ್ಯಗಳಾಗಿವೆ. ಆದ್ದರಿಂದ ಜೀವನ ಶ್ರದ್ಧೆಯ ಸ್ವರೂಪ ಮತ್ತು ಅದರ ಶೋಧನೆಯ ವಿಧಾನಗಳ ಅಧ್ಯಯನವು ಕಾರಂತರ ಕಾದಂಬರಿಗಳ ಮೂಲಕ ಧ್ವನಿ ಪಡೆಯುವ ಜೀವನಾನುಭವ ಮತ್ತು ಅದರ ಅಭಿವ್ಯಕ್ತಿಗೆ ಸಂಬಂಧಿಸಿದ ಮಿತಿ-ಮಹತ್ವಗಳನ್ನು ಅರಿಯುವುದಕ್ಕೂ ಹೆಚ್ಚು ಪ್ರಯೋಜನ ಕಾರಿಯಾಗುತ್ತದೆ.

## 1

ಕಾರಂತರಿಗೆ ಇಹ ಮುಖ್ಯ; ಇಹದ ಬದುಕು ಮುಖ್ಯ. ಬದುಕಿನೊಂದಿಗೆ ವ್ಯಕ್ತಿ ಅಥವಾ ವ್ಯಕ್ತಿಗಳು ಏರ್ಪಡಿಸಿಕೊಳ್ಳುವ ಸಂಬಂಧದ ಸ್ವರೂಪವನ್ನು ಶೋಧಿಸು ವುದು ಹಾಗೂ ಆ ಶೋಧನೆಯ ಪ್ರಕ್ರಿಯೆಯಲ್ಲಿ ಬದುಕಿಗೆ ಮತ್ತು ಬದುಕಿನಲ್ಲಿ

* ಕೇವಲ ಇಪ್ಪತ್ತು ನಿಮಿಷಗಳ ಕಾಲಾವಧಿಯಲ್ಲಿ ಮಂಡಿಸಬೇಕಾದ ಪ್ರಬಂಧದಲ್ಲಿ ಕಾರಂತರ ಈವರೆಗಿನ ನಾಲ್ವತ್ತೂರು ಕಾದಂಬರಿಗಳನ್ನೂ ಬಿಡಿಬಿಡಿಯಾಗಿ ವಿಶ್ಲೇಷಿಸಿ, ವಿವೇಚಿಸಿ ವಿಮರ್ಶನ ತೀರ್ಮಾನಗಳಿಗೆ ಬರುವುದಕ್ಕೆ ಸಾಧ್ಯವೂ ಇಲ್ಲ. ಅದರ ಅಗತ್ಯವೂ ಇಲ್ಲಿ ಕಾಣಿಸುವುದಿಲ್ಲ. ಆದ್ದರಿಂದ ಕಾರಂತರ ಕಾದಂಬರಿಗಳ ಒಟ್ಟು ಸಂದರ್ಭವನ್ನು ಮನಸ್ಸಿನೆದುರು ಇಟ್ಟುಕೊಂಡು ಅವರ ಕಾದಂಬರಿಗಳಲ್ಲಿನ ಜೀವನ ಶ್ರದ್ಧೆಯ ಸ್ವರೂಪ ಮತ್ತು ಶೋಧನೆಯ ವಿಧಾನ—ಇವುಗಳನ್ನು ಕುರಿತಂತೆ ಮಹತ್ವದ ವೆಂದು ನಾನು ತಿಳಿದಂಥ ಕೆಲವು ಅಂಶಗಳನ್ನು ನಿಮ್ಮೆದುರು ಪ್ರಸ್ತಾಪಿಸಲು ಬಯಸು ತ್ತೇನೆ. ನನ್ನ ಮತ್ತು ನಿಮ್ಮ ನಡುವೆ ಅಗತ್ಯವಾದ ಸಂವಹನವನ್ನು ಏರ್ಪಡಿಸಿ ಕೊಳ್ಳುವುದಕ್ಕಾಗಿ ಅಲ್ಲಲ್ಲಿ ಕಾದಂಬರಿಗಳ ಕೆಲವು ಪಾತ್ರ, ಸಂದರ್ಭಗಳನ್ನು ಸೂಚಿಸು ತ್ತೇನೆ; ನೆನಪಿಸುತ್ತೇನೆ. ಪೀಠಿಕೆಯಾಗಿ ಇಷ್ಟನ್ನು ನಿಮ್ಮಲ್ಲಿ ನಿವೇದಿಸಿಕೊಂಡು ನನ್ನ ಪ್ರಬಂಧವನ್ನು ನಿಮ್ಮೆದುರು ಮಂಡಿಸುವುದಕ್ಕೆ ಈ ಗೋಷ್ಠಿಯ ಅಧ್ಯಕ್ಷರ, ನಿರ್ವಾಹ ಕರ ಮತ್ತು ಸಭಾಸದರಾದ ನಿಮ್ಮ ಅನುಮತಿಯನ್ನು ಕೋರುತ್ತೇನೆ.

ಎದುರಾಗುವ ಸಮಸ್ಯೆ ಸನ್ನಿವೇಶಗಳಿಗೆ, ಅವು ಉಂಟುಮಾಡುವ ಸಿಹಿ-ಕಹಿ ಅನುಭವಗಳಿಗೆ ವ್ಯಕ್ತಿ ಅಥವಾ ವ್ಯಕ್ತಿಗಳು ತೋರಿಸುವ ಪ್ರತಿಕ್ರಿಯೆ ಮುಖ್ಯ. ಆ ಮೂಲಕ ಆಯಾ ವ್ಯಕ್ತಿಗಳ ಬದುಕಿನ ಸಾರ್ಥಕತೆ ಅಸಾರ್ಥಕತೆಗಳನ್ನು ಕಲಾತ್ಮಕ ನೆಲೆಯಲ್ಲಿ ಕಾಣಿಸಲು, ವ್ಯಾಖ್ಯಾನಿಸಲು ಯತ್ನಿಸುವುದು ಕಾರಂತರ ರೀತಿ. ಏಕೆಂದರೆ, ಆಯಾ ವ್ಯಕ್ತಿಗಳು ತೋರಿಸುವ ಪ್ರತಿಕ್ರಿಯೆ ಅವರವರ ಸ್ವಂತದ ಬದುಕಿನ ಸುಖ-ದುಃಖ, ಶ್ರೇಯಸ್ಸು—ಸೋಲುಗಳಿಗೆ ಮಾತ್ರ ಕಾರಣವಾಗದೆ ಅವರ ಜೊತೆಯಲ್ಲಿ ಬಾಳುವವರ, ಬಾಳಬೇಕಾದವರ, ಬಾಳಬಹುದಾದವರ ಸುಖ-ದುಃಖ, ಶ್ರೇಯಸ್ಸು—ಸೋಲುಗಳಿಗೂ ಬಹುಪಾಲು ಕಾರಣವಾಗುತ್ತದೆ. ಅಂದರೆ, ವ್ಯಕ್ತಿಯ ಬದುಕು ಸಾರ್ಥಕವಾಗುವುದು ಮತ್ತು ಸಮೂಹದ ಬದುಕು ಹಸನಾಗುವುದು ಬದುಕಿಗೆ ಮತ್ತು ಬದುಕಿನಲ್ಲಿ ಎದುರಾಗುವ ಸಮಸ್ಯೆಗಳಿಗೆ ವ್ಯಕ್ತಿ ಅಥವಾ ವ್ಯಕ್ತಿಗಳು ತೋರಿಸುವ ಪ್ರತಿಕ್ರಿಯೆಯನ್ನೇ ಅವಲಂಬಿಸಿರುತ್ತದೆ, ಎಂಬುದು ಕಾರಂತರ ತಿಳಿವಳಿಕೆಯಾಗಿದೆ. ಈ ಗ್ರಹಿಕೆಯ ಹಿನ್ನೆಲೆಯಲ್ಲಿಯೇ ಕಾರಂತರ ಕಾದಂಬರಿ ಪ್ರಪಂಚ ನಿರ್ಮಾಣವಾದಂತೆ ನನಗೆ ತೋರುತ್ತದೆ.

ಕಾರಂತರು ಮೆಚ್ಚುವ, ಸಹಾನುಭೂತಿ ತೋರಿಸುವ ಮತ್ತು ಗೌರವಿಸುವ ವ್ಯಕ್ತಿಗಳೆಲ್ಲ ಸಾಮಾನ್ಯವಾಗಿ ಒಂದು ಜೀವನ ಸಿದ್ಧಾಂತದ ಹಿನ್ನೆಲೆಯಲ್ಲಿ ತಮ್ಮ ಬದುಕನ್ನು ನಡೆಸುವ ಮನೋಭಾವದವರೆಂಬಂಥ ಬೋಧೆಯಾಗುತ್ತದೆ. ಸಮಾಜದಿಂದ ತಾನು ಪಡೆದದ್ದಕ್ಕಿಂತ ಕೊಟ್ಟದ್ದು ಒಟ್ಟಿನಲ್ಲಿ ಹೆಚ್ಚಾಗಬೇಕು, ಎಂಬುದೇ ಆ ಸಿದ್ಧಾಂತ. ಈ ದೃಷ್ಟಿ ಮೂಲತಃ ಸ್ವಾವಲಂಬನ ಮತ್ತು ಸಮಾಜದ ಋಣದ ಕಲ್ಪನೆಯಿಂದ ಪ್ರೇರಿತವಾದದ್ದು. ಇಂಥ ದೃಷ್ಟಿಯುಳ್ಳ ವ್ಯಕ್ತಿಯು ತನ್ನ ಬದುಕಿನ ನೆಮ್ಮದಿ, ಸುಖಗಳನ್ನು ಕೆಡಿಸಿಕೊಳ್ಳದೆ ಇತರರ ಅಥವಾ ಸಮೂಹದ ನೆಮ್ಮದಿ, ಸುಖಗಳಿಗೂ ಕಾರಣನಾಗುತ್ತಾನೆ. ವ್ಯಕ್ತಿ ಮತ್ತು ಸಮೂಹದ ಸುಖಗಳಿಗೆ ಕಾರಣವಾಗುವಂಥ ವ್ಯಕ್ತಿತ್ವದ ಶೋಧನೆಯೂ ಕಾರಂತರಲ್ಲಿ ಮೂಲತಃ ಜೀವನ ಶ್ರದ್ಧೆಯ ಶೋಧನೆಯೇ ಆಗುತ್ತದೆ.

ಅಂಥ ವ್ಯಕ್ತಿಗಳಿಗೆ ದುಡಿಮೆ ಧರ್ಮವಾಗುತ್ತದೆ; ಋಣಮುಕ್ತಿ ಜೀವನದ ಹಿರಿಯ ಮೌಲ್ಯವಾಗುತ್ತದೆ. ಕಾರಂತರ ಕಾದಂಬರಿಗಳಲ್ಲಿ ಈ ಧರ್ಮ ಮತ್ತು ಈ ಮೌಲ್ಯಕ್ಕೆ ನಿಷ್ಠರಾಗಿ ಬದುಕನ್ನು ಕಟ್ಟಿಕೊಳ್ಳುವ ಅಥವಾ ಹಾಗೆ ಕಟ್ಟಿಕೊಳ್ಳಲು ಪ್ರಾಮಾಣಿಕವಾಗಿ ಯತ್ನಿಸುವ ವ್ಯಕ್ತಿಗಳು ಕಾರಂತರ ಮೆಚ್ಚುಗೆ, ಸಹಾನುಭೂತಿ, ಗೌರವಗಳಿಗೆ ಪಾತ್ರರಾಗುತ್ತಾರೆ. ಅಂಥ ವ್ಯಕ್ತಿಗಳ ಲೌಕಿಕ ಸೋಲು ಗೆಲುವುಗಳ ಲೆಕ್ಕಾಚಾರ ಮುಖ್ಯವಾಗದೆ ಕಾರಂತರಿಗೆ ಅವರ ಬದುಕಿನ ಘನತೆ, ಜೀವನವನ್ನು ಇದಿರಿಸುವ ಸಾತ್ವಿಕ ಛಲ ಮುಖ್ಯವಾಗಿ ಕಾಣಿಸುತ್ತದೆ. ಕಾರಂತರ ಕಾದಂಬರಿಗಳಲ್ಲಿ ಕಥಾನಾಯಕರು

ಮತ್ತು ಮೇಲಿಂದಮೇಲೆ ಕಾಣಿಸಿಕೊಳ್ಳುವ ಮುದುಕಿಯರು ಸಾಮಾನ್ಯವಾಗಿ ಘನ ವಂತ ಬದುಕಿನ ಪ್ರತೀಕಗಳಾಗಿದ್ದಾರೆ. 'ಸನ್ಯಾಸಿಯ ಬದುಕು' ಕಾದಂಬರಿಯ ರುಕ್ಮಾಯಿ, 'ಸಮೀಕ್ಷೆ'ಯ ಗಂಗಜ್ಜಿ, 'ನಂಬಿದವರ ನಾಕ ನರಕ'ದ ಸಿಂಗಾರಮ್ಮ, 'ಅಳಿದಮೇಲೆ'ಯ ಪಾರೋತಿ, ಮೂಕಾಂಬು, 'ಇನ್ನೊಂದೇ ದಾರಿ'ಯ ಹೊನ್ನಜ್ಜಿ 'ಮೂಕಜ್ಜಿಯ ಕನಸುಗಳು' ಕಾದಂಬರಿಯ ಮೂಕಜ್ಜಿ, ತಿಪ್ಪಜ್ಜಿ, 'ಶನೀಶ್ವರನ ನೆರಳಿನಲ್ಲಿ'ಯ ಕಾವೇರಮ್ಮ, 'ಚಿಗುರಿದ ಕನಸು' ಕಾದಂಬರಿಯ ಶಂಕರನ ಅಜ್ಜಿ, 'ಕರುಳಿನ ಕರೆ'ಯ ವೆಂಕಮ್ಮ, 'ಭಾಗೀರಥಿ ಇಂಥವರನ್ನು ಇಲ್ಲಿ ಹೆಸರಿಬಹುದು. ಪರಿತ್ಯಕ್ತೆಯರು, ಆಳುಕಾಳುಗಳು, ಋಣದ ಕಲ್ಪನೆಯುಳ್ಳವರು—ಇಂಥವರಲ್ಲಿ ಹಲ ವರು ಈ ಗುಂಪಿಗೆ ಸೇರುತ್ತಾರೆ.

ದುಡಿಯದೆ ಸುಖಪಡೆಯುವ ಒಳಮಾರ್ಗಗಳನ್ನು ಹುಡುಕುವಂಥವರನ್ನು ವ್ಯಕ್ತಿಗಳ ಅಥವಾ ಸಮಾಜದ ಋಣವನ್ನು ತೀರಿಸಬೇಕಾದ ಒಂದು ಹಂಗು ಎಂದು ಭಾವಿಸದೆ ಹಕ್ಕೆಂಬಂತೆ ತಿಳಿಯುವವರನ್ನು ಇನ್ನೊಂದು ಗುಂಪಿಗೆ ಸೇರಿಸಬಹುದು. ಅಂಥವರ ಬಗ್ಗೆ ಕಾರಂತರಿಗೆ ಅಸಹನೆ, ಕೋಪ. ಅಂಥ ವ್ಯಕ್ತಿಗಳನ್ನು ಕುರಿತ ನಿರೂಪಣೆ, ವ್ಯಾಖ್ಯಾನಗಳ ಧಾಟಿಯಲ್ಲಿಯೂ ಕಾರಂತರ ಮುನಿಸು ವ್ಯಕ್ತವಾಗುತ್ತದೆ. ಏಕೆಂದರೆ, ಅಂಥ ವ್ಯಕ್ತಿಗಳು ಪಡೆಯಬಹುದಾದ ಸುಖ ತಮ್ಮನ್ನೇ ನಂಬಿದ ಇತರರ ಮತ್ತು ಸುತ್ತಮುತ್ತಲಿನ ಸಮಾಜದ ಹತ್ತು ಮಂದಿಯ ಸುಖವನ್ನು ಕೆಡಿಸುವಂಥದಾಗು ತ್ತದೆ. ಅಂಥವರ ಬದುಕು ಕೇವಲ ಸ್ವಾರ್ಥದ ಬದುಕಾಗುತ್ತದೆ. ಅಂಥ ಬದುಕು ಮಾನವೀಯ ಆವರಣವನ್ನು ಸೃಷ್ಟಿಸುವುದರಲ್ಲಿ ಸಹಕಾರಿಯಾಗದ ತಾಮಸಪರಿಸರವನ್ನು ನಿರ್ಮಿಸುವಂಥದಾಗುತ್ತದೆ. ಇಂಥ ವ್ಯಕ್ತಿಗಳಿಗೆ ಪ್ರತೀಕಗಳಾಗಿ ಸಾಮಾನ್ಯವಾಗಿ ಕಾರಂತರ ಕಾದಂಬರಿಗಳಲ್ಲಿ ಬರುವ ಸನ್ಯಾಸಿಗಳು ಕಾಣಿಸುತ್ತಾರೆ. 'ಸಮೀಕ್ಷೆ'ಯ ರಮಾನಂದ ಬುವಾ', 'ನಂಬಿದವರ ನಾಕ ನರಕ'ದ ಭವಾನಂದ, ಜಗದೋದ್ಧಾರ... ನಾ'ದ ವಿಷ್ಣು, 'ಆಳನಿರಾಳ'ದ ಅಭೂತಾನಂದ, 'ದೇವದೂತರು' ಕಾದಂಬರಿಯ ಬ್ರಹ್ಮಾನಂದ ಶ್ರೀಪಾದಂಗಳು, ಪ್ರಭುಮಹಾರಾಜ, 'ಸನ್ಯಾಸಿಯ ಬದುಕು'ಕಾದಂಬರಿಯ ಕೃಷ್ಣಾನಂದ, ಮಂಜುಳಾನಂದ, 'ಕಣ್ಣಿದ್ದೂ ಕಾಣರು' ಕಾದಂಬರಿಯ ಅಲಕಾನಂದ, ಶುಚೀಂದ್ರ ತೀರ್ಥಸ್ವಾಮಿ—ಇಂಥವರನ್ನು ಇಲ್ಲಿ ಹೆಸರಿಸಬಹುದು. ತಮ್ಮ ಬದುಕನ್ನು, ಅದರ ಹೊಣೆಗಾರಿಕೆಯನ್ನು ಇದಿರಿಸಲಾರದೆ ತಮ್ಮನ್ನು ನಂಬಿದವರನ್ನು ನಡು ನೀರಿನಲ್ಲಿ ಕೈಬಿಟ್ಟು ಪಲಾಯನ ಮಾಡುವ ಇತರ ಹೇಡಿಗಳೂ ಸೋಗಿನ ಗಾಂಧೀ ವಾದಿಗಳೂ ಧೂರ್ತರಾಜಕಾರಣಿಗಳೂ ಜ್ಞಾನದರ್ಪ ತೋರಿಸುವ ಪ್ರಾಧ್ಯಾಪಕರೂ ಪ್ರಚಾರಪ್ರಿಯ ಕಲೆಗಾರರೂ ಸನ್ಯಾಸಿಗಳ ಭಕ್ತಪರಿವಾರದವರೂ ಈ ಗುಂಪಿಗೆ ಸೇರು ತ್ತಾರೆ.

ಈ ಎರಡೂ ಗುಂಪುಗಳಿಗೆ ಖಚಿತವಾಗಿ ಸೇರಿಸಲಾಗದಂತೆ ಇರುವ ಪಾತ್ರಗಳು ಕಾರಂತರ ಕಾದಂಬರಿಗಳಲ್ಲಿ ಹೇರಳವಾಗಿ ಇವೆ. ಅಂಥ ಪಾತ್ರಗಳು ಕಾರಂತರ ಜೀವನ ಶ್ರದ್ಧೆ ಮತ್ತು ಶೋಧನೆಯ ನೇರ ಮಾಧ್ಯಮಗಳಾಗಿರದೆ ಆ ಶೋಧನೆಗೆ ಅಗತ್ಯವಾದ ಜನಸಾಮಾನ್ಯ ಬದುಕಿನ ಆವರಣಸೃಷ್ಟಿಗೆ ಪೋಷಕ ಸಾಮಗ್ರಿಗಳಾಗುತ್ತವೆ.

ಎರಡನೆಯ ಗುಂಪಿಗೆ ಸೇರಿಸಬಹುದಾದ ಸನ್ಯಾಸಿಗಳು ಮತ್ತು ಆ ಗುಂಪಿನ ಇತರ ವ್ಯಕ್ತಿಗಳನ್ನು ಕುರಿತ ವಿವರಗಳಲ್ಲಿ 'ನೇತಿ', 'ನೇತಿ' ಎಂಬ ರೀತಿಯ ಧಾಟಿ, ಧೋರಣೆಗಳನ್ನು ಕಾಣುತ್ತೇವೆ. ಅಂದರೆ ಅವರೆಲ್ಲರೂ ಜೀವನಶ್ರದ್ಧೆಗೆ ಸಂಬಂಧಿಸಿದಂತೆ ಇರುವ ಕಾರಂತರ ತಿಳಿವಳಿಕೆಯ ವಿರುದ್ಧ ಗತಿಯನ್ನು ಬದುಕಿ ತೋರಿಸುವಂತಿದ್ದಾರೆ. ಮೊದಲ ಗುಂಪಿಗೆ ಸೇರಿಸಬಹುದಾದ ಮುದುಕಿಯರು, ಕಥಾನಾಯಕರು—ಇಂಥವರ ಬದುಕಿನ ವಿವರಗಳಲ್ಲಿ ಜೀವನಶ್ರದ್ಧೆಗೆ ಸಂಬಂಧಿಸಿದಂತೆ ಇರುವ ಕಾರಂತರ ತಿಳಿವಳಿಕೆಯು ವಿಧ್ಯರ್ಥಕ ಧಾಟಿ, ಧೋರಣೆಗಳಲ್ಲಿ ಸ್ಫುಟಗೊಳ್ಳುತ್ತ ಹೋಗುವುದನು ಕಾಣುತ್ತೇವೆ. ಆದ್ದರಿಂದ ಕಾರಂತರ ಕಾದಂಬರಿಗಳಲ್ಲಿನ ಜೀವನಶ್ರದ್ಧೆ ಮತ್ತು ಶೋಧನೆ ಹಾಗೂ ಅವುಗಳ ಮಿತಿ–ಮಹತ್ವಗಳನ್ನು ಗುರುತಿಸಿಕೊಳ್ಳುವುದಕ್ಕೆ ಈ ಮೊದಲ ಗುಂಪಿನ ಪಾತ್ರಗಳ ಜೀವನ ಸಂದರ್ಭಗಳ ಅಧ್ಯಯನ ಹೆಚ್ಚು ಪ್ರಯೋಜನ ಕಾರಿಯಾಗುತ್ತದೆ.

ಈ ಗುಂಪಿನ ಮುದುಕಿಯರು ಬ್ರಾಹ್ಮಣ ಜಾತಿಯವರು, ಸಾಮಾನ್ಯವಾಗಿ ಬಾಲವಿಧವೆಯರು ಇಲ್ಲವೆ ಏರು ಜವ್ವನದಲ್ಲಿರುವಾಗಲೇ ಗಂಡನನ್ನು ಕಳೆದು ಕೊಂಡಿರುವವರು. ಕಾದಂಬರಿಯಲ್ಲಿ ಕಾಣಿಸಿಕೊಳ್ಳುವಾಗ ಎಪ್ಪತ್ತು ಎಂಭತ್ತರ ಇಳಿ ವಯಸ್ಸಿನಲ್ಲಿರುವವರು. ಸಾವು, ಬದುಕನ್ನು ಸಮಭಾವದಿಂದ ಇದಿರಿಸುವ ಮನಸ್ಸಿನ ಸಿದ್ಧತೆ ಇರುವವರು. ಹಲವರು ಇಚ್ಛಾಮರಣಿಗಳೆಂಬಂತೆ ಕಾಣುವವರು. ಅವರೆಲ್ಲ ಇಲ್ಲದ್ದಕ್ಕೆ ಹಾತೊರೆಯದೆ, ಕಳೆದು ಹೋದದ್ದಕ್ಕೆ ಹಲುಬದೆ, ಮುಂದಿರುವ ಬಾಳನ್ನು ಆದಷ್ಟು ಚೆಂದಾಗಿ ನಡೆಸುವ ವಿವೇಕ ಮತ್ತು ಸಂಕಲ್ಪ ಉಳ್ಳವರು. ತಾವು ನಂಬಿ ಬಂದ ಸಂಪ್ರದಾಯದತ್ತವಾದ ಧಾರ್ಮಿಕ ತಿಳಿವಳಿಕೆಯ ಸಹಾಯದಿಂದ ತಮ್ಮ ಪರಿಸ್ಥಿತಿಯನ್ನು ಅರ್ಥಮಾಡಿಕೊಂಡು ಆ ಪರಿಸ್ಥಿತಿ ಒದಗಿಸಬಹುದಾದ ಮಿತ ಅವಕಾಶ ಮತ್ತು ಸೌಲಭ್ಯಗಳನ್ನು ಸದುಪಯೋಗಪಡಿಸಿಕೊಂಡು ಜನ್ಮಸಾರ್ಥಕ ಮಾಡಿಕೊಳ್ಳುವ ಹಂಬಲವುಳ್ಳವರು. ಸಾಧ್ಯವಾದಷ್ಟು ಬೇರೆಯವರ ಋಣದಲ್ಲಿ ಬೀಳದೆ ಉಳಿದವರ ಒಳಿತಿಗಾಗಿಯೇ ತಮ್ಮ ಬಾಳನ್ನು ತೇಯುವವರು. ಪರರ ಹಂಗಿ ನಲ್ಲಿರುವುದು ಅನಿವಾರ್ಯವೆಂಬಂತಾದಾಗಲೂ ಸಂಬಂಧಪಟ್ಟವರಿಗೆ ಭಾರ ಎನಿಸ ದಂತೆ ಬಾಳಿ ಆ ಮನೆಗೆ ಬೆಳಕಾಗುವವರು.

ಕಾರಂತರು ಈ ಮುದುಕಿಯರ 'ಅರಿವಿ'ಗಿಂತ 'ಇರವ'ನ್ನು ಹೆಚ್ಚಾಗಿ ಕೀರ್ತಿಸು ತ್ತಾರೆ. ಆ 'ಇರವು' ಮೂಲತಃ ಪರಂಪರಾಗತ ಮೌಲ್ಯಶ್ರದ್ಧೆ ಅಥವಾ ನಂಬಿಕೆಯನ್ನು

ಆಧರಿಸಿದ್ದು. ಆ ನಂಬಿಕೆಯ ತಿರುಳಿನ ಬಗ್ಗೆ ಕಾದಂಬರಿಕಾರ ಕಾರಂತರಿಗಾಗಲಿ, ಅವರ ಜೀವನದೃಷ್ಟಿಯನ್ನು ಪ್ರತಿನಿಧಿಸುವಂತಿರುವ ಕಥಾನಾಯಕರಿಗಾಗಲಿ ನಂಬಿಕೆ ಯೇನೂ ಇಲ್ಲ. ಆದರೆ ನಂಬಿದಂತೆ ಬಾಳುವ ಮುದುಕಿಯರ ಪ್ರಾಮಾಣಿಕತೆ ಅವರಿಗೆ ಬಲು ದೊಡ್ಡಗುಣವಾಗಿ ಕಾಣಸುತ್ತದೆ. ಎರಡನೆಯದಾಗಿ, ಕಾರಂತರ ಮಾದರಿ ಮುದುಕಿಯರು ತಮ್ಮ ನಂಬಿಕೆಯಲ್ಲಿರುವ ವೈಚಾರಿಕ ಕೊರತೆಯನ್ನು ಮಾನವೀಯ ಅಂತಃಕರಣ, ಹೃದಯವಂತಿಕೆಯ ಬತ್ತದ ಆರ್ದ್ರತೆಯ ಮೂಲಕ ತುಂಬಿಕೊಳ್ಳು ತ್ತಾರೆ. ಅವರ ಮಾನವೀಯ ತುಡಿತಗಳು ತುಂಬ ಆರೋಗ್ಯವಂತ ಮತ್ತು ಸೂಕ್ಷ್ಮ ಸಂವೇದನೆಯ ಫಲಗಳೆಂಬಂತೆ ತೋರುತ್ತವೆ. ಹಾಗಾಗಿ ಅವರ ಬಾಳನ್ನು ರೂಪಿಸಿದ ನಂಬಿಕೆಗಳು ಒಡ್ಡಬಹುದಾದ ತಡೆಗಳನ್ನು ದಾಟಿ ಫಲಿಸಬಲ್ಲ ಮಾನವೀಯ ಸ್ಪಂದನ, ಅಂತಃಕರಣಶುದ್ಧಿ ಅವರಿಗೆ ಸಾಧ್ಯವಾಗುತ್ತದೆ. ಆದ್ದರಿಂದ ನಂಬಿದಂತೆ ಬಾಳುವ ಪ್ರಾಮಾಣಿಕತೆಯ ಜೊತೆಗೆ ಮನಸ್ಸಿನ ಉದಾತ್ತತೆಯೂ ಸೇರಿಕೊಳ್ಳುವುದರಿಂದ ಕಾರಂತರ ಇಂಥ ಮುದುಕಿಯರು ಆದರ್ಶವ್ಯಕ್ತಿಗಳಾಗಿ ಕಾಣಿಸುತ್ತಾರೆ.

ಸಾಂಪ್ರದಾಯಿಕ ನಂಬಿಕೆಗಳು ಜೀವನವನ್ನು ಕುರಿತಂಥ ಅರಿವನ್ನು ಮಸುಕು ಗೊಳಿಸಬಹುದಾದಂಥವು, ಸಂಕುಚಿತಗೊಳಿಸಬಹುದಾದಂಥವು, ಮಾನವೀಯ ಅಂತಃ ಕರಣ ಇಲ್ಲವೆ ಹೃದಯವಂತಿಕೆಯನ್ನು ಕೆಲವು ಸಂಕೀರ್ಣ ಸಂದರ್ಭಗಳಲ್ಲಿಯಾದರೂ ಪಲ್ಲಟಗೊಳಿಸಬಹುದಾದಂಥವು ಎಂಬ ತಿಳಿವಳಿಕೆ ಕಾರಂತರಿಗೆ ಇಲ್ಲವೆಂಬಂತಿಲ್ಲ. ಕಾರಂತರು ಅಂಥ ಸಂದರ್ಭಗಳನ್ನೂ ತಮ್ಮ ಕಾದಂಬರಿಗಳಲ್ಲಿ ಚಿತ್ರಿಸಿದ್ದಾರೆ. 'ಚೋಮನದುಡಿ'ಯಲ್ಲಿ ಚೋಮನ ಮಗನೊಬ್ಬ ನೀರು ಪಾಲಾಗುವ ಸಂದರ್ಭದಲ್ಲಿ ಬ್ರಾಹ್ಮಣರು ಜಾತಿಮಡಿವಂತಿಕೆಯನ್ನು ಕುರಿತ ನಂಬಿಕೆಯಿಂದಾಗಿ ಮಾನವೀಯ ಅನುಕಂಪಕ್ಕೆ ಎರವಾದದ್ದನ್ನು ಇಲ್ಲಿ ನೆನೆಯಬಹುದು. 'ಚೋಮನದುಡಿ'ಯ ಸಂಕಪ್ಪಯ್ಯನ ತಾಯಿ, 'ಸಮೀಕ್ಷೆಯ' ವಾಸುದೇವಪ್ರಭುವಿನ ತಾಯಿ, 'ಇನ್ನೊಂದೇ ದಾರಿ'ಯ ಜಾನಕಿ—ಅವರ ನಡೆವಳಿಕೆಗಳನ್ನು ಇಲ್ಲಿ ನೆನೆಯಬಹುದು. ಅವರ ಮಾದರಿ ಮುದುಕಿಯರನ್ನು ಮಾತ್ರ ಕಾರಂತರು ಅದಕ್ಕೆ ಅಪವಾದವೆಂಬಂತೆ ಕಾಣಿಸಿದ್ದಾರೆ. ಆದರೆ ಸಾಂಪ್ರದಾಯಿಕ ನಂಬಿಕೆಯನ್ನು ಆಧರಿಸಿ, ಅದನ್ನು ಎಂದೂ ಪ್ರಶ್ನಿಸದೆ, ಅನುಮಾನಿಸದೆ ಬೆಳೆದು ಬಂದ ಈ ಮುದುಕಿಯರ ಮನಸ್ಸು ಮಾನವೀಯ ಸಂದರ್ಭ ಗಳಲ್ಲೆಲ್ಲ ಅಂತಃಕರಣದ ಸೂಕ್ಷ್ಮತೆಯನ್ನು ಕಳೆದುಕೊಳ್ಳದೆ ಉದಾತ್ತವಾಗಿಯೇ ವ್ಯವಹರಿಸುವುದರ ಗುಟ್ಟೇನು? ಎಂಬುದಕ್ಕೆ ಈ ಮುದುಕಿಯರ ಪಾತ್ರ ಸಂದರ್ಭ ಗಳಲ್ಲಿ ಓದುಗನಿಗೆ ಮನವರಿಕೆಯಾಗುವಷ್ಟು ಜೀವನಾನುಭವದ ವಿವರಗಳು ದೊರೆಯುವುದಿಲ್ಲ. ಆದ್ದರಿಂದ ಇಂಥ ಮುದುಕಿಯರು ಒಂದು ಬಗೆಯ ಸೂಕ್ಷ್ಮ ವಿರೋಧಾಭಾಸದಲ್ಲಿ ಸೃಷ್ಟಿಯಾದ ಪಾತ್ರಗಳಾಗಿ ಕಾಣಿಸುತ್ತಾರೆ. ಕಾದಂಬರಿಕಾರ ಅಂಥ ಪಾತ್ರಗಳನ್ನು ಹೆಚ್ಚಿನ ಭಾವಪಕ್ಷಪಾತದಿಂದ ನಡೆಸಿಕೊಂಡು ಹೋಗುತ್ತಿರು ವಂತೆ, ಸಂರಕ್ಷಕ ಮನೋಭಾವದಲ್ಲಿ ನಿರ್ವಹಿಸುತ್ತಿರುವಂತೆ ಅನ್ನಿಸುವಂತಾಗುತ್ತದೆ.

ಕಾರಂತರ ಕಾದಂಬರಿಗಳನ್ನೆಲ್ಲ ಓದಿದವರಿಗೆ ಈ ಮುದುಕಿಯರು, ಕಾರಂತರು ಚಿತ್ರಿಸುವ ಸೋಗಿನ ಸನ್ಯಾಸಿಗಳಿಗೆ ವೈದೃಶ್ಯ ರೂಪಗಳಾಗಿ ಬರುವ ಪಾತ್ರಗಳೆಂಬ ಬೋಧೆಯಾಗುತ್ತದೆ. ಕೆಲವು ಕಾದಂಬರಿಗಳಲ್ಲಿ ನೇರವಾಗಿಯೇ ಅಂಥ ವೈದೃಶ್ಯ ಎದ್ದು ಕಾಣುವಂತಿರುತ್ತದೆ (ಉದಾ : 'ಸನ್ಯಾಸಿಯ ಬದುಕು'). ಮುದುಕಿಯರೆಲ್ಲ ಪ್ರಾಮಾಣಿಕರು, ಸಾರ್ಥಕ ಜೀವಗಳು ; ಸನ್ಯಾಸಿಗಳೆಲ್ಲ ಸೋಗಿನವರು, ವಂಚಕರು; ಎಂಬುದು ಕಾರಂತರ ಕಾದಂಬರಿಗಳಲ್ಲಿ ಸಾಮಾನ್ಯ ಸೂತ್ರವೆಂಬಂತೆ ಇರುತ್ತದೆ. ಆದರೆ, ಕಾರಂತರು ಈ ಮುದುಕಿಯರ ಬಗ್ಗೆ ತೋರಿಸುವ ಸಂರಕ್ಷಕ ಮನೋಭಾವ ಅಥವಾ ಭಾವಪಕ್ಷಪಾತವನ್ನು ಸನ್ಯಾಸಿಗಳ ಬಗ್ಗೆ ತಾಳುವುದಿಲ್ಲ. ಆದ್ದರಿಂದ ಬದುಕಿನ ನಿಷ್ಠುರ ವಾಸ್ತವ ಸತ್ಯಗಳ ಬೆಳಕಿನಲ್ಲಿ ಮುದುಕಿಯರ ಪಾತ್ರಗಳ ವ್ಯಕ್ತಿತ್ವ ಸಿದ್ಧತೆ, ಮನಸ್ಸಿನ ಸಂಸ್ಕಾರಗಳನ್ನು ಪರೀಕ್ಷಿಸುವುದಿಲ್ಲ. ಅಂದರೆ ಸನ್ಯಾಸಿಗಳನ್ನು ನಿಷ್ಠುರ ವಾಸ್ತವದ ನಿಕಷಕ್ಕೆ ಒಡ್ಡುವಂತೆ ಮುದುಕಿಯರನ್ನು ಒಡ್ಡುವುದಿಲ್ಲ. ಮುದುಕಿಯರ ಸಂದರ್ಭದಲ್ಲಿ ನಿಷ್ಠುರ ವಾಸ್ತವ ಸತ್ಯಗಳ ಪ್ರಖರತೆಯನ್ನು ಕಾಣಿಸದೆ ದಾಟಿಸುತ್ತಿರುವಂತೆ ತೋರುತ್ತದೆ.

ಸಾಮಾನ್ಯವಾಗಿ ಮುದುಕಿಯರೆಲ್ಲ ಎಪ್ಪತ್ತು ಎಂಬತ್ತು ವರ್ಷಕ್ಕಿಂತ ಹೆಚ್ಚಿನ ವಯಸ್ಸಿನವರಾಗಿರುತ್ತಾರೆ. ಅವರೆಲ್ಲ ಬದುಕಿನ ಸಂಧ್ಯಾಕಾಲದಲ್ಲಿರುವವರು. ಸನ್ಯಾಸಿಗಳು ಯೌವನದಲ್ಲಿ ಅಥವಾ ನಡುವಯಸ್ಸಿನಲ್ಲಿ ಇರುವವರು. ಈ ವಯಸ್ಸಿನ ಕಾರಣದಿಂದಾಗಿ ದೇಹ ಧರ್ಮದ ಸೆಳೆತ ಸಹಜವಾಗಿಯೇ ಮುದುಕಿಯರಿಗಿಂತ ಸನ್ಯಾಸಿಗಳಿಗೆ ಹೆಚ್ಚು. ಅದು ಕಾಮದ ಒತ್ತಡ ಇರಬಹುದು ; ಆಹಾರಕ್ಕೆ ಸಂಬಂಧಪಟ್ಟ ಚಪಲ ಇರಬಹುದು. ಹಾಗೆಯೇ ಭವಿಷ್ಯಕ್ಕೆ ಸಂಬಂಧಪಟ್ಟ ಭಯದ ಪ್ರಶ್ನೆಯೂ ಆಗಿರಬಹುದು. ಅಂದರೆ, ಕಾರಂತರ ಕಾದಂಬರಿಗಳಲ್ಲಿ ಬದುಕಿನ ಮೂಲಭೂತ ಪ್ರಶ್ನೆಗಳನ್ನು ಎದುರಿಸುವುದಕ್ಕೆ ಅದನ್ನು ಉತ್ತರಿಸುವುದಕ್ಕೆ ಸಂಬಂಧಿಸಿದಂತೆ ಮುದುಕಿಯರಿಗಿರುವಷ್ಟು ಅನುಕೂಲ ಸನ್ಯಾಸಿಗಳಿಗೆ ಇರುವುದಿಲ್ಲ.

ಈ ಮುದುಕಿಯರಲ್ಲಿ ಹಲವರು ಬಾಲವಿಧವೆಯರಾಗಿದ್ದವರು ; ಕೆಲವರು ಏರುಜವ್ವನದಲ್ಲಿಯೇ ವಿಧವೆಯಾಗಿದ್ದವರು. ಸಾಂಪ್ರದಾಯಿಕ ನಂಬಿಕೆಗಳ ನೆಲೆಯಲ್ಲಿಯೇ ಪ್ರಾಮಾಣಿಕವಾಗಿ ಬದುಕನ್ನು ನಡೆಸಬೇಕೆನ್ನುವ ಇಂಥ ಹೆಂಗಸರಿಗೆ ಮುಂದಿನ ಬಾಳೆಲ್ಲ ಕಷ್ಟಾಯದ ಬ್ರಹ್ಮಚರ್ಯವಾಗುತ್ತದೆ. ಒಂದು ಬಗೆಯ ಅಸಹಾಯಕತೆಯಲ್ಲಿಯೇ ಬದುಕಿನ ಮೂಲಭೂತ ಅಗತ್ಯಗಳಲ್ಲೊಂದಾದ ಕಾಮದ ಪ್ರಶ್ನೆಯನ್ನು ಎದುರಿಸಬೇಕಾಗುತ್ತದೆ. ಈ ಮುದುಕಿಯರಲ್ಲಿ ಹೆಚ್ಚಿನವರು ಬಾಲವಿಧವೆಯರೇ ಆಗಿದ್ದದ್ದರಿಂದ ಹೆಂಗಸಿಗೆ ಸಹಜವಾದ ಮಕ್ಕಳ ಬಯಕೆಯೂ ಕಾಮದ ಪ್ರಶ್ನೆಯ ಜೊತೆಗೆ ಥಳಕು ಹಾಕಿಕೊಳ್ಳುವಂತಾಗುತ್ತದೆ. ಕಾರಂತರಲ್ಲಿ, ಸನ್ಯಾಸಿಗಳ ಸಂದರ್ಭಕ್ಕಿಂತ ಹೆಚ್ಚು ಜಟಿಲವಾದ ಕಾಮದ ಪ್ರಶ್ನೆಯನ್ನು ಮುದುಕಿಯರ ಬಾಳಿನ

ಸಂದರ್ಭದಲ್ಲಿ ಗೌಣವೆಂಬಂತೆ ನಿರ್ವಹಿಸುವುದನ್ನು ಕಾಣುತ್ತೇವೆ. ಬಾಲವಿಧವೆಯು ರಾದಾಗಿನಿಂದ ಗಂಡನನ್ನು ಕಳೆದುಕೊಂಡಾಗಿನಿಂದ ಮುಪ್ಪಿನವರೆಗಿನ ದೀರ್ಘ ಕಾಲಾವಧಿಯಲ್ಲಿ ಅವರ ಲೈಂಗಿಕ ಬದುಕಿಗೆ ಸಂಬಂಧಿಸಿದಂತೆ ಅವರು ಎದುರಿಸಬಹುದಾದ ಸಮಸ್ಯೆ, ನಡೆಸಿರಬಹುದಾದ ಏಕಾಂತದ ಹೋರಾಟ ಇವುಗಳ ವಿವರಗಳನ್ನು ಕಾರಂತರು ನೀಡುವುದಿಲ್ಲ. ಅವರ ಬಾಳಿನ ನಂಬಿಕೆಗಳು ಮತ್ತು ದೇಹದ ಬಯಕೆಗಳು ಎದುರುಬದುರಾದ ಸಂದರ್ಭಗಳು, ಆ ಮುಖಾಮುಖಿಯಲ್ಲಿ ನಂಬಿಕೆ ತನ್ನ ಹಿರಿಮೆಯನ್ನು ಸ್ಥಾಪಿಸಿದ ಬಗೆಗಳು—ಇವುಗಳನ್ನು ಕುರಿತ ವಿವರಗಳಿಲ್ಲದಿರುವುದರಿಂದ ಈ ಮುದುಕಿಯರು ಸಿದ್ಧಪಾತ್ರಗಳಾಗಿಯೇ ಕಾಣಿಸಿಕೊಳ್ಳುವಂತಾಗಿದೆ. ಅವರು ಬಾಳಿನಲ್ಲಿ ಕಾಮಮುಕ್ತ ಜೀವಿಗಳೆಂಬಂತೆ ಕಾಣುತ್ತಾರೆ.

ಕಾರಂತರು, ಲೈಂಗಿಕ ಬಯಕೆಯ ಸೆಳೆತ ಎಷ್ಟು ಬಲವಾದದ್ದೆಂಬುದನ್ನು ಬಲ್ಲವರು ಮಾತ್ರವಲ್ಲ, ತಮ್ಮ ಕಾದಂಬರಿಗಳಲ್ಲಿ ಅದನ್ನು ಗಂಭೀರವಾದ ಶೋಧನೆಗೆ ಒಳಪಡಿಸಿರುವ ತುಂಬ ಮಹತ್ವದ ಬರಹಗಾರರೂ ಆಗಿದ್ದಾರೆ ಎಂಬುದನ್ನು ಯಾರೂ ಅಲ್ಲಗಳೆಯುವಂತಿಲ್ಲ. 'ಚೋಮನದುಡಿ'ಯ ಬೆಳ್ಳಿ, 'ಸನ್ಯಾಸಿಯ ಬದುಕು' ಕಾದಂಬರಿಯ ವಿಧವೆ ಸುಮನಾಬಾಯಿ, 'ನಂಬಿದವರ ನಾಕನರಕ'ದ ಸತ್ಯಭಾಮೆ, 'ಮುಗಿದ ಯುದ್ಧ'ದ ಅಚ್ಯುತ, 'ಅಳಿದ ಮೇಲೆ'ಯ ಯಶವಂತರಾಯ, 'ಮೈಮನಗಳ ಸುಳಿಯಲ್ಲಿ'ಯ ಮಂಜುಳೆ, ಉಳ್ಳೂರ ಸುಬ್ರಾಯ, ಲಕ್ಷ್ಮಣತೀರ್ಥ ಸ್ವಾಮಿ, 'ಕೇವಲ ಮನುಷ್ಯರು' ಕಾದಂಬರಿಯ ಕಾವೇರಿ, ಶಾಂತಾಬಾಯಿ, ಹಯವದನರಾಯ, ಅಭಿನ್ನಾನಂದ (ಮುಕುಂದಕಮ್ತಿ), 'ಮೂಕಜ್ಜಿಯ ಕನಸುಗಳು' ಕಾದಂಬರಿಯ ನಾಗಿ, ಅನಂತರಾಯ, ಓಂಟಿದನಿ'ಯ ಪ್ರೊ. ಶಹಾ—ಮೊದಲಾದ ವ್ಯಕ್ತಿಗಳ ಸಂದರ್ಭದಲ್ಲಿ ಲೈಂಗಿಕ ಬಯಕೆಯ ಸೆಳೆತದ ವೈವಿಧ್ಯಮಯವಾದ ವ್ಯವಹರಣೆಗಳನ್ನು ತೋರಿಸಿದ್ದಾರೆ. ಜೊತೆಗೆ, 'ಸರಸಮ್ಮನ ಸಮಾಧಿ', 'ಸ್ವಪ್ನದ ಹೊಳೆ', 'ಮೂಕಜ್ಜಿಯ ಕನಸುಗಳು', 'ಮೈಮನಗಳ ಸುಳಿಯಲ್ಲಿ', 'ಕೇವಲ ಮನುಷ್ಯರು'—ಇಂಥ ಕಾದಂಬರಿಗಳಲ್ಲಿಯಂತೂ ಈ ಲೈಂಗಿಕ ಸಮಸ್ಯೆಯ ಸ್ವರೂಪದ ಗಂಭೀರವಾದ ಅನ್ವೇಷಣೆಯನ್ನು ಕಾರಂತರು ನಡೆಸಿದ್ದಾರೆ. ಆದರೆ ಇಲ್ಲಿ ನಾನು ಹೇಳಬೇಕೆಂದಿರುವ ಅಂಶವಿದು: ಕಾರಂತರ ಕಾದಂಬರಿಗಳಲ್ಲಿ ಜೀವನ ಮೌಲ್ಯದ ಗಟ್ಟಿಯಾದ ನೆಲೆಯೊಂದನ್ನು ಗುರುತಿಸಿಕೊಡುವಂತಿರುವ, ಪ್ರಾತಿನಿಧಿಕ ಪಾತ್ರಗಳೆಂಬಂತಿರುವ ಮುದುಕಿಯರ ಬಾಳಿನ ಸಂದರ್ಭದಲ್ಲಿ ಸಹಜವಾಗಿಯೇ ಎದುರಾಗಬಹುದಾದ ಪ್ರವೃತ್ತಿಜನ್ಯವಾದ ಮೂಲಭೂತ ಪ್ರಶ್ನೆಯನ್ನು ಕಡೆಗಣಿಸಿದ್ದರಿಂದ ಆ ಪಾತ್ರಗಳ ಇರವಿನ ಮೂಲಕ ಕಾರಂತರು ಧ್ವನಿಪಡೆಸಲು ಹವಣಿಸುವ ಜೀವನದೃಷ್ಟಿಯು ಕಾರಂತರ ವಿಚಾರವಾದದ ಒಂದು ಮೈಯನ್ನು ಸದಿಚ್ಛೆಯ ನೆಲೆಯಲ್ಲಿ ನಿರೂಪಿಸಿದಂತೆ ಕಾಣಿಸುವಂತಾಗುತ್ತದೆಯೆ ಹೊರತು ಅದು ನಿರಪೇಕ್ಷ ತಾತ್ವಿಕ ಕಾಳಜಿಯ ಫಲಶ್ರುತಿಯೆಂದು ಅನಿಸುವುದಿಲ್ಲ.

ಈ ಮುದುಕಿಯರ ಸಂದರ್ಭದಲ್ಲಿ ಮಕ್ಕಳ ಹಂಬಲಕ್ಕೆ ಸಂಬಂಧಿಸಿದಂಥ ಪ್ರಶ್ನೆಗೂ ಕಾರಂತರು ಪರಿಹಾರ ಸೂತ್ರವನ್ನು ಸುಲಭವಾಗಿ ನೀಡುತ್ತಾರೆ. ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳಿಲ್ಲದಿದ್ದಾಗ ಅದಕ್ಕಾಗಿ ಹಲುಬದೆ, ಹಂಬಲಿಸದೆ ಬೇರೆಯವರ ಮಕ್ಕಳನ್ನು ತನ್ನ ಮಕ್ಕಳೆಂಬಂತೆಯೇ ಕಾಣುವ, ಕಂಡು ಹಿಗ್ಗುವ ಮನೋಭಾವವದು. ಲೈಂಗಿಕ ಬಯಕೆಯನ್ನು ಮೀರುವ ಜಿತೇಂದ್ರಿಯತ್ವ ಹಾಗೂ ಸ್ವಂತದ ಮಕ್ಕಳ ಹಂಬಲದಿಂದ ಬಿಡುಗಡೆ ಪಡೆದು ಇತರರ ಮಕ್ಕಳಲ್ಲಿ ತನ್ನ ಮಕ್ಕಳನ್ನು ಕಾಣಬಹುದಾದಂಥ ಮನಸ್ಸಿನ ಪಕ್ವತೆ—ಇವು ಬಲು ದೊಡ್ಡ ಗುಣಗಳೆಂಬುದನ್ನು ಒಪ್ಪಬಹುದು. ಆದರೆ, ಈ ಅಂಶಗಳಿಗೆ ಸಂಬಂಧಿಸಿದ ಮಾನಸಿಕ ಸಿದ್ಧತೆ, ಸಂಸ್ಕಾರ ಆ ಮುದುಕಿಯರಿಗೆ ಸ್ವಭಾವಸಹಜವಾಗಿ ಬಂದದ್ದೋ, ಜೀವನಾನುಭವದ ಪರಿಪಾಕವಾಗಿ ಫಲಿಸಿದ್ದೋ ಎಂಬುದು ಮುಖ್ಯವಾದ ಪ್ರಶ್ನೆಯಾಗುತ್ತದೆ. ಸ್ವಭಾವಸಹಜವಾಗಿ ಬಂದದ್ದೆಂದರೆ ಪೂರ್ಣ ನಂಬಿಕೆ ನಮಗೆ ಹುಟ್ಟುವಂತಿಲ್ಲ. ಕಾರಂತರೇ ಮಕ್ಕಳ ಬಯಕೆಯ ಎಳೆತ ಎಂಥದೆಂಬುದನ್ನು 'ಹೆತ್ತಳಾ ತಾಯಿ'ಯ ಗಿರಿಜೆ (ಕುಸುಮೆ), 'ಒಂಟಿದನಿ'ಯ ಕಾಂತಿಬೆನ್, 'ಬತ್ತದ ತೊರೆ'ಯ ಮಂಜುಳೆ - ಇಂಥವರ ಸಂದರ್ಭಗಳಲ್ಲಿ ಕಾಣಿಸಿದ್ದಾರೆ. ಮಕ್ಕಳನ್ನು ಕುರಿತ ಸಹಜ ಹಂಬಲದ ಜೊತೆಗೆ ತಮ್ಮ ನಂಬಿಕೆಯ ಹಿನ್ನೆಲೆಯಲ್ಲಿಯೇ ರೂಪಿತವಾದ ಸದ್ಗತಿಯ ಪರಿಕಲ್ಪನೆಯ ಅಂಗವಾಗಿಯೂ ಅದೊಂದು ಒತ್ತಡವಾಗಬಹುದೆಂಬುದನ್ನು 'ಮರಳಿ ಮಣ್ಣಿಗೆ'ಯ ಪಾರೋತಿಯ ಸಂದರ್ಭದಲ್ಲಿ ಒಂದು ಹೊಳಹಾಗಿ ಕಾಣಿಸಿದ್ದಾರೆ. ಇತರರ ಮಕ್ಕಳಲ್ಲಿ ತನ್ನ ಮಕ್ಕಳ ಹಂಬಲವನ್ನು ಮರೆಯಬಲ್ಲ ಮನೋಭಾವ ಸಹಜಸ್ವಭಾವದ ಭಾಗವಾಗಿಯೇ ಇರಬಹುದಾದದ್ದು ಸಂಭವನೀಯ ಅಪವಾದವಾಗಿರಬಹುದೆಂದು ಹೇಳಿದರೂ ಅದು ಅಷ್ಟು ಮಹತ್ವದ ಮಾತಾಗಲಾರದು. ಏಕೆಂದರೆ ಅದಕ್ಕೆ ಮಾನವ ಜೀವನ ಮೀಮಾಂಸೆಯ ಅಥವಾ ಶೋಧನೆಯ ಸಂದರ್ಭದಲ್ಲಿ ಅರ್ಥಪೂರ್ಣವಾದ ಸಂಕೇತವಾಗುವ, ವಸ್ತುಪ್ರತಿರೂಪವಾಗುವ ಘನತೆ ಉಂಟಾಗುವುದಿಲ್ಲ. ಜೀವನಾನುಭವದ ಪರಿಪಾಕವಾಗಿ ಫಲಿಸಿದ್ದೆಂದು ಹೇಳಿದರೆ ಅದಕ್ಕೆ ಅಗತ್ಯವಾದ ಅನುಭವದ ವಿವರಗಳು ಕಾದಂಬರಿಗಳಲ್ಲಿ ಇಲ್ಲವಾದ್ದರಿಂದ—ಇರುವಂತೆ ಕಾಣುವಲ್ಲೆಲ್ಲ ತುಂಬ ತೆಳುವಾಗಿ ಇರುವುದರಿಂದ—ನಮಗೆ ಆ ಮನಸ್ಸಿನ ಪಕ್ವತೆಯ ಬಗ್ಗೆ ಮನವರಿಕೆಯಾಗುವುದಿಲ್ಲ.

ಮುದುಕಿಯರಿಗೆ ಭವಿಷ್ಯದ ಚಿಂತೆಯೂ ಹೆಚ್ಚಾಗಿಲ್ಲ. ಸಾವಿನ ಭಯವಂತೂ ಇಲ್ಲವೇ ಇಲ್ಲ, ಎಂಬಂತಿದೆ. ಬಾಲವಿಧವೆಯರಾಗಿದ್ದ ಮುದುಕಿಯರದೂ ಒಂಟಿಜೀವ. ಸ್ವತಃ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳು ಅವರಿಗೆ ಆಸರೆಗೆ ಇಲ್ಲವಾದರೂ ಹತ್ತಿರದ ಸಂಬಂಧಿಕರಾರೋ (ಉದಾ: 'ಸಮೀಕ್ಷೆ'ಯ ಗಂಗಜ್ಜಿ, 'ಚಿಗುರಿದ ಕನಸು' ಕಾದಂಬರಿಯ ಮುದುಕಿ, 'ಮೂಕಜ್ಜಿಯ ಕನಸುಗಳು' ಕಾದಂಬರಿಯ ಮೂಕಜ್ಜಿ ಇಂಥವರು. 'ಮರಳಿ ಮಣ್ಣಿಗೆ'ಯ ಸರಸೋತಿಯನ್ನೂ ಈ ಗುಂಪಿಗೆ ಸೇರಿಸಬಹುದೇನೊ!)

ಯೌವನದಲ್ಲಿ ಗಂಡನನ್ನು ಕಳೆದುಕೊಂಡವರಿದ್ದರೆ ಅವರನ್ನು ಒಬ್ಬನಲ್ಲ ಇನ್ನೊಬ್ಬ ಮಗ ಅಕ್ಕರೆ, ಗೌರವಗಳಿಂದ ನೋಡಿಕೊಳ್ಳುತ್ತಾನೆ. ('ಸಮೀಕ್ಷೆ'ಯ ವಾಸುದೇವ ಪ್ರಭುವಿನ ತಾಯಿ, 'ಶನೀಶ್ವರನ ನೆರಳಿನಲ್ಲಿ'ಯ ಕಾವೇರಜ್ಜಿ, 'ನಂಬಿದವರ ನಾಕನರಕ'ದ ಸಿಂಗಾರಮ್ಮ ಇಂಥವರು.) ಅಂದರೆ ಆ ಮಟ್ಟಿಗೆ ಅವರಿಗೆ ಒಂಟಿತನದ ಸಮಸ್ಯೆ, ಅನ್ನ ವಸತಿಯ ಸಮಸ್ಯೆ ಬಗೆಹರಿಯುತ್ತದೆ. ಅವರು ನಂಬಿದ ಧರ್ಮ ವಿಧವೆಯರಾದ ಅವರ ಪಾಲಿಗೆ ಆಹಾರದ, ಉಡುಗೆ ಒಡವೆಯ ಆಸೆಗೆ ಹೆಚ್ಚಿನ ಅವಕಾಶ ನೀಡು ವಂಥದ್ದಾಗಿರುವುದಿಲ್ಲ. ಅದೂ ಮೂಲತಃ ಅವರ ನಂಬಿಕೆಯ ಭಾಗವಾಗಿರುತ್ತದೆಯೇ ಹೊರತು ಅರಿವಿನ ಭಾಗವಾಗಿರುವುದಿಲ್ಲ. ಅವರು ದುಡಿಯುವ ಜೀವಗಳಾದ್ದರಿಂದ ವಾತ್ಸಲ್ಯಮಯಿಯರಾಗಿರುವುದರಿಂದ ಅವರು ಇರುವ ಮನೆಯಲ್ಲಿ ಅವರಿಗೆ ಹಿರಿಮೆಯ ಸ್ಥಾನ ದೊರೆಯುತ್ತದೆ. ಯು. ಆರ್. ಅನಂತಮೂರ್ತಿಯವರ 'ಮೌನಿ', 'ಸಂಸ್ಕಾರ' ಗಳಲ್ಲಿ ಬರುವ ಬಾಲವಿಧವೆಯರಾಗಿದ್ದ ಮುದುಕಿಯರಂತೆ ಪಿರಿಪಿರಿಯ, ಅರೆಮರುಳ ಮುದುಕಿಯರು ಕಾರಂತರ ಕಾದಂಬರಿಗಳಲ್ಲಿ ಇಲ್ಲ. ಹಾಗಿರುವ ಮುದುಕಿಯರು ಬಂದರೆ ಮಾತ್ರ ಸರಿ, ಇಲ್ಲವಾದರೆ ಸರಿಯಲ್ಲ ಎಂಬ ತೀರ್ಮಾನಕ್ಕೆ ಬರುವುದಕ್ಕಾಗಿ ನಾನು ಈ ಅಂಶವನ್ನು ಇಲ್ಲಿ ಗುರುತಿಸುತ್ತಿಲ್ಲ. ಬಾಲವಿಧವೆಯರಾಗಿದ್ದ ಮುದುಕಿ ಯರಲ್ಲಿ ಅಂಥದೂ ಒಂದು ಅವಸ್ಥೆ ಸಾಧ್ಯ ಎಂಬ ಅರಿವೇ ಕಾರಂತರಿಗೆ ಇಲ್ಲವೆಂಬಂತೆ ಬರೆಯುತ್ತಾರೆ, ಎಂಬ ಅಂಶದ ಕಡೆಗೆ ಗಮನ ಸೆಳೆಯುವುದು ಇಲ್ಲಿ ನನ್ನ ಉದ್ದೇಶ. ಲೈಂಗಿಕ ಬಯಕೆ ಹಿಂಗದ ಹೆಂಗಸರು ಇಳಿವಯಸ್ಸಿನಲ್ಲಿ ಅರೆಮರುಳರೂ ಪಿರಿಪಿರಿಯ ವರೂ ಆಗುತ್ತಾರೆಂಬಂತೆ ತಪ್ಪದೆ ಕಾಣಿಸುವುದೂ ಕಾರಂತರಿಗೆ ಭಿನ್ನವಾದ ರೀತಿಯ ದಾದರೂ ಸರಳೀಕರಣವೇ ಆಗುತ್ತದೆ.

ಕಾರಂತರು ಈ ಮುದುಕಿಯರನ್ನು ಅವರಿಗೆ ಪರಿಚಿತವಾದ ಜನ ಮತ್ತು ಪರಿಸರ ದಿಂದ ಬೇರ್ಪಡಿಸುವುದಿಲ್ಲ. ಅಂದರೆ ಅವರು ನಂಬಿಕೊಂಡು ಬಂದ ಮೌಲ್ಯಗಳು, ನಡೆಸಿಕೊಂಡು ಬಂದ ಆಚಾರಗಳು ಹೆಚ್ಚಿನ ಬಿಕ್ಕಟ್ಟನ್ನು ಎದುರಿಸಬಹುದಾಂಥಹ ಪರಿಸ್ಥಿತಿಯ ನಿರ್ಮಾಣ ಕಾರಂತರ ಕಾದಂಬರಿಗಳಲ್ಲಿ ಆಗುವುದಿಲ್ಲ. ಅಂಥ ಬಿಕ್ಕಟ್ಟು ಗಳು ಸೃಷ್ಟಿಯಾದಾಗ ಅವರ ನಂಬಿಕೆ ಮತ್ತು ಆಚಾರಗಳು ತಂದುಕೊಟ್ಟ ಸಮಾಧಾನ, ನೆಮ್ಮದಿಗಳ ಬೇರು ಎಷ್ಟು ಗಟ್ಟಿಯಾದದ್ದೆಂಬುದು ಪರೀಕ್ಷೆಗೆ ಒಳಗಾಗುತ್ತಿತ್ತು. ಅಂಥ ಪರಿಸರದ ಬಾಹ್ಯ ಒತ್ತಡಗಳನ್ನು ಕಾಣಿಸದಿರುವುದರಿಂದ ಈ ದೃಷ್ಟಿಯಿಂದಲೂ ಕಾರಂತರು ಈ ಮುದುಕಿಯನ್ನು 'ಸಂರಕ್ಷಿತ ಜೀವ'ಗಳೆಂಬಂತೆ ತಮ್ಮ ಕಾದಂಬರಿಗಳಲ್ಲಿ ನಡೆಸಿಕೊಂಡು ಹೋಗಿದ್ದಾರೆಂದು ಅನಿಸುವಂತಾಗುತ್ತದೆ.

ಈ ಎಲ್ಲ ಕಾರಣಗಳಿಂದಾಗಿ ಒಂಟಿತನದ ಪ್ರಶ್ನೆಯೊ, ಭವಿಷ್ಯದ ಭಯ ಅವರನ್ನು ಕಾಡುವ ಪ್ರಶ್ನೆಯೊ ಹಗುರವಾಗಿ ಕಾಣಿಸುವಂತಾಗುತ್ತದೆ. ಅವರ ಮಟ್ಟಿಗೆ ಹೇಳು ವುದಾದರೆ ಅವರದು ಲೌಕಿಕ ಆಸೆ, ಆಮಿಷಗಳಿಗೆ ಸಂಬಂಧಿಸಿದಂತೆ ವೈರಾಗ್ಯಪರ ದೃಷ್ಟಿ.

ಆದರೂ ಮನುಷ್ಯ ಸಂಬಂಧದ ದೃಷ್ಟಿಯಿಂದ ಮತ್ತು ತಮ್ಮ ಸುತ್ತಮುತ್ತಲಿನವರ ಬದುಕಿನ ಕಷ್ಟ ಸುಖಗಳೊಂದಿಗೆ ಸಹಸ್ಪಂದಿಸುವ ಹೃದಯವಂತಿಕೆಯ ದೃಷ್ಟಿಯಿಂದ ನೋಡಿದರೆ ಅವರದು ಜೀವನ ಸ್ವೀಕಾರದ ನಿಲುವಾಗಿದೆ. ಅವರು ತಮಗಾಗಿ ಬದುಕ ಬೇಕೆಂಬಂಥದೇನಿಲ್ಲ. ಆದರೂ ಬದುಕಿರುವಷ್ಟು ಕಾಲ ತಮ್ಮ ಸುತ್ತಮುತ್ತಲಿನ ಜನದ ಒಳಿತಿಗಾಗಿ ತಮ್ಮನ್ನು ತೇಯುವ ತ್ಯಾಗಬುದ್ಧಿಯುಳ್ಳವರು. ತಾವಿದ್ದು ಇನ್ನು ಏನೂ ಆಗಬೇಕಾದ್ದಿಲ್ಲ. ಎಂದು ತೋರಿದಾಗ ಕಳಿತ ಹಣ್ಣು ತಾನಾಗಿ ಬೀಳುವಷ್ಟು ಸಹಜವಾಗಿ ಸಾವನ್ನು ಸ್ವಾಗತಿಸುವವರು. ಅಂಥ ಇಚ್ಛಾಮರಣಿಗಳಾದ ಮುದುಕಿ ಯರೇ ಕಾರಂತರ ಕಾದಂಬರಿಗಳಲ್ಲಿ ಹೆಚ್ಚಾಗಿದ್ದಾರೆ.

## 2

ಕಾರಂತರ ಕಾದಂಬರಿಗಳಲ್ಲಿ ಕೆಲವು 'ಪರಿತ್ಯಕ್ತೆ'ಯರು ಬರುತ್ತಾರೆ. 'ಮರಳಿ ಮಣ್ಣಿಗೆ'ಯ ನಾಗವೇಣಿ, 'ಸನ್ಯಾಸಿಯ ಬದುಕು' ಕಾದಂಬರಿಯ ಸುಮಿತ್ರೆ, 'ಬತ್ತದ ತೊರೆ'ಯ ವಿನತೆ, ಕನ್ನಡಿಯಲ್ಲಿ ಕಂಡಾತ'ದ ಕಾವೇರಿ 'ಇಳೆಯೆಂಬ...'ದ ಅರುಂಧತಿ ಪಾಟೀಲ—ಇಂಥವರನ್ನು ಹೆಸರಿಸಬಹುದು. ಇಂಥವರ ಮತ್ತು ಮುದುಕಿಯರ ಪರಿಸ್ಥಿತಿಯಲ್ಲಿಯಾಗಲಿ, ಅವರನ್ನು ಕುರಿತಂಥ ಕಾರಂತರ ಧೋರಣೆಯಲ್ಲಿಯಾಗಲಿ ಹೆಚ್ಚಿನ ವ್ಯತ್ಯಾಸವಿದ್ದಂತಿಲ್ಲ. ಮುದುಕಿಯರ ಪಸ್ಥಿತಿಗೂ ಇವರ ಪರಿಸ್ಥಿತಿಗೂ ಕೆಲವು ವ್ಯತ್ಯಾಸಗಳನ್ನು ಕಾಣಬಹುದು : ಅವರು ಮುದುಕಿಯ ರಾದರೆ ಪರಿತ್ಯಕ್ತೆಯರೆಲ್ಲ ಯುವತಿಯರು. ಅವರು ವಿಧವೆಯರಾದರೆ ಇವರು ಗಂಡ ಇದ್ದೂ ವಿಧವೆಯರಂತೆ ಆಗಿರುವವರು. ಅವರ ಗಂಡಂದಿರ ಸಾವು ಮತ್ತು ಅವರು ಬದುಕುತ್ತಿರುವ ಸಾಮಾಜಿಕ ಪರಿಸರ ಇವು ಮುದುಕಿಯರ ಪರಿಸ್ಥಿತಿಗೆ ಮುಖ್ಯವಾಗಿ ಕಾರಣವಾಗಿದ್ದರೆ ಪರಿತ್ಯಕ್ತೆಯರ ಪರಿಸ್ಥಿತಿಗೆ ಅವರ ಗಂಡಂದಿರ ಹೇಡಿತನ, ಹೊಣೆ ಗೇಡಿತನ ಮತ್ತು ವಂಚನೆ ಇವು ಕಾರಣಗಳಾಗಿವೆ. 'ಒಡಹುಟ್ಟಿದವರು' ಕಾದಂಬರಿಯ ವಾಸಂತಿಯನ್ನೂ—ವಿವರದಲ್ಲಿ ಸ್ವಲ್ಪ ವ್ಯತ್ಯಾಸವಿದ್ದರೂ—ಈ ಗುಂಪಿಗೇ ಸೇರಿಸ ಬಹುದು.

'ನಂಬಿದವರ ನಾಕ ನರಕ'ದ ಸತ್ಯಭಾಮೆ, 'ಧರ್ಮರಾಯನ ಸಂಸಾರ'ದ ಸರಸ್ವತಿ ಇವರು ಗಂಡ ಇದ್ದೂ ವಿಧವೆಯರಂತೆ ಬಾಳಬೇಕಾಗಿ ಬಂದರೂ ಪರಿಸ್ಥಿತಿ ಯನ್ನು ಮೀರುವ ಸಾಧ್ಯತೆಯನ್ನು ವಾಸಂತಿಗಿಂತ ಬೇರೆಯಾದ ಮಟ್ಟದಲ್ಲಿ ಮತ್ತು ರೀತಿಯಲ್ಲಿ ಕಂಡುಕೊಂಡವರು. ಪರಿತ್ಯಕ್ತೆಯರ ಬದುಕಿನಲ್ಲಿ ವೈವಿಧ್ಯ ಸಾಧ್ಯತೆಯನ್ನು ಕಾರಂತರು ಇಷ್ಟರಮಟ್ಟಿಗಾದರೂ ಕಾಣಿಸಿದ್ದಾರೆ. ಅಂದರೆ, ಮುದುಕಿಯರಂತೆ ಅವರನ್ನು ಪೂರ್ತಿ 'ಮಾದರಿ'ಗಳನ್ನಾಗಿ ಚಿತ್ರಿಸಿಲ್ಲ ಎಂಬುದು ಗಮನಿಸಬೇಕಾದ ಅಂಶ. ಇಂಥ ಕಡೆಗಳಲ್ಲಿ ಕಾರಂತರು ಸಂಪ್ರದಾಯವಾದಿ ಮಾತ್ರ ಆಗಿರದೆ ಅದಕ್ಕಿಂತ

ಹೆಚ್ಚು ಉದಾರವಾದ ನಿಲುವಿನಲ್ಲಿ ವ್ಯವಹರಿಸಿದಂತೆ ಕಾಣುತ್ತದೆ. ಆದರೆ, ಕಾರಂತರ ಈ ಉದಾರತೆಗೆ ಹೇಡಿತನ, ಹೊಣೆಗೇಡಿತನ, ಅಮಾನುಷ ನಡೆವಳಿಕೆ ಉಳ್ಳ ಆ ಹೆಣ್ಣು ಮಕ್ಕಳ ಗಂಡಂದಿರ ಬಗ್ಗೆ ಉಂಟಾದ ಸಾತ್ವಿಕ ಕ್ರೋಧ ಮತ್ತು ಅದರಿಂದಾಗಿ ಆ ಹೆಣ್ಣು ಮಕ್ಕಳ ಬಗ್ಗೆ ಉಕ್ಕಿದ ಸಾತ್ವಿಕ ಸಂತಾಪ ಕಾರಣವಾಗಿರುವಂತೆ ತೋರುತ್ತದೆ. ಅಂದರೆ, ಅವರ ಗಂಡಂದಿರು ಅಂಥ ದುಷ್ಟರಾಗಿದ್ದರೆ ಆ ಹೆಣ್ಣು ಮಕ್ಕಳೂ ಸಾಂಪ್ರದಾಯಿಕ ಕಟ್ಟುಪಾಡಿನ ಚೌಕಟ್ಟಿನಲ್ಲಿಯೇ ಚೆಂದಾಗಿ ಬಾಳುತ್ತಿದ್ದರೆಂಬ ಭಾವನೆ ಕಾರಂತರ ಈ ಮನೋಭಾವಕ್ಕೆ ಹಿನ್ನೆಲೆಯಾಗಿರುವಂತೆ ಅನ್ನಿಸುತ್ತದೆ. ಅಂಥ ಹಿನ್ನೆಲೆ ಇಲ್ಲದಿದ್ದಲ್ಲಿ ಹೆಣ್ಣುಮಕ್ಕಳು ಸಾಂಪ್ರದಾಯಿಕವಾದ ಚೌಕಟ್ಟನ್ನು ಮೀರುವುದನ್ನು ಕಾರಂತರು ವಸ್ತುನಿಷ್ಠವಾಗಿ ಅರ್ಥಮಾಡಿಕೊಳ್ಳುವ ವ್ಯವಧಾನವನ್ನು ತೋರುವುದಿಲ್ಲವೆಂದು ಅನಿಸುತ್ತದೆ. 'ಚಿಗುರಿದ ಕನಸು' ಕಾದಂಬರಿಯ ವರಲಕ್ಷ್ಮಿ, 'ಸ್ವಪ್ನದ ಹೊಳೆ'ಯ ಬನ್ನಿ, 'ಇಳೆಯೆಂಬ...' ದ ಜ್ವಾಲಾ ಕುಲಕರ್ಣಿ, ಒಂಟಿದನಿ'ಯ ಕಾಂತಿಬೆನ್, 'ಕೇವಲ ಮನುಷ್ಯರು' ಕಾದಂಬರಿಯ ಕಾವೇರಿ, 'ಮೂಕಜ್ಜಿಯ ಕನಸುಗಳು' ಕಾದಂಬರಿಯ ನಾಗಿ– ಅಂಥವರ ಬಗ್ಗೆ ಕಾದಂಬರಿಕಾರ ಕಾರಂತರಿಗೆ ಪ್ರಶಂಸಾಭಾವ ಇಲ್ಲವಾದರೂ ಅರ್ಥಮಾಡಿಕೊಳ್ಳುವ ಸಹಾನುಭೂತಿಪರ ನಿಲುವು ಇದೆ. ಆ ಹೆಣ್ಣು ಮಕ್ಕಳು ಪರಿಸ್ಥಿತಿಗೆ ಸಂಬಂಧಪಟ್ಟ ಗಂಡಸರ ಹೇಡಿತನ, ವಂಚನೆಗಳು ಹಿನ್ನೆಲೆಯಾಗಿ ಇರುವುದೇ ಕಾರಂತರ ಆ ನಿಲುವಿಗೆ ಕಾರಣವಾಗಿರುವಂತಿದೆ. ಏಕೆಂದರೆ ಇಂಥ ಹಿನ್ನೆಲೆಯಿಲ್ಲದಿದ್ದಲ್ಲಿ ಸಾಂಪ್ರದಾಯಿಕವಾದ ಚೌಕಟ್ಟನ್ನು ಮೀರುವ ಹೆಣ್ಣುಮಕ್ಕಳ ಬಗ್ಗೆ ಕಾರಂತರಿಗೆ ಸಹಾನುಭೂತಿ ಇರುವುದಿಲ್ಲ. ಅಷ್ಟೇ ಅಲ್ಲ ಖಂಡಿಸುವ ಉತ್ಸಾಹ ಕಾಣಿಸುತ್ತದೆ. 'ಸನ್ಯಾಸಿಯ ಬದುಕು' ಕಾದಂಬರಿಯ ಸುಮನಾಬಾಯಿ, 'ಚಿಗುರಿದ ಕನಸು' ಕಾದಂಬರಿಯ ಪ್ರತಿಮೆ, 'ಹೆತ್ತಳಾತಾಯಿ'ಯ ಗಿರಿಜೆ (ಕುಸುಮೆ), 'ಒಡಹುಟ್ಟಿದವರು' ಕಾದಂಬರಿಯ ಶೇವಂತಿ, 'ಇದ್ದರೂ ಚಿಂತೆ'ಯ ಸಾವಿತ್ರಿರಾವ್ 'ಇನ್ನೊಂದೇ ದಾರಿ'ಯ ಚಂಪಾ, 'ಕೇವಲ ಮನುಷ್ಯರು' ಕಾದಂಬರಿಯ ವಾರಿಜೆ, 'ಅಳಿದ ಮೇಲೆ'ಯ ಕಮಲೆ—ಇಂಥವರನ್ನು ಕುರಿತಂಥ ಕಾದಂಬರಿಕಾರ ಕಾರಂತರ ಆ ಬಗೆಯ ಧೋರಣೆಯನ್ನು ಇಲ್ಲಿ ನೆನೆಯಬಹುದಾಗಿದೆ. ಕಾರಂತರಇಂಥ ಧೋರಣೆಗೆ ತಕ್ಕ ಮಟ್ಟಿಗೆ ಅಪವಾದವೆಂಬಂತೆ ಕಾಣುವವಳು ಬಹುಶಃ 'ಕೇವಲ ಮನುಷ್ಯರು' ಕಾದಂಬರಿಯ ಶಾಂತಾಬಾಯಿ, ಅಲ್ಲಿ ಕಾರಂತರ-ತಕ್ಕಮಟ್ಟಿಗೆ ನಿರ್ಲಿಪ್ತವೆಂಬಂಥ–ನಿಲುವಿಗೆ ಅವಳು ಒಂದು ಬಗೆಯ ಅಪಸಾಮಾನ್ಯ ಮಾನಸಿಕ ಸ್ಥಿತಿಯುಳ್ಳ, ಪಾತ್ರವೆಂಬಂತೆ ಚಿತ್ರಿತವಾಗಿರುವುದೂ ಒಂದು ಕಾರಣವಾಗಿರಬಹುದೇನೊ !

## 3

ಕಾರಂತರ ಕಾದಂಬರಿಗಳಲ್ಲಿ ಆಳುಕಾಳು, ಬಡವ, ಬಿಕ್ಷುಕ ಇಂಥವರೆಂದು ಹೇಳಬಹುದಾದಂಥ ಕೆಲವು ಸಾಮಾನ್ಯ ಜನರ ಬಗ್ಗೆ ಕಾರಂತರ ಧೋರಣೆ, ನಿಲುವು

ಸಹಾನುಭೂತಿಪರವಾದದ್ದಾಗಿ, ಪ್ರಶಂಸಾಪರವಾದದ್ದಾಗಿ ಕಾಣಿಸುತ್ತದೆ. 'ಸಮೀಕ್ಷೆ'ಯ ಬಡೆಯ ಮತ್ತು ಸೂರ, ಕಾಳಿ, 'ಚಿಗುರಿದ ಕನಸು' ಕಾದಂಬರಿಯ ಮುತ್ತಯ್ಯ ಗೌಡ, 'ಗೊಂಡಾರಣ್ಯ'ದ ಮುಕ್ಕಣ್ಣ, 'ಮೈಮನಗಳ ಸುಳಿಯಲ್ಲಿ'ಯ ಪಮ್ಮ, ದುಗ್ಗಿ, 'ಶನೀಶ್ವರನ ನೆರಳಿನಲ್ಲಿ'ಯ ಕುಡುಬಿ, ನಾಗ–ಇಂಥವರನ್ನು ಇಲ್ಲಿ ಹೆಸರಿಸ ಬಹುದು. ಇವರೆಲ್ಲ ದುಡಿಮೆ, ಋಣ, ಕೃತಜ್ಞತೆ ಇವುಗಳಿಗೆ ಸಂಬಂಧಿಸಿದಂತೆ ಕಾರಂತರು ಪ್ರತಿಪಾದಿಸುವ ಮೌಲ್ಯದೃಷ್ಟಿಯನ್ನು ಸ್ವತಃ ಬದುಕಿ ತೋರಿಸುವವರು. ಇವರಲ್ಲಿ ಕೆಲವರಿಗೆ ಬದುಕಿನಲ್ಲಿ ಪಡೆದದ್ದಿಕ್ಕಿಂತ ಕೊಟ್ಟದ್ದು ಹೆಚ್ಚಾಗಬೇಕೆಂಬ ತತ್ತ್ವ ದಂತೆ ಬಾಳುವುದು ಸಾಧ್ಯವಾಗುವುದಿಲ್ಲ, ಎಂಬುದು ನಿಜ. ಆದರೆ ಅವರು ಬೇರೆ ಯವರ ಋಣ ತೀರಿಸಲಿಕ್ಕಾಗದಿದ್ದರೂ ತೀರಿಸಬೇಕೆಂಬ ಹಂಬಲ ಕೊನೆಯವರೆಗೂ ಇರುವವರು. ಅವರೆಲ್ಲ ಬೇರೆಯವರ ಋಣವನ್ನು ಹಕ್ಕೆಂಬಂತೆ ಭಾವಿಸದೆ ಉಪಕಾರ ವೆಂಬಂತೆ ಭಾವಿಸುವುದರ ಮೂಲಕ ಕೊನೆಯವರೆಗೂ ಕೃತಜ್ಞತೆಯ ಭಾವನೆಯನ್ನು ಮನಸ್ಸಿನಲ್ಲಿ ತುಂಬಿಕೊಂಡಿರುವವರು.

ಈ ಬಗೆಯ ಮನಸ್ಸಿನ ಸಂಸ್ಕಾರ ಇರುವವರು ಯಾರಾದರೂ ಸಾಮಾನ್ಯವಾಗಿ ಎಲ್ಲರ ಮೆಚ್ಚಿಕೆಗೆ ಪಾತ್ರರಾಗುತ್ತಾರೆ ಎಂಬುದು ನಿಜ. ಕಾದಂಬರಿಯನ್ನು ಓದುತ್ತಿರು ವಾಗ ಕಾದಂಬರಿಯಲ್ಲಿ ನಿರ್ಮಿತವಾಗಿರುವ ಅನುಭವ ಪ್ರಪಂಚದಲ್ಲಿ ಸಾಮಾಜಿಕ ಮತ್ತು ಆರ್ಥಿಕ ಸ್ಥಾನಮಾನದ ದೃಷ್ಟಿಯಿಂದ ತೀರಾ ಸಾಮಾನ್ಯರಾಗಿದ್ದರೂ ಸದ್ಗುಣ ಗಳಿಂದಾಗಿ ಅಸಾಮಾನ್ಯರೆಂಬಂತೆ ಅವರು ಕಾಣಿಸುತ್ತಾರೆ ಎಂಬುದೂ ನಿಜ. ಆದರೆ ಹೀಗೆಲ್ಲ ಕೀರ್ತಿಸಬಹುದಾದ ಗುಣ, ವ್ಯಕ್ತಿತ್ವ ಇದ್ದರೂ ಇವರೆಲ್ಲ ಯಾಕೆ ಹೀಗೆ ಭೌತಿಕವಾದ ಬದುಕಿನ ಕಷ್ಟ, ಕಾರ್ಪಣ್ಯಗಳಿಗೆ ಒಳಗಾಗುತ್ತಾರೆ, ಎಂಬ ಪ್ರಶ್ನೆಯನ್ನು ಕೇಳಿಕೊಳ್ಳಬೇಕೆಂದು ಕಾರಂತರಿಗೆ ಅನಿಸದೇ ಇರುವುದು ಇಲ್ಲಿ ಗಮನಾರ್ಹ ಅಂಶ ವಾಗಿದೆ. ದತ್ತವಾದ ಒಂದು ಸ್ಥಿರ ಸಾಮಾಜಿಕ ವ್ಯವಸ್ಥೆಯ ಹಿನ್ನೆಲೆ ಮತ್ತು ಸಂದರ್ಭ ದಲ್ಲಿಯೇ ಕಾರಂತರು ದುಡಿಮೆ, ಋಣ, ಕೃತಜ್ಞತೆ ಇಂಥ ಮೌಲ್ಯಗಳನ್ನು ವ್ಯಾಖ್ಯಾನಿ ಸುವುದರಿಂದ ಕಾರಂತರಿಗೆ ಇಂಥ ವ್ಯಕ್ತಿಗಳ 'ಇರವ'ನ್ನು ಕೀರ್ತಿಸುವುದು ಸಾಧ್ಯವಾಗು ತ್ತದೆ. ಆದರೆ, ಇಂಥ ದೃಷ್ಟಿಯು ಇಂಥ ಜನರ ಬದುಕಿಗೆ ಸಂಬಂಧಿಸಿದಂತೆ ಬಿಡುಗಡೆಯ ಬೇರೆ ಸಾಧ್ಯತೆ ಅಥವಾ ಸ್ಥಿತಿಯನ್ನು ಊಹಿಸುವುದೂ ಇಲ್ಲ; ಅದು ಒಂದು ಶಾಶ್ವತ ವಾದದ್ದೆಂಬಂಥ ಬಂಧನದ ಸ್ಥಿತಿಯಲ್ಲಿಯೇ ಆ ಜನರ ವೈಯಕ್ತಿಕ ಸದ್ಗುಣದ ಮೂಲಕ ಮಾತ್ರ ಬಿಡುಗಡೆಯ, ಜನ್ಮ ಸಾರ್ಥಕತೆಯ ಸಾಧ್ಯತೆ ಅಥವಾ ಸ್ಥಿತಿಯನ್ನು ಪ್ರತಿ ಪಾದಿಸುತ್ತದೆ. ಆದ್ದರಿಂದ ಕಾರಂತರ ಕಾದಂಬರಿಗಳಲ್ಲಿ ಇಂಥವರ ಬಗ್ಗೆ ಪ್ರಶಂಸಾ ಭಾವನೆ ಧ್ವನಿ ಪಡೆಯುತ್ತದೆಯೇ ಹೊರತು ವಿಷಾದದ ಎಳೆ ಸೇರಿಕೊಳ್ಳುವುದಿಲ್ಲ. 'ಸಮೀಕ್ಷೆ'ಯ ಸೂರ-ಕಾಳಿಯರ ಬದುಕನ್ನು ವೈಭವೀಕರಿಸುವುದಕ್ಕೆ ಸಂಬಂಧಿಸಿದಂತೆ ನರಹಳ್ಳಿ ಬಾಲಸುಬ್ರಹ್ಮಣ್ಯ ಅವರು ಕೇಳುವ ಪ್ರಶ್ನೆಯನ್ನು ಅದೇ ರೀತಿಯಲ್ಲಿ ನಾನು

ಕೇಳುವುದಿಲ್ಲವಾದರೂ ಆ ಪ್ರಶ್ನೆಯ ಹಿಂದಿರುವ ವಿಮರ್ಶಾತ್ಮಕ ಹೊಳಹು ಅರ್ಥ ಪೂರ್ಣವಾದದ್ದೆಂದು ನನಗೆ ತೋರುತ್ತದೆ. ('ಅನುಸಂಧಾನ', ಪು. 50) ಇರುವ ಪರಿಸ್ಥಿತಿಗೆ ಚೆನ್ನಾಗಿ ಹೊಂದಿಕೊಂಡು ಬಾಳುವ ಜೀವನವಿವೇಕವನ್ನು ಕಾರಂತರು ಪ್ರತಿಪಾದಿಸುತ್ತಾರೆಯೆ ಹೊರತು ಸಾಮಾಜಿಕ ಸ್ಥಿತ್ಯಂತರದ ಸಂದರ್ಭ ವೊಂದನ್ನು ಊಹಾತ್ಮಕವಾಗಿಯೂ ಪರಿಭಾವಿಸುವುದು ಕಾಣಿಸುವುದಿಲ್ಲ. ಹಾಗೆ ಕಾರಂತರ ಕಲ್ಪನೆ ಈ ವಿಷಯ ಕುರಿತಂತೆ ತುಸು ಹೊರಳಿಕೊಂಡಿದ್ದರೂ ಅವರು ಪ್ರತಿಪಾದಿಸುವ ದುಡಿಮೆ, ಋಣ, ಕೃತಜ್ಞತೆಗಳಂಥ ಮೌಲ್ಯಗಳಿಗೆ ಈಗಿರುವಂತೆ ಏಕಮುಖವಾದ ಅರ್ಥವ್ಯಾಖ್ಯಾನ ಸಾಧ್ಯವಾಗುವುದಿಲ್ಲ, ಎಂಬ ಅರಿವೂ ಕೂಡಿ ಬರಬಹು ದಾಗಿತ್ತು. 'ಗೊಂಡಾರಣ್ಯ' ಕಾದಂಬರಿಯಲ್ಲಿ 'ಪಟ್ಟೆದಾರ' ರಾದ ಜಯದೇವ, ವಾಮ ದೇವರ ವಿಷಯದಲ್ಲಿ ಇರುವ ಮುಕ್ಕಣ್ಣನ ಸ್ವಾಮಿಭಕ್ತಿ, ಋಣದ ಕಲ್ಪನೆಗಳನ್ನು ಕೀರ್ತಿಸುವ ಧಾಟಿಯಲ್ಲಿ ನಿರೂಪಿಸುವ ಕಾರಂತರು ಬೇರೆಯವರ ದುಡಿತದಿಂದ ಪ್ರಭಾವಶಾಲಿಗಳಾಗಿದ್ದಾರೆಂಬ 'ಪಟ್ಟೆದಾರ'ರ ವಿರುದ್ಧ ರಾಜಕೀಯ ಚಟುವಟಿಕೆಯಲ್ಲಿ ತೊಡಗುವ ಮುಕ್ಕಣ್ಣನ ಮಗ ಮಾನಪ್ಪನನ್ನು ಖಂಡಿಸುವ ದನಿಯಲ್ಲಿ ಬರೆಯು ವುದನ್ನು ಈ ಹಿನ್ನೆಲೆಯಲ್ಲಿ ನೋಡಬಹುದಾಗಿದೆ. ಅಂಥ ಮಾನಪ್ಪನನ್ನು ಕೊಂದೇ ಬಿಡಬೇಕೆಂಬಷ್ಟು ಕೋಪ ಮುಕ್ಕಣ್ಣನಿಗೆ ಬಂದರೆ ಕಾದಂಬರಿಕಾರ ಕಾರಂತರು ಅವನನ್ನು ಸಾಯಿಸಿ ಪರಿಹರಿಸಿಕೊಳ್ಳುತ್ತಾರೆ.

ತಮ್ಮ ಕಾದಂಬರಿಗಳಲ್ಲಿ ಪ್ರತಿಪಾದಿಸುವ ದುಡಿಮೆ, ಋಣದ ಕಲ್ಪನೆ, ಕೃತಜ್ಞತೆ ಮಾನವೀಯ ಅಂತಃಕರಣ – ಈ ಎಲ್ಲ ಮೌಲ್ಯಗಳನ್ನೂ ಕಾರಂತರು ಮೆಚ್ಚುವ ಇತರ ಪಾತ್ರಗಳಂತೆಯೇ ಅವರ ಕಥಾನಾಯಕರೂ ಗೌರವಿಸುತ್ತಾರೆ. ('ಮರಳಿ ಮಣ್ಣಿಗೆ'ಯ ರಾಮ, 'ಮೊಗಪಡೆದ ಮನ'ದ ವ್ಯಾಸ, 'ಅಳನಿರಾಳ'ದ ವಸಂತದೇಸಾಯಿ 'ಅಳಿದಮೇಲೆ'ಯ ಯಶವಂತರಾಯ, 'ಇನ್ನೊಂದೇ ದಾರಿ'ಯ ಜಯರಾಮ, 'ಸಮೀಕ್ಷೆ'ಯ ಶ್ರೀನಿವಾಸ, 'ಸ್ವಪ್ನದ ಹೊಳೆ'ಯ ಕೃಷ್ಣರಾಯ, 'ಇಳೆಯೆಂಬ...'ದ ಆನಂದರಾಯ, 'ಔದಾರ್ಯದ ಉರುಳಲ್ಲಿ'ಯ ರಾಧಾಕೃಷ್ಣ, ಒಂಟಿದನಿ'ಯ ಜಗನ್ನಾಥ ರಾಯ, 'ಗೆದ್ದದೊಡ್ಡಸ್ತಿಕೆ' ಕಾದಂಬರಿಯ ನಾಗೇಂದ್ರ, 'ಚಿಗುರಿದ ಕನಸು' ಕಾದಂಬರಿಯ ಶಂಕರ, 'ಇದ್ದರೂ ಚಿಂತೆ'ಯ ಗಣಪತಿ ಹೆಗ್ಗಡೆ–ಇಂಥ ಕಥಾನಾಯಕ ರನ್ನು ಇಲ್ಲಿ ಹೆಸರಿಸಬಹುದು). ಅವರೆಲ್ಲ ಸ್ವತಃ ತಮ್ಮ ಬದುಕು ಅದಕ್ಕೆ ನಿದರ್ಶನ ವೆಂಬಂತೆ ಬಾಳುತ್ತಾರೆ. ಇತರ ಪಾತ್ರಗಳದು ಬಲುಮಟ್ಟಿಗೆ ಸಾಂಪ್ರದಾಯಿಕ ನಂಬಿಕೆಯನ್ನು ಆಧರಿಸಿ ಬೆಳೆದ ಬದುಕಾಗಿದೆ. ಕಥಾನಾಯಕರು ಅಂಥ ನಂಬಿಕೆ ಗಳನ್ನು ಪ್ರಾಮಾಣಿಕವಾಗಿ ನಂಬಿ ಬದುಕುವವರನ್ನು ಮೆಚ್ಚುವವರಾದರೂ ಆ ನಂಬಿಕೆ ಗಳನ್ನು ತಮ್ಮದಾಗಿಸಿಕೊಂಡವರಲ್ಲ. ಸ್ವಾನುಭವಗಳ ಸಂದರ್ಭದಲ್ಲಿಯೇ ಕಾರಣ ವಾದೀ (rationalist) ಧೋರಣೆಯ ಮೂಲಕ ಬದುಕಿನ ಅರ್ಥವನ್ನು

ಅನ್ವೇಷಿಸಬೇಕೆಂಬ. ಅರಿಯಬೇಕೆಂಬ ಮನೋಭಿಪ್ರಾಯವುಳ್ಳವರು. ಆದರೆ, ದುಡಿಮೆ, ಋಣದ ಕಲ್ಪನೆ, ಕೃತಜ್ಞತೆ, ಮಾನವೀಯ ಅಂತಃಕರಣ ಇಂಥವುಗಳಿಗೆ ಸಂಬಂಧಿಸಿದ ಅವರ ಮೌಲ್ಯಪ್ರಜ್ಞೆ ಮತ್ತು ವೈಚಾರಿಕ ನಿಲವುಗಳು ಮೊದಲಿನಿಂದಲೂ ಒಂದು ಸಹಜ ತುಡಿತವೆಂಬಂತೆಯೆ ಸಾಮಾನ್ಯವಾಗಿ ಪ್ರಕಟಗೊಳ್ಳುತ್ತ ಹೋಗುತ್ತದೆ. ಆ ಮೌಲ್ಯ ಗಳನ್ನು ಕುರಿತಂಥ ಅವರ ಪೂರ್ವಗ್ರಹಿಕೆಗಳು ಬದುಕಿನ ಯಾವ ಹಂತದಲ್ಲಿಯೂ ಎಂಥ ಬಿಕ್ಕಟ್ಟಿನಲ್ಲಿಯೂ ಬಲವಾದ ಸವಾಲುಗಳನ್ನು ಎದುರಿಸುವುದಿಲ್ಲ. ಶಿಕ್ಷಣ, ಕಲಾಜೀವನ, ಉದ್ಯೋಗ, ವಿಷಯಜ್ಞಾನ-ಇಂಥವುಗಳಿಗೆ ಸಂಬಂಧಿಸಿದಂತೆ ಕಥಾ ನಾಯಕರ ಬದುಕು ವಿಕಸನಶೀಲ, ಚಲನಶೀಲ ಎಂಬಂತೆ ಕಂಡರೂ ಮೌಲ್ಯಗಳನ್ನು ಕುರಿತಂಥ ಪೂರ್ವಗ್ರಹಿಕೆಗಳು ಮಾತ್ರ ಹೆಚ್ಚುಕಡಿಮೆ ಸ್ಥಿರ ತಿಳಿವಳಿಕೆಯ ನೆಲೆಯಲ್ಲಿಯೆ ಕೊನೆಯವರೆಗೂ ಅಬಾಧಿತವಾಗಿ ಇರುತ್ತವೆ. ಅಂದರೆ ಬದುಕಿನಲ್ಲಿ ರೂಢಿಸಿಕೊಂಡು ಬಂದ ಮೌಲ್ಯಗಳು ಮತ್ತು ವಿಚಾರಗಳು ಹೊಸ ಮತ್ತು ನಿಷ್ಠುರ ಜೀವನ ಸಂದರ್ಭಗಳ ಎದುರಿನಲ್ಲಿ ಪುನರ್ಪರಿಶೀಲನೆಗೆ ಒಳಗಾಗುವ, ಆ ಮೂಲಕ ಆ ಮೌಲ್ಯಗಳ ಬಗೆಗಿನ ಪೂರ್ವಗ್ರಹಿಕೆಗಳು ಹೊಸ ಆಯಾಮ ಮತ್ತು ಅರ್ಥವಂತಿಕೆಯಲ್ಲಿ ಪುನರ್ನಿರ್ಮಿತ ವಾಗುವ ಬಲವಾದ ಸಂಘರ್ಷಸಂದರ್ಭಗಳು ಕಥಾನಾಯಕರಿಗೆ ಅಷ್ಟಾಗಿ ಎದು ರಾಗುವುದಿಲ್ಲ. ಜೀವನದಲ್ಲಿ ಎದುರಾಗುವ ಎಂಥ ಬಿಕ್ಕಟ್ಟುಗಳಿಗೂ ಅವರಲ್ಲಿ ಪೂರ್ವ ನಿರ್ಧರಿತ ಉತ್ತರಗಳು ಇವೆಯೇನೊ ಎಂದು ತೋರುವಂತೆ ಅವರು ಮನಸ್ಸಿನ ಹೊಯ್ದಾಟ, ದ್ವಂದ್ವ, ಪೇಚುಗಳಿಗೆ ಹೆಚ್ಚು ಒಳಗಾಗದೆ ವ್ಯವಹರಿಸುತ್ತಾರೆ. ಆದ ರಿಂದಾಗಿ, ಕಾರಂತರ ಜೀವನ ದೃಷ್ಟಿಯನ್ನು ಹೆಚ್ಚು ನಿಕಟವಾಗಿ ಮತ್ತು ಹೆಚ್ಚು ಸಮಗ್ರ ವಾಗಿ ಪ್ರತಿನಿಧಿಸುವಂತಿರುವ ಈ ಕಥಾನಾಯಕರಿಗೆ ಅವರ ಮಾನಸಿಕ ಸಿದ್ಧತೆ ಅಥವಾ ಸಂಸ್ಕಾರ ಸತ್ವಕ್ಕಿಂತ ಹೆಚ್ಚು ಬಲವಾದ ಸವಾಲುಗಳನ್ನು ಎಸೆಯುವಂಥ ಜೀವನ ಸಂದರ್ಭಗಳೇ ಎದುರಾಗುವುದಿಲ್ಲವೊ ಅಥವಾ ಈ ಕಥಾನಾಯಕರ ಸಂವೇದನಶೀಲತೆಗೆ ಸೂಕ್ಷ್ಮಸ್ಪಂದಿತ್ವಗುಣ ಉನ್ನತ ಮಟ್ಟದ್ದಾಗಿಲ್ಲವೊ ಎಂಬ ಪ್ರಶ್ನೆಗಳು ವಿಮರ್ಶಕನಿಗೆ ಎದುರಾಗುತ್ತವೆ. ಅಂಥ ಜೀವನ ಸಂದರ್ಭಗಳು ಎದುರಾಗುವುದಿಲ್ಲ ಎಂಬುದು ನಿಜ ವಾದರೆ ಸ್ವಾನುಭವದ ಮೂಲಕವೇ ಬದುಕಿನ ಅರ್ಥವನ್ನು ಅರಿಯುವ ಧೋರಣೆ ಯುಳ್ಳ ಕಾರಂತರ ಕಾದಂಬರಿಗಳ ಅನುಭವ ದ್ರವ್ಯವೇ-ಅದು ಎಷ್ಟೇ ವೈವಿಧ್ಯಮಯ ಮತ್ತು ವಿಸ್ತಾರವಾದ ವಲಯಗಳಲ್ಲಿ ವ್ಯವಹರಿಸಿದರೂ-ಘನವಾದದ್ದಲ್ಲ, ಎಂದಂತಾಗು ತ್ತದೆ. ಕಥಾನಾಯಕರ ಸಂವೇದನಶೀಲತೆಗೆ ಸೂಕ್ಷ್ಮಸ್ಪಂದಿತ್ವಗುಣವೇ ಉನ್ನತ ಮಟ್ಟದ್ದಾಗಿಲ್ಲವೆಂದರೆ ಜೀವನ ಶ್ರದ್ಧೆಗೆ ಸಂಬಂಧಿಸಿದಂತೆ ಕಥಾನಾಯಕರ, ಆ ಮೂಲಕ ಕಾರಂತರ ತಿಳಿವಳಿಕೆಗೆ ಹೆಚ್ಚಿನ ಆಳವಿಲ್ಲ, ಎಂದಂತಾಗುತ್ತದೆ. ಅನುಭವ ದ್ರವ್ಯದ ವೈವಿಧ್ಯ ಮತ್ತು ವಿಸ್ತಾರ ಸಮೃದ್ಧಿ ಕಾರಂತರ ಕಾದಂಬರಿಗಳಲ್ಲಿ ಇದೆಯಾದರೂ ಜೀವನ ಶ್ರದ್ಧೆಯನ್ನು ಕುರಿತಂಥ ಶೋಧನೆಯು ಉತ್ತಮ ಮಟ್ಟದ ವ್ಯಾವಹಾರಿಕ ಜೀವನ ವಿವೇಕದ ನೆಲೆಯನ್ನು ಗುರುತಿಸಿಕೊಡುವವರೆಗೆ ಕ್ರಿಯಾಶೀಲವಾಗುತ್ತದೆಯೆ ಹೊರತು

ಆಳವಾದ ತಾತ್ವಿಕ ಅರಿವನ್ನು ಸೋಸಿಕೊಡುವಷ್ಟು ಸೃಜನ ಶೀಲವಾಗುವುದಿಲ್ಲ ಆದಕ್ಕೆ ಬಹುಶಃ ಕಾರಂತರು ಅಭಿವ್ಯಕ್ತಿ ಪ್ರಕ್ರಿಯೆಯನ್ನು ಸೃಜನಶೀಲವಾಗುವುದಿಲ್ಲ. ಆದಕ್ಕೆ ಬಹುಶಃ ಕಾರಂತರು ಅಭಿವ್ಯಕ್ತಿ ಪ್ರಕ್ರಿಯೆಯನ್ನು ಸೃಜನಶೀಲ ಶೋಧ (creative quest) ಎಂದು ಪರಿಗಣಿಸದೆ ಒಂದು ನಿರ್ದಿಷ್ಟ ಕಾಲಾವಧಿಯ ಭಾವಲಹರಿಯ ಅನಿರ್ಬಂಧಿತ ಪ್ರಕಟನೆಯ ವಿಧಾನ ಎಂದು ತಿಳಿದು ವ್ಯವಹರಿಸುವುದೇ ಕಾರಣವಿರ ಬಹುದೆಂಬುದು ನನ್ನ ಊಹೆಯಾಗಿದೆ.

# ಕಾರಂತರ ಕಾದಂಬರಿಗಳ ಶಿಲ್ಪ : ಒಂದು ಸಮೀಕ್ಷೆ

ಕೆ. ವಿ. ನಾರಾಯಣ

ಕಾದಂಬರಿಯ ವಿಮರ್ಶೆಯಲ್ಲಿ ಶಿಲ್ಪ, ಬಂಧ, ವಿನ್ಯಾಸ, ರಚನೆ ಮುಂತಾದ ಮಾತುಗಳನ್ನು ಬಳಸಲಾಗುತ್ತಿದೆ. ಈ ಪಾರಿಭಾಷಿಕ ಪದಗಳಲ್ಲಿ ಅಷ್ಟಿಷ್ಟು ವ್ಯತ್ಯಾಸ ಗಳಿದ್ದರೂ ಒಂದರ ಬದಲು ಇನ್ನೊಂದು ಬರುವುದು ಸಾಧ್ಯ. ಸಾಹಿತ್ಯಕೃತಿಯು ತನ್ನಲ್ಲೇ ಪರಿಪೂರ್ಣವಾದದ್ದು ಎಂಬ ನಂಬುಗೆಯಿಂದ ಹೊರಟ ಸಾಹಿತ್ಯ ಮೀಮಾಂಸೆಯು ರೂಢಗೊಳಿಸಿದ ಪಾರಿಭಾಷಿಕ ಪದಗಳಿವು. ಕೃತಿಯ ಘಟಕಗಳ ನಡುವಣ ಸಮಗ್ರತೆ ಹಾಗೂ ಸಾವಯವತೆಗಳನ್ನು ಆ ಕೃತಿಯ ಶಿಲ್ಪ ಎಂದು ಗುರುತಿಸ ಲಾಗುತ್ತಿದೆ. ಅಲ್ಲದೆ ಕೃತಿಯು ತನ್ನ ಮೂಲ ಸಾಮಗ್ರಿಗಳನ್ನು 'ತನ್ನ ಉದ್ದೇಶಕ್ಕೆ ತಕ್ಕಂತೆ' ಪರಿವರ್ತಿಸಿಕೊಂಡಿರುವುದನ್ನು ಕೂಡ ಗುರುತಿಸಿ ಅದನ್ನು ಶಿಲ್ಪದ ವ್ಯಾಖ್ಯೆ ಯೊಳಗೆ ಸೇರಿಸಿಕೊಳ್ಳುವುದುಂಟು. ಈವರೆಗಿನ ನಮ್ಮ ಕಾದಂಬರಿ ವಿಮರ್ಶೆಯು ಕೃತಿಯ ಶಿಲ್ಪವನ್ನು ಕುರಿತಂತೆ ಅದರ ಅಭಾವದಲ್ಲಿ ಮಾತ್ರ ಚರ್ಚಿಸಿದಂತಿದೆ. ಎಂದರೆ ಶಿಲ್ಪವು ಕೃತಿಯ ಪ್ರಾಥಮಿಕ ಅವಶ್ಯಕತೆ ಎಂಬ ಪೂರ್ವಾನುಮಾನದಲ್ಲೇ ಇಂಥ ವಿಚಾರಗಳು ರೂಪುಗೊಳ್ಳುತ್ತಿವೆ ಎನ್ನಬಹುದು.

ಇದಲ್ಲದೆ ಶಿಲ್ಪವನ್ನು ಕುರಿತ ಚಿಂತನೆ ಅನ್ಯ ಕಲಾಪ್ರಕಾರಗಳ ಮೀಮಾಂಸೆ ಯಿಂದ ಬಂದದ್ದು ಎಂಬುದು ಗಮನಿಸಬೇಕಾದ ಸಂಗತಿ. ಅದರಲ್ಲೂ ದೇಶಸ್ಥ (Spatial) ಕಲೆಗಳ ಪ್ರಭಾವ ಅಧಿಕವಾಗಿದೆ. ವಾಸ್ತುಶಿಲ್ಪ ಹಾಗೂ ಚಿತ್ರಕಲೆಗಳ ಸಂದರ್ಭದ ಪರಿಕಲ್ಪನೆಯೊಂದನ್ನು ಸಾಹಿತ್ಯ ಮೀಮಾಂಸೆಯಲ್ಲಿ ಅಳವಡಿಸುವ ಯತ್ನ ಇಲ್ಲಿದ್ದಂತೆ ತೋರುತ್ತದೆ. ಟಾಲ್‌ಸ್ಟಾಯ್ 'ಅನಾ ಕರೆನಿನಾ' ಕಾದಂಬರಿಯನ್ನು ಬರೆದ ಮೇಲೆ ಆ ಕಾದಂಬರಿಯ ಶಿಲ್ಪವನ್ನು ಕುರಿತಂತೆ ತನ್ನ ಗೆಳೆಯನೊಬ್ಬನಿಗೆ ಕಾಗದ ಬರೆಯುತ್ತಾ 'ಆ ಕಾದಂಬರಿಯು ಅತ್ಯಂತ ಎಚ್ಚರದ ರಚನೆ; ಅದರ ಪ್ರತಿಯೊಂದು ವಿವರವೂ ಒಂದಕ್ಕೊಂದು ಪೂರಕ, ಉಪಕಾರಕ ಹಾಗೂ ಉಚಿತ ಬಂಧಾನುಸಾರಿ, ಗಾಥಿಕ್ ವಾಸ್ತುಶಿಲ್ಪದಂತೆ' ಎನ್ನುತ್ತಾನೆ. ಇಲ್ಲಿ ಹೋಲಿಕೆಗಾಗಿ ತಂದ ವಾಸ್ತುಶಿಲ್ಪದ ಉಲ್ಲೇಖವನ್ನು ಗಮನಿಸಬಹುದು.

ಶಿಲ್ಪವನ್ನು ಕುರಿತ ಪ್ರಚಲಿತ ಚಿಂತನೆಗಳನ್ನು ಹಾಗೆಯೇ ಬಳಸಿ ನಮ್ಮ ಇಂದಿನ ಚರ್ಚೆಯನ್ನು ಮುಂದುವರಿಸಬೇಕೇ ಅಥವಾ ಬೇರೆಯದೇ ಆದ ನೆಲೆಗಳನ್ನು ರೂಪಿಸಿ ಕೊಳ್ಳುವ ಅವಶ್ಯಕತೆ ಮತ್ತು ಸಾಧ್ಯತೆಗಳು ಇವೆಯೇ ಎಂಬುದು ಮುಂದಿನ ಪ್ರಶ್ನೆ

ಯಾಗಿದೆ. ಕಾದಂಬರಿ ಎಂಬ ಸಾಹಿತ್ಯ ಪ್ರಕಾರವು ಪಾಶ್ಚಾತ್ಯ ಸಾಹಿತ್ಯದ ಪ್ರಭಾವದಿಂದ ಭಾರತೀಯ ಸಾಹಿತ್ಯದಲ್ಲಿ ಪ್ರವೇಶ ಪಡೆದದ್ದು ಎಂಬುದರಿಂದಾಗಿ ಕಾದಂಬರಿಯನ್ನು ಕುರಿತ ಪಾಶ್ಚಾತ್ಯ ಮೀಮಾಂಸೆಯನ್ನು ಇಲ್ಲಿನ ಕಾದಂಬರಿಗಳಿಗೂ ಅನ್ವಯಿಸುವ ಪದ್ಧತಿ ಜಾರಿಯಲ್ಲಿದೆ ; ಮನ್ನಣೆಯನ್ನೂ ಪಡೆದಿದೆ. ಆದರೆ ಸಾಹಿತ್ಯ ಪ್ರಕಾರವೊಂದನ್ನು ಇನ್ನೊಂದು ಭಾಷಾ ಸಾಹಿತ್ಯ ಪರಂಪರೆಯಿಂದ ಪಡೆದುಕೊಂಡಾಗ ಆಗುವ ಮುಖ್ಯ ವ್ಯತ್ಯಾಸಗಳನ್ನು ನಾವು ಗಮನದಲ್ಲಿಟ್ಟುಕೊಳ್ಳಬೇಕು. ಕನ್ನಡ ಸಾಹಿತ್ಯ ಪರಂಪರೆಯು ಹೊಸ ಸಾಹಿತ್ಯ ಪ್ರಕಾರವನ್ನು ರೂಪಿಸಿಕೊಂಡಾಗ ತನ್ನ ಅವಶ್ಯಕತೆಗಳಿಗೆ ಅನುಗುಣ ವಾಗಿ ಅದರಲ್ಲಿ ವ್ಯತ್ಯಾಸಗಳನ್ನು ಮಾಡಿಕೊಳ್ಳುವುದು. ಇದಕ್ಕೆ ಸಾವಿರ ವರ್ಷಗಳ ಸಾಹಿತ್ಯ ಚರಿತ್ರೆಯು ಸಾಕಷ್ಟು ಮಾಹಿತಿಯನ್ನು ನಮಗೆ ಒದಗಿಸುವುದು. ಹಾಗೆ ನೋಡಿದರೆ ಕನ್ನಡ ಭಾಷೆಯ ಸಾಹಿತ್ಯ ಪರಂಪರೆಯ ಮುಖ್ಯ ಲಕ್ಷಣವೇ ಈ ಅನ್ಯ ಪ್ರಭಾವಗಳನ್ನು ತನಗೆ ಸೂಕ್ತವಾದ ಬಗೆಯಲ್ಲಿ ಪರಿವರ್ತನೆಗೆ ಒಳಪಡಿಸುವುದಾಗಿದೆ ಹೀಗಿರುವಾಗ ಕಾದಂಬರಿಯೂ ಇದರಿಂದ ಹೊರತಾಗಿಲ್ಲ. ಆದ್ದರಿಂದ ಆ ಪ್ರಕಾರವನು ಐರೋಪ್ಯ ಭಾಷೆಗಳಿಂದ ಪಡೆದುಕೊಂಡಿದ್ದರೂ ಅದನ್ನು ಕುರಿತ ಮೀಮಾಂಸೆಯು ಮಾತ್ರ ಕನ್ನಡದ ಸಾಂಸ್ಕೃತಿಕ ಸಂದರ್ಭದಲ್ಲೇ ರೂಪುಗೊಳ್ಳಬೇಕಾದದ್ದು ಕೇವಲ ಅನಿವಾರ್ಯ.

ಕನ್ನಡ ಕಾದಂಬರಿಗಳ ಶಿಲ್ಪವನ್ನು ಕುರಿತಂತೆ ಚರ್ಚೆಯನ್ನು ಮೊದಲುಮಾಡಿದ ವಿಮರ್ಶಕರೆಲ್ಲರೂ ಐರೋಪ್ಯ ಕಾದಂಬರಿಗಳನ್ನು, ಕಾದಂಬರಿ ಮೀಮಾಂಸೆಯನ್ನು ಓದಿದವರಾಗಿದ್ದುದು ಆಕಸ್ಮಿಕವೇನಲ್ಲ. ಅವರ ಸಿದ್ಧತೆಯನ್ನು ಗೌರವಿಸುತ್ತಲೇ ಗಮನಿಸಬೇಕಾದ ಒಂದು ವಿಚಾರವನ್ನು ಹೇಳಬೇಕಾಗಿದೆ. ಈ ವಿಮರ್ಶಕರ ಎದುರು ಇದ್ದುದು ಐರೋಪ್ಯ ಮಾದರಿಗಳು. ಅವುಗಳೊಡನೆ ಕನ್ನಡ ಕಾದಂಬರಿಗಳನ್ನು ಹೋಲಿಸುವ ಯತ್ನ ನಡೆದದ್ದು ಸ್ಪಷ್ಟ. ಹಾಗೂ ಅಲ್ಲಿನ ಕಾದಂಬರಿ ಮೀಮಾಂಸೆ ಯನ್ನು ಈ ಕಾದಂಬರಿಗಳಿಗೆ ಅನ್ವಯಿಸಲಾಯಿತು. 'ಸರಸಮ್ಮನ ಸಮಾಧಿ'ಯನ್ನು ಕುರಿತ ತಮ್ಮ ವಿಮರ್ಶೆಯಲ್ಲಿ ಶ್ರೀ ದಾಮೋದರ ರಾವ್ ಅವರು ಈ ಸಂಗತಿಯನ್ನು ನಿಚ್ಚಳವಾಗಿ ನುಡಿದಿದ್ದಾರೆ. 'ಪಾಶ್ಚಾತ್ಯ ಕಾದಂಬರಿಗಳಿಗೆ ಹೋಲಿಸಿದಾಗ ಮಾತ್ರ ನಮ್ಮ ಕಾದಂಬರಿಗಳ ಸಾಧನೆಯ ಕೊರತೆ' ಕಾಣುವುದೆಂಬುವ ಮಾತನ್ನು ಅಲ್ಲಿ ಹೇಳಲಾಗಿದೆ. ನಾನು ಇಲ್ಲಿ ಪಾಶ್ಚಾತ್ಯ ಪ್ರಭಾವಗಳನ್ನು ನಿರಾಕರಿಸುವ ಇನ್ನೊಂದು ಅತಿರೇಕಕ್ಕೆ ಹೋಗುವುದಿಲ್ಲ. ಸಾಹಿತ್ಯ ಪ್ರಕಾರಗಳು ಇಲ್ಲಿನ ಸಾಹಿತ್ಯ ಪರಂಪರೆಯೊಡನೆ ಹಾಗೂ ಸಂಸ್ಕೃತಿಯೊಡನೆ ರಚಿಸಿಕೊಳ್ಳುವ ಸಂಬಂಧದ ಮೂಲಕ ಮಾತ್ರ ಉಪ ಯುಕ್ತವಾದ ಚಿಂತನೆಗಳನ್ನು ಮಂಡಿಸಲು ಸಾಧ್ಯವೆಂಬ ನಂಬಿಕೆ ನನ್ನದು.

ಕೃತಿಯ ಸಾವಯವತೆ ಹಾಗೂ ಸಮಗ್ರತೆಯನ್ನು ಕುರಿತ ಚಿಂತನೆ ಪಾಶ್ಚಾತ್ಯ ರಲ್ಲಿ ಮೂಲಭೂತವಾಗಿ ಕಾವ್ಯದ ಸಂದರ್ಭದಲ್ಲಿ ರೂಪುಗೊಂಡದ್ದು. ಕಾದಂಬರಿಯ

ವಿಮರ್ಶೆಯಲ್ಲೂ ಅದನ್ನು ಬಳಸಲು ತೊಡಗಿದರು. ಕನ್ನಡದಲ್ಲೂ ಇಂಥ ಪ್ರಯತ್ನ ಗಳು ನಡೆದಿವೆ. ಆದರೆ ಇದು ಅತಿರೇಕದಲ್ಲಿ, ವರ್ಣನಾ ಪ್ರಧಾನವೂ ವಸ್ತುನಿಷ್ಠವೂ ಆದ ಸಾಹಿತ್ಯ ಪ್ರಕಾರವೊಂದರಲ್ಲಿ ಭಾವಗೀತೆಯ ಲಕ್ಷಣಗಳನ್ನು ಹುಡುಕಲು ಪ್ರೇರೇಪಣೆ ನೀಡಬಹುದು. ಇದರಿಂದ ಯಾವ ಪ್ರಯೋಜನವೂ ಆಗದು. ಬದಲಿಗೆ ಅಪಕಾರವೇ ಸರಿ. ಈ ಎಲ್ಲ ಸಂಗತಿಗಳ ಹಿನ್ನೆಲೆಯಲ್ಲಿ ಕಾದಂಬರಿಯ ಶಿಲ್ಪವನ್ನು ಕುರಿತ ನಮ್ಮ ಚರ್ಚೆಗೆ ಬೇಕಾದ ನೆಲೆಗಳನ್ನು ಯುಕ್ತವಾದ ಕ್ರಮದಲ್ಲಿ ರೂಪಿಸಿ ಕೊಳ್ಳುವ ಅವಶ್ಯಕತೆ ಇದೆ ಎಂದಾಯಿತು.

ಶಿವರಾಮ ಕಾರಂತರು ಬರೆದಿರುವ ಕಾದಂಬರಿಗಳು ನಲವತ್ತುಮೂರು. ಅವುಗಳಲ್ಲಿ 'ಭೂತ', 'ವಿಚಿತ್ರ ಕೂಟ', ಹಾಗೂ 'ನಿರ್ಭಾಗ್ಯ ಜನ್ಮ' ಎಂಬ ಮೊದಲ ಮೂರು ಕಾದಂಬರಿಗಳು ಈಗ ಅಲಭ್ಯವೆಂದೇ ಹೇಳಬೇಕು. ಉಳಿದ ನಲವತ್ತರಲ್ಲಿ ಮೊದಲನೆಯದು 'ಕನ್ಯಾಬಲಿ' (1928). ತೀರಾ ಇತ್ತೀಚಿನದು 'ಕಣ್ಣಿದ್ದೂ ಕಾಣರು' (1981). ಈ ಐದು ದಶಕಗಳಲ್ಲಿ ಕಾರಂತರು ವಿವಿಧ ಬಗೆಯ ಸಾಹಿತ್ಯ ಪ್ರಕಾರಗಳಲ್ಲಿ ಮಾತ್ರವಲ್ಲದೆ ಕಾದಂಬರಿ ಪ್ರಕಾರದಲ್ಲೂ ತಮ್ಮದೇ ಆದ ಪ್ರಯೋಗಗಳನ್ನು ಮಾಡುತ್ತಾ ಬಂದಿದ್ದಾರೆ. ಅವರ ಕಾದಂಬರಿಗಳನ್ನು ಕಾಲಾನುಕ್ರಮಣಿಯಲ್ಲಿ ಹಾಗೂ ಅವುಗಳ ವಸ್ತುಗಳಿಗೆ ಸಂಬಂಧಿಸಿದಂತೆ ವಿಭಜಿಸಿಕೊಂಡು ನೋಡಿದಾಗ ಈ ಮಾತು ಸ್ಪಷ್ಟವಾಗುತ್ತದೆ. ಕಾರಂತರು ಬರೆದಿರುವ ಕಾದಂಬರಿಗಳ ಸಂಖ್ಯೆಯನ್ನು ಹಾಗೂ ಅವುಗಳ ರಚನೆಯ ವೇಗವನ್ನು ಗಮನಿಸಿದಾಗ ಸ್ಪಷ್ಟವಾಗುವ ಸಂಗತಿ ಇದು. ಆಯಾ ಕಾಲದಲ್ಲಿ ಅವರಿಗೆ ಮುಖ್ಯವೆನಿಸಿದ ವಿಚಾರಗಳನ್ನು, ಜೀವನ ಮೌಲ್ಯಗಳನ್ನು ಮಂಡಿ ಸಲು ಕಾದಂಬರಿ ಪ್ರಕಾರವನ್ನು ಸಾಧನವನ್ನಾಗಿ ಬಳಸಿಕೊಳ್ಳುತ್ತಿದ್ದಾರೆಯೇ ಹೊರತು ಅದನ್ನೇ ಒಂದು ಗುರಿಯನ್ನಾಗಿ ಅವರು ಪರಿಗಣಿಸಿದಂತಿಲ್ಲ. ಈ ಸಂಗತಿಯನ್ನು ಒಪ್ಪಿ ಕೊಳ್ಳುವಲ್ಲಿ ಕಾರಂತರೂ ಹಿಂಜರಿದಿಲ್ಲ. 'ಮಾಧ್ಯಮದ ಸಾಧ್ಯತೆಯನ್ನು ಅರಿತಿದ್ದರೆ ಕಾರಂತರು ಎಂಥ ಕಲಾವಿದರಾಗಬಹುದಿತ್ತು' ಎಂಬ ಕೊರಗನ್ನು ಶ್ರೀ ಅನಂತಮೂರ್ತಿ ಯವರು ವ್ಯಕ್ತಪಡಿಸುವಾಗ ಅವರ ಗಮನದಲ್ಲಿ ಕಾರಂತರು ಕಾದಂಬರಿ ಪ್ರಕಾರವನ್ನು ಕೇವಲ ಒಂದು ಸಾಧನವನ್ನಾಗಿ ಪರಿಗಣಿಸುತ್ತಿರುವ ಸಂಗತಿಯೇ ಇದ್ದಿರಬೇಕು. ಹೀಗೆ ಸಾಹಿತ್ಯ ಪ್ರಕಾರವೊಂದನ್ನು ಧ್ಯಾನಿತವಲ್ಲದ ಅಥವಾ ಧ್ಯಾನಪೂರ್ವಕ್ರಮದಲ್ಲಿ ಬಳಸು ವುದು ಅಸಾಧ್ಯವೇನೂ ಅಲ್ಲ ಹಾಗೂ ಅಸಹಜವೂ ಅಲ್ಲ. ಆದರೆ ಹೀಗೆ ಬಳಸಿ ದಾಗಲೂ ಒಬ್ಬ ಬರೆಹಗಾರನ ಎಲ್ಲ ಕೃತಿಗಳನ್ನೂ ಒಟ್ಟಾಗಿ ಗಮನಿಸಿದಾಗ ಒಂದು ಆಂತರಿಕ ರಚನೆಯು ಕಾಣುವುದೆಂಬುದೂ ಕೂಡ ಗಮನಾರ್ಹವಾದ ವಿಷಯ. ಕಾರಂತರ ಕಾದಂಬರಿಗಳು ಇದಕ್ಕೆ ಹೊರತೇನೂ ಅಲ್ಲ. ಅವರ ಕಾದಂಬರಿಗಳಲ್ಲಿ, ಮೇಲಿಂದ ಮೇಲೆ ಆವರ್ತನಗೊಳ್ಳುವ ಹಲವಾರು ಆಕಾರಗಳು ಹಾಗೂ ಕಾದಂಬರಿ ಗಳಲ್ಲೇ ಕಂಡುಬರುವ ಕೆಲವು ಮಾದರಿಗಳು ನಮ್ಮ ಅಧ್ಯಯನಕ್ಕೆ ತಕ್ಕ ಸಾಮಗ್ರಿಯನ್ನು ಒದಗಿಸುತ್ತವೆ. ಈ ನೆಲೆಯಲ್ಲೇ ಕೆಲವು ವಿಚಾರಗಳನ್ನು ಮುಂದೆ ಬೆಳೆಸಲಾಗಿದೆ.

ಕಾರಂತರ ಕಾದಂಬರಿಗಳಲ್ಲಿ ಎಷ್ಟೋ ಸಂಗತಿಗಳು, ಪಾತ್ರಗಳು, ವಿವರಗಳು ಮತ್ತೆ ಮತ್ತೆ ಆವರ್ತನಗೊಳ್ಳುತ್ತಿರುವಂತೆ ತೋರುವುದನ್ನು ಈಗಾಗಲೇ ವಿಮರ್ಶಕರು ಗುರುತಿಸಿದ್ದಾರೆ. ಶ್ರೀ ಕೀರ್ತಿನಾಥ ಕುರ್ತಕೋಟಿಯವರು ಈ ಬಗ್ಗೆ ಚರ್ಚಿಸುತ್ತಾ ಈ ಆವರ್ತನಗೊಳ್ಳುವ ಸಂಗತಿಗಳೇ ಅವರ ಕಾದಂಬರಿಯ ಮೂಲ ಭಾಷೆಯಾಗಿರ ಬಹುದೇ ಎಂಬ ಅನುಮಾನವನ್ನೂ ಕೂಡ ವ್ಯಕ್ತಪಡಿಸಿರುವುದುಂಟು. ಈ ಚಿಂತನೆಯ ಎಳೆಯನ್ನು ಹಿಡಿದು ಹೊರಟರೆ ಕಾರಂತರ ಕಾದಂಬರಿಗಳ ಶಿಲ್ಪವನ್ನು ಕುರಿತ ಚರ್ಚೆ ಅವರ ಯಾವುದೇ ಒಂದು ಕಾದಂಬರಿಗೆ ಮಾತ್ರ ಸೀಮಿತಗೊಳ್ಳುವುದು ಸಾಧ್ಯವಿಲ್ಲ ಎನ್ನುವ ಸಂಗತಿ ಸ್ಪಷ್ಟವಾಗುತ್ತದೆ.

ಇದಲ್ಲದೆ ಕಾರಂತರು ಅನುಸರಿಸುವ ಮಂಡನಾಕ್ರಮದಲ್ಲೂ ಕೆಲವು ಮಾದರಿ ಗಳಿವೆ. ಒಂದೊಂದು ಮಾದರಿಯನ್ನೂ ಅವರು ಹಲವಾರು ಕಾದಂಬರಿಗಳಲ್ಲಿ ಮತ್ತೆ ಮತ್ತೆ ಪ್ರಯೋಗಿಸಿ ನೋಡಿದ್ದಾರೆ. ಆ ಮಾದರಿಯ ಸ್ವರೂಪವನ್ನು ಆ ಎಲ್ಲ ಕಾದಂಬರಿ ಗಳ ಒಟ್ಟಾರೆ ಅಧ್ಯಯನದಿಂದ ಗ್ರಹಿಸಲು ಸಾಧ್ಯವಿದೆ.

ಕಾದಂಬರಿಯ ವಸ್ತುವನ್ನು ಆಯುವಲ್ಲಿ ಹಾಗೂ ವಿನ್ಯಾಸವನ್ನು ರೂಪಿಸುವಲ್ಲಿ ಕಾರಂತರು ವಾಸ್ತವಮಾರ್ಗವನ್ನು ಅನುಸರಿಸುವರು. ವಾಸ್ತವಮಾರ್ಗದಲ್ಲೂ ವಸ್ತುನಿಷ್ಠವಾಸ್ತವಮಾರ್ಗವೇ ಅವರ ಹಲವು ಕಾದಂಬರಿಗಳಲ್ಲಿ ಕಂಡು ಬರು ವಂಥದು. ಅವರ ಕಾದಂಬರಿಗೆ ಮೂಲ ಸಾಮಗ್ರಿಯನ್ನು ಒದಗಿಸುವ ಪ್ರಪಂಚಕ್ಕೂ ಕಾದಂಬರಿಯ ಒಳಪ್ರಪಂಚಕ್ಕೂ ಇರುವ ನಿಕಟತೆಯ ಸ್ವರೂಪವನ್ನು ಗಮನಿಸಿದರೆ ಒಂದು ಮುಖ್ಯ ವಿಚಾರ ಗಮನಕ್ಕೆ ಬರುವುದು. ಹೊರಗಿನ ಲೋಕದ ಕಾಲ ಹಾಗೂ ಕಾದಂಬರಿಯ ಕಾಲ ಇವುಗಳಲ್ಲಿ ಯಾವ ವ್ಯತ್ಯಾಸವನ್ನೂ ಕಾರಂತರು ಮಾಡಿಕೊಳ್ಳು ವುದಿಲ್ಲ. ಏದರೆ ನಿರೂಪಣೆಯ ಲಯವನ್ನು ನಿರ್ಧರಿಸುವ ಬಿಂದು ಇರುವುದು ಸಾಮಗ್ರಿಯನ್ನು ಒದಗಿಸುತ್ತಿರುವ ಜೀವನದಲ್ಲಿ ಎಂದು ಕಾರಂತರು ನಂಬುತ್ತಾರೆ. ಎಲ್ಲೆಲ್ಲಿ ಕಾಲವನ್ನು ಕುರಿತ ಈ ಒಪ್ಪಂದವನ್ನು ಮೀರಲಾಗಿದೆಯೋ ಅಲ್ಲೆಲ್ಲ ಆ ಮೀರು ವಿಕೆಯು ಪ್ರಬಂಧ ಧ್ವನಿಯಾಗಿ ಬರುವುದು. 'ಬೆಟ್ಟದ ಜೀವ' ಕಾದಂಬರಿ ಇದಕ್ಕೆ ಒಂದು ಒಳ್ಳೆಯ ಉದಾಹರಣೆ. ಅಲ್ಲಿನ ಕಥನದ ಅವಧಿ ನಾಲ್ಕೈದು ದಿನಗಳ ದ್ದಾದರೂ ಕಾದಂಬರಿಯ ಪ್ರಪಂಚ ಒಂದು ಜೀವನ ಕ್ರಮದ ವಿನ್ಯಾಸಗಳನ್ನು ಧ್ವನಿಸುವುದು. ಹೊರ ಜಗತ್ತಿನಿಂದ ಬೇರ್ಪಡಿಸುವ ಮೂಲಕವೇ ಆ ಜಗತ್ತಿಗೆ ಒಂದು ಬಗೆಯ ಸ್ವಯಂಪೂರ್ಣತೆಯನ್ನು ಒದಗಿಸಲಾಗಿದೆ. ಮುಂದೆ ವಿವರಗಳನ್ನು ಆಯ್ದು ಸಂಯೋಜಿಸುವಲ್ಲಿ ಪ್ರತಿಯೊಂದು ಸಂಗತಿಯೂ ಕೂಡ ಮತ್ತೇನನ್ನೋ ಹೊರ ಚಾಚಿನಲ್ಲಿ ಸೂಚಿಸುವಂತೆ ಅಳವಡಿಸಲಾಗಿದೆ. ಸ್ನಾನ, ಊಟ, ಜ್ವರ ಹುಲಿಬೇಟೆ, ಹೊರ ಜಗತ್ತಿನ ಉಲ್ಲೇಖ, ವ್ಯವಹಾರ ಇವೆಲ್ಲವೂ ಕೂಡ ಇಲ್ಲಿ ಬಳಕೆಯಾಗುವ ಕ್ರಮವನ್ನು ಗಮನಿಸಿದಾಗ ಮೇಲೆ ಹೇಳಿದ ಸಂಗತಿ ಸ್ಪಷ್ಟವಾಗುತ್ತದೆ.

ಕಾರಂತರು ಹೀಗೆ ವಾಸ್ತವ ಲೋಕವನ್ನು ನೆಮ್ಮುವ ಬಗೆಯಲ್ಲೇ ಕೃತಿಯೊಂದರ ಶಿಲ್ಪದ ಸ್ವರೂಪ ಕೂಡ ಸ್ಪಷ್ಟವಾಗುತ್ತದೆ. ಅನುಭವ ಹಾಗೂ ಅದನ್ನು ಅಭಿವ್ಯಕ್ತಿಸಲು ಬೇಕಾದ ರೂಪ ಇವೆರಡೂ ವಾಸ್ತವ ಜಗತ್ತಿನಲ್ಲೇ ಲಭಿಸುತ್ತವೆಂದು ಕಾರಂತರು ತಿಳಿಯುತ್ತಾರೆ. ಇದಕ್ಕೆ ಅವರ ಕಾದಂಬರಿಗಳಿಂದಲೇ ಹಲವು ನಿದರ್ಶನಗಳನ್ನು ಕೊಡಬಹುದು. 'ಮೊಗ ಪಡೆದ ಮನ' ಕಾದಂಬರಿಯ ವ್ಯಾಸನಿಗೆ ಜೀವನದ ವಿವಿಧ ಅನುಭವಗಳು ತಂದುಕೊಡುವ ಭಾವಸಮುಚ್ಚಯಗಳನ್ನು ನರ್ತನದ ಮೂಲಕ ಹೊರಹಾಕಲು ತಕ್ಕ ರೂಪ ದೊರಕುವುದು ಮತ್ತೆ ವಾಸ್ತವ ಜಗತ್ತಿನ ವಿವರವಾದ ಮಯೂರಗಳ ಕುಣಿತದಲ್ಲಿ. ಜೀವನ ಹೀಗೆ ಒದಗಿಸುವ ಆಶಯ ಮತ್ತು ರೂಪಗಳನ್ನು ಸಂಯೋಜಿಸುವುದಷ್ಟೇ ಕಲೆಯ ಕೆಲಸ ಎಂಬುದನ್ನು ಕಾರಂತರ ಹಲವು ಕಾದಂಬರಿಗಳು ಮತ್ತೆ ಮತ್ತೆ ಸ್ಪಷ್ಟಪಡಿಸುತ್ತವೆ. ಹಾಗೇ ಮೇಳನಗೊಳಿಸಿಕೊಳ್ಳದ ಕಲೆಯಲ್ಲಿ ಜೀವಂತಿಕೆ ಇಲ್ಲದಿರುವುದನ್ನು ಕೂಡ ಹೇಳಲಾಗಿದೆ. 'ಮೈ ಮನಗಳ ಸುಳಿಯಲ್ಲಿ' ಬರುವ ಚಿತ್ರ, ನರ್ತನ ಹಾಗೂ ಸಂಗೀತಗಳನ್ನು ಕುರಿತ ವಿವರಗಳನ್ನು ಇಲ್ಲಿ ಗಮನಿಸಬಹುದು. ಎಲ್ಲಿ ವಾಸ್ತವ ಜೀವನದ ಅನುಭವಗಳಿಗೆ ತಕ್ಕ ರೂಪಗಳನ್ನು ಜೀವನದಿಂದಲೇ ರೂಪಿಸಿಕೊಳ್ಳಲು ಆಗುವುದಿಲ್ಲವೋ ಅಲ್ಲಿ ಕಲೆ ಕೇವಲ ತೋರಿಕೆಯಾಗುವುದೆಂಬ ಭಾವನೆಯನ್ನು ಹಲವು ಕಡೆ ಮಂಜುಳೆ ಅಲ್ಲಿ ಸ್ಪಷ್ಟವಾಗಿಸುತ್ತಾಳೆ.

ಈ ಎರಡು ಸಂಗತಿಗಳಿಂದ–ವಾಸ್ತವವನ್ನು ಗ್ರಹಿಸುವ ಬಗೆ ಹಾಗೂ ಕಲೆಯ ಆಶಯ ಮತ್ತು ರೂಪಗಳನ್ನು ಕುರಿತ ಚಿಂತನೆ-ತಲುಪಬಹುದಾದ ನಿರ್ಧಾರವೆಂದರೆ ಕಾರಂತರ ಮಟ್ಟಿಗೆ ಕೃತಿಯ ಶಿಲ್ಪವೆಂದರೆ ಅದು ಜೀವನದ ಶಿಲ್ಪವೇ ಸರಿ. ಅಥವಾ ಅವರು ಜೀವನದಲ್ಲಿ ಯಾವ ಬಂಧವನ್ನು ಕಾಣುವರೋ ಅದೇ ಅವರ ಕಾದಂಬರಿಯ ಬಂಧವಾಗಿಯೂ ರೂಪಗೊಂಡಿರುತ್ತದೆ.

ಕಾರಂತರ ಕಾದಂಬರಿಗಳ ವಸ್ತುಗಳ ಚಾರಿತ್ರಿಕ ಸಮಯ 1850ರಿಂದ ಇಂದಿನವರೆಗೆ ಹರಡುತ್ತದೆ. ಗ್ರಹಿಕೆಗೆ ನಿಲುಕದ ಅಥವಾ ಅನ್ಯ ಆಧಾರಗಳನ್ನು ಆಧರಿಸಬೇಕಾದ ಚಾರಿತ್ರಿಕ ಸಮಯದ ವಸ್ತುವನ್ನು ನೇರವಾಗಿ ಕಾರಂತರು ತಮ್ಮ ಕಾದಂಬರಿಗೆ ವಸ್ತುವಾಗಿ ಆಯ್ದುಕೊಂಡಿಲ್ಲ. ಈ ವಸ್ತುಗಳನ್ನು ಎರಡು ಮುಖ್ಯ ವಿಭಾಗಗಳಲ್ಲಿ ಅಳವಡಿಸಬಹುದು. ಕಾದಂಬರಿಯ ರಚನೆಯ ಕಾಲದಿಂದ ದೂರದ ವಸ್ತು ಹಾಗೂ ರಚನೆಯ ಕಾಲದೊಡನೆ ಸಮಕಾಲೀನವಾದ ವಸ್ತು. ಇದರಲ್ಲಿ ಮೊದಲ ಬಗೆಯಲ್ಲಿ ಕೆಲವು ಉಪ ವಿಭಾಗಗಳನ್ನು ಮಾಡಬಹುದು. ಕಾದಂಬರಿಕಾರರ ಹಿಂದಿನ ತಲೆಮಾರು ಅಂದರೆ ಯಾವ ಜೀವನಕ್ರಮದ ಬಗೆಗೆ ವಿವರಗಳು ಮಾತ್ರ ತಿಳಿದಿದ್ದು ನೇರವಾದ ಅನುಭವವಿರದೋ ಆ ವಸ್ತು. ಇನ್ನೊಂದು ಬಗೆಯಲ್ಲಿ, ಕಾದಂಬರಿಕಾರರು ತಮ್ಮ ಜೀವನದ ವಿವಿಧ ಹಂತಗಳಲ್ಲಿ ಕಂಡ ಬದುಕು. ಹೀಗೆ ವಿಭಜಿಸಿಕೊಳ್ಳುವುದರ

ತಥ್ಯವನ್ನು ಆಯಾ ಬಗೆಯ ವಸ್ತುವನ್ನು ಹೊಂದಿರುವ ಕಾದಂಬರಿಗಳ ಅಧ್ಯಯನದಿಂದ ಕಂಡುಕೊಳ್ಳಬಹುದಾಗಿದೆ.

ಇವರ ಕಾದಂಬರಿಗಳ ಶಿಲ್ಪದ ಮೇಲೆ ಪ್ರಭಾವ ಬೀರುವ ಇನ್ನೊಂದು ಸಂಗತಿಯನ್ನು ಇಲ್ಲಿಯೇ ಗಮನಿಸುವುದು ಒಳ್ಳೆಯದು. ವ್ಯಕ್ತಿ ಹಾಗೂ ಅವನ ವಾತಾವರಣದ ಸಂಬಂಧವೇ ಆ ಸಂಗತಿ. ವ್ಯಕ್ತಿಯ ಜೀವನದ ವಿನ್ಯಾಸಗಳಲ್ಲಿ ನೇರವಾಗಿ ಇಲ್ಲವೇ ಆ ವಿನ್ಯಾಸಗಳಿಗೆ ರೂಪ ಕೊಡುವ ಬಿಂದುವಾಗಿ ಅವನ ಪರಿಸರ ಮುಖ್ಯ ಪಾತ್ರ ವಹಿಸುವುದೆಂದು ಕಾರಂತರು ಗ್ರಹಿಸುತ್ತಾರೆ. ಆದ್ದರಿಂದ ಅವರ ಕಾದಂಬರಿಯ ವಸ್ತು, ಪಾತ್ರಗಳ ಪರಿಸರವನ್ನು ಅವಲಂಬಿಸಿಯೂ ವಿಭಜನೆ ಸಾಧ್ಯ. ಈ ಪರಿಸರ ಖಚಿತವಿದ್ದು, ಮೈ ತಳೆಯುವ ಕೃತಿಗಳು ಹಾಗೂ ಪರಿಸರವೇ ಆಕಾರ ರಹಿತವಿದ್ದು ರೂಪುಗೊಳ್ಳುವ ಕೃತಿಗಳು ಎಂದು ಎರಡು ಬಗೆಗಳನ್ನು ಗುರುತಿಸಬಹುದು.

ಮೇಲಿನ ಎರಡು ನಿರ್ಧಾರಕ ಅಂಶಗಳ ನೆರವಿನಿಂದ ಕಾರಂತರ ಕಾದಂಬರಿಗಳಲ್ಲಿ ಕಾಣುವ ಶಿಲ್ಪದ ಮಾದರಿಗಳ ಅಧ್ಯಯನಕ್ಕೆ ತೊಡಗಬಹುದು.

ಕಾದಂಬರಿಯು ಚಿತ್ರಿಸುವ ವಸ್ತು ಕಾದಂಬರಿಕಾರರ ಹಿಂದಿನ ತಲೆಮಾರು ಇಲ್ಲವೇ ಎಳೆತನಕ್ಕೆ ಸೇರಿದುದಾದರೆ ಆಗ ಆ ಜೀವನ ವಿವರಗಳನ್ನು ಹಿಡಿದಿಡಬಲ್ಲ ರೂಪಗಳನ್ನು ಕೂಡ ಅದೇ ಜೀವನದಿಂದ ಗ್ರಹಿಸಲು ಕಾರಂತರು ಶಕ್ತರಾಗುತ್ತಾರೆ. ವಸ್ತುವು ಅವರ ಪ್ರಬುದ್ಧ ಜೀವನದ ಹಂತಕ್ಕೆ ಸೇರಿದ್ದು ಇಲ್ಲವೇ ನಿರೂಪಣೆಯ ಕಾಲಕ್ಕೆ ತೀರಾ ಹತ್ತಿರದ್ದೂ ಆದಾಗ ಅವರು ಆ ವಸ್ತುವನ್ನು ಪ್ರತಿನಿಧಿಸಬಲ್ಲ ರೂಪವನ್ನು ಆ ಜೀವನದಲ್ಲೇ ಗ್ರಹಿಸುವುದು ಅಸಾಧ್ಯವೆಂಬಂತೆ ಚಿತ್ರಿಸುತ್ತಾರೆ ಇಲ್ಲವೇ ವಿಡಂಬನೆಯ ಹಾದಿಯನ್ನು ಅನುಸರಿಸುತ್ತಾರೆ. 'ಉಕ್ಕಿದ ನೊರೆ' ಮೊದಲ ಬಗೆಗೂ (ಪ್ರತಿನಿಧಿಸಬಲ್ಲ ರೂಪದ ಕೊರತೆ) 'ದೇವದೂತರು' ಹಾಗೂ 'ಗೊಂಡಾರಣ್ಯ' ಎರಡನೆಯ ಬಗೆಗೂ ನಿದರ್ಶನಗಳು.

ಮೇಲೆ ಹೇಳಿದ ಮಾತುಗಳನ್ನು ಮತ್ತಷ್ಟು ವಿವರವಾಗಿ ನೋಡುವುದು ಅವಶ್ಯಕ. 'ಮರಳಿ ಮಣ್ಣಿಗೆ'ಯಂಥ ಕಾದಂಬರಿಯನ್ನು ಗಮನಿಸಿದಾಗ ಜೀವನಕ್ರಮ ಹಾಗೂ ಅದನ್ನು ಪ್ರತಿನಿಧಿಸುವ ರೂಪ ಇವೆರಡೂ ಜತೆಯಾಗಿಯೇ ಕಾದಂಬರಿಕಾರರಿಗೆ ಲಭಿಸಿರುವುದು ಗೋಚರವಾಗುತ್ತದೆ. ರಾಮೈತಾಳರ ತಲೆಮಾರಿನಿಂದ ಹಿಡಿದು ಮೂರನೆ ತಲೆಮಾರಿನವರೆಗೆ ಜೀವನ ವಿನ್ಯಾಸಗಳನ್ನು ಸಂಯೋಜಿಸುವಲ್ಲಿ ಪಾತ್ರಗಳು ನಂಬಿ ನಡೆದ ಮೌಲ್ಯಗಳು ಆಶಯವಾಗಿ ಕಂಡುಬಂದರೆ ಪರಿಸರದ ವಿವರಗಳು, ಬದಲಾವಣೆಗಳು ರೂಪಗಳನ್ನು ಒದಗಿಸುತ್ತವೆ. ಮದುವೆ, ಹುಟ್ಟು ಹಾಗೂ ಸಾವುಗಳ ಆವರ್ತಗಳು ಕಾದಂಬರಿಗೆ ಒದಗಿಸುವ ಬಂಧವನ್ನು ಗಮನಿಸುವಾಗಲೇ ಈ ಆವರ್ತದ ಆಶಯವನ್ನು ಅದರ ಧ್ವನಿಸಾಮರ್ಥ್ಯವನ್ನು ಪ್ರಕಟಿಸಲು ನೆರವಾಗಬಲ್ಲ ಕಡಲು, ನಿಸರ್ಗ, ಋತುಗಳ ಬದಲಾವಣೆ, ಆಚರಣೆಗಳು ಮುಂತಾದ

ವನ್ನು ಮರೆಯುವಂತಿಲ್ಲ. ಅಂದರೆ ಜೀವನವಿನ್ಯಾಸವೇ ಕಾದಂಬರಿಯ ವಿನ್ಯಾಸವನ್ನು ರೂಪಿಸುವಷ್ಟು ಶಕ್ತವಾಗಿದೆ ಅಥವಾ ಕಾದಂಬರಿಕಾರರು ಆ ಜೀವನವನ್ನು ಹಾಗೆ ಗ್ರಹಿಸಲು ಶಕ್ತರಾಗಿದ್ದಾರೆ. ಆದರೆ ಇದೇ ಮಾತನ್ನು 'ಗೊಂಡಾರಣ್ಯ' ಇಲ್ಲವೇ 'ಉಕ್ಕಿದ ನೊರೆಯಂಥ' ಕಾದಂಬರಿಗಳಿಗೆ ಅನ್ವಯಿಸಲು ಸಾಧ್ಯವಾಗುವುದಿಲ್ಲ. ಏಕೆಂದರೆ ಮುಖ್ಯವಾಗಿ ಈ ಕಾದಂಬರಿಯ ವಸ್ತು, ಪಾತ್ರಗಳು ಬೌದ್ಧಿಕ ಗ್ರಹಿಕೆಗೆ ಸಿಕ್ಕಿದ್ದು ಪರಿವರ್ತನೆಗೊಳ್ಳುತ್ತಿರುವ ಜೀವನದ ಕೇಂದ್ರ ಶಕ್ತಿಯು ಎಲ್ಲಿದೆ ಎಂಬುದೇ ಕಾದಂಬರಿ ಕಾರರ ಮುಖ್ಯ ಸಮಸ್ಯೆಯಾಗಿದೆ. ನಿನ್ನೆ ಗೂಂಡಾ ಆಗಿ ತಿರುಗಾಡುತ್ತಿದ್ದ ಮೋನಪ್ಪ ಇಂದು ರಾಜ್ಯಾಡಳಿತವನ್ನು ನಿಯಂತ್ರಿಸಬಲ್ಲ ಶಕ್ತಿಯಾಗುತ್ತಾನೆ. (ಉಕ್ಕಿದ ನೊರೆ) ಇದು ಹೇಗೆ ಸಾಧ್ಯವಾಯಿತು ? ಈ ಪ್ರಶ್ನೆಗೆ ಉತ್ತರ ಸರಳವಲ್ಲ. ಏಕೆಂದರೆ ಕಾರಂತರು ವ್ಯಕ್ತಿಜೀವನದ ವಿಕಾಸಗಳನ್ನು ಅವನ ಚಾರಿತ್ರ್ಯ ಹಾಗೂ ಮೌಲ್ಯಗಳ ಮೂಲಕ ವಿವರಿಸಲು ಸಾಧ್ಯ ಹಾಗೂ ಹಾಗೇ ವಿವರಿಸಬೇಕು ಎಂದು ತಿಳಿದವರು. ಈ ಮಾತನ್ನೇ ಅವರ ಹಲವು ಕಾದಂಬರಿಗಳು ಸಮರ್ಥಿಸುತ್ತವೆ. ಆದರೆ ಸಮಕಾಲೀನ ಬದುಕು ಈ ನಂಬುಗೆಗೆ ವಿರುದ್ಧವಾಗಿ ಕೆಲಸ ಮಾಡುತ್ತಿರುವಂತಿದೆ. ಹೀಗಾಗಿ ಮೊದಲ ಬಗೆಯ ಕಾದಂಬರಿಗಳಲ್ಲಿ ನಿರೂಪಕ ಕೇವಲ ಘಟನೆಗಳಿಗೆ ಸಾಕ್ಷಿಯಾಗಿ ನಿಂತರೆ ಎರಡನೆಯ ಬಗೆಯ ಕಾದಂಬರಿಗಳಲ್ಲಿ ಆ ಘಟನೆಗಳ ವ್ಯಾಖ್ಯಾಕಾರನಾಗಿಯೂ ಕೆಲಸ ಮಾಡುತ್ತಾನೆ. ಇದರ ವಿಸ್ತರಣೆಯನ್ನು 'ನಾವು ಕಟ್ಟಿದ ಸ್ವರ್ಗ'ದಂಥ ಕಾದಂಬರಿ ಗಳಲ್ಲಿ ನೋಡಬಹುದಾಗಿದೆ. ಹೀಗೆ ವಿವರಣೆ ಇಲ್ಲವೇ ವ್ಯಾಖ್ಯಾನ ನೀಡುವ ಪಾತ್ರ ವೊಂದನ್ನು ಕೆಲವು ಕಾದಂಬರಿಗಳಲ್ಲಿ ರೂಪಿಸಿ ಕೊಡಲು ಕಾರಂತರು ಯತ್ನಿಸಿದ್ದಾರೆ. 'ಆಳ ನಿರಾಳ'ದ ವಸಂತ ದೇಸಾಯಿ, 'ಇನ್ನೊಂದೇ ದಾರಿ'ಯ ಜಯರಾಮ 'ಒಂಟಿ ದನಿ'ಯ ಜಗನ್ನಾಥರಾವ್ ಇಂಥ ಪಾತ್ರಗಳು. ಆದರೆ ಇನ್ನು ಕೆಲವು ಕಾದಂಬರಿಗಳಲ್ಲಿ ನಿರೂಪಕನೇ ಈ ಕೆಲಸವನ್ನು ನಿರ್ವಹಿಸುವುದನ್ನು ಕಾಣುತ್ತೇವೆ.

ಸಾವಯವತೆ ಹಾಗೂ ಸಮಗ್ರತೆಗಳನ್ನು ಶಿಲ್ಪದ ಲಕ್ಷಣಗಳೆಂದು ವಾಖ್ಯಾನಿಸುವ ಬಗೆಗೆ, ಕಾರಂತರು ಸಮಕಾಲೀನ ವಸ್ತುವನ್ನು ಆಯ್ದು ಬರೆದ ಕಾದಂಬರಿಗಳಲ್ಲಿ ಅಚ್ಚುಕಟ್ಟಾದ ಶಿಲ್ಪದ ಕೊರತೆ ಇರುವಂತೆ ತೋರುತ್ತದೆ. ಆದರೆ ಜೀವನ ಮತ್ತು ಕಲೆಯ ಸಂಬಂಧವನ್ನು ಕುರಿತು ಅವರ ಕಾದಂಬರಿಗಳು ತಳೆಯುವ ನಿಲುವುಗಳ ಹಿನ್ನೆಲೆಯಲ್ಲಿ ನಾವು ಬೇರೆಯದೇ ಆದ ನಿರ್ಧಾರವನ್ನು ತಲುಪುವುದು ಅನಿವಾರ್ಯ. ಸಮಕಾಲೀನ ಜೀವನ, ಅದರಲ್ಲೂ ಸಾರ್ವಜನಿಕ (ಕಾರಂತರೆನ್ನುವಂತೆ ಸಾರ್ವಜನಿಕ) ಜೀವನದ ವಿವರಗಳು ಒಂದಕ್ಕೊಂದು ತರ್ಕಬದ್ಧವಾದ ಸಂಬಂಧವನ್ನು ಹೊಂದಿ ರೂಪ ತಳೆದಂತೆ ತೋರುತ್ತಿಲ್ಲ. ಹಾಗಾಗಿ ಆ ಜೀವನವನ್ನು ಹಿಡಿಯುವ ಕಾದಂಬರಿಗೆ ಖಚಿತ ಶಿಲ್ಪವಾದರೂ ಹೇಗೆ ಸಾಧ್ಯ? ಈ ವಿವರಣೆಯನ್ನು ಇನ್ನೂ ಒಂದು ನೆಲೆ ಯಿಂದ ತಲುಪುವುದು ಸಾಧ್ಯ. ಸಮಕಾಲೀನವಲ್ಲದ ವಸ್ತುವನ್ನು ಆಯ್ದಾಗ ಕತೆ

ಗಾರರಾಗುವ ಕಾರಂತರು ಸಮಕಾಲೀನ ವಸ್ತುವನ್ನು ತೆಗೆದುಕೊಂಡಾಗ ವ್ಯಾಖ್ಯಾಕಾರರು ಇಲ್ಲವೆ ಚರಿತ್ರಕಾರರಾಗುತ್ತಾರೆ. ಚರಿತ್ರಕಾರನ ಧಾಟಿಯ ನಿರೂಪಣೆಯಿಂದಾಗಿ ಕೆಲವು ಕಡೆ ಓದುಗನಿಂದ ಹೊರನಿಲ್ಲುವ ಬದಲು ಅವನ ಜತೆಯಲ್ಲೇ ನಿಲ್ಲುವುದುಂಟು. ವ್ಯಾಖ್ಯಾಕಾರರಾದಾಗ ಓದುಗನೊಡನೆ ಸಂವಾದವನ್ನು ಹೂಡುವ ಧಾಟಿಯನ್ನೂ ಅನುಸರಿಸುವರು. 'ಗೊಂಡಾರಣ್ಯ'ದ ಮುನ್ನುಡಿಯಲ್ಲಿ ಈ ಮಾತನ್ನು ಅವರೇ ಹೇಳಿಕೊಂಡಿದ್ದಾರೆ.

ಒಂದು ಶಿಲ್ಪದ ಮಾದರಿಯನ್ನು ಕಾರಂತರು ಮತ್ತೆ ಮತ್ತೆ ಪ್ರಯೋಗಿಸಿ ನೋಡುವುದುಂಟೆಂದು ಹೇಳಲಾಯಿತಷ್ಟೆ. ಅದನ್ನು ಕುರಿತು ಈಗ ವಿಚಾರಮಾಡಬಹುದಾಗಿದೆ. ಮರಳಿ ಮಣ್ಣಿಗೆಯ ಮೂಲಮಾದರಿ : ಈ ಕಾದಂಬರಿಯಲ್ಲಿ ಕಾರಂತರು ಮುಂದೆ ಪ್ರಯೋಗಿಸಿದ ಮೂರು ಬಗೆಯ ಶಿಲ್ಪದ ಮಾದರಿಗಳು ಒಟ್ಟಾಗಿವೆ. ರಾಮೈತಾಳರ ತಲೆಮಾರಿನ, ನಿಸರ್ಗದೊಡನೆ ಸಹಯೋಗದ ಬಾಳುವೆ ನಡೆಸುವ ಮಾದರಿ ಮೊದಲನೆಯದು. ನಿಸರ್ಗದ ಸಂಪರ್ಕವನ್ನು ಕಡಿದುಕೊಂಡು ಓಡಿಹೋಗಿ ಅತಂತ್ರದ ಬಾಳುವೆ ನಡೆಸುವ ಲಚ್ಚನ ಮಾದರಿ ಎರಡನೆಯದು. ಮೂರನೆಯದು ಹೊರಗುಳಿದ ಜೀವನ ಕ್ರಮದಿಂದ ಮರಳಿ ನಿಸರ್ಗಕ್ಕೆ ಹಿಂತಿರುಗುವ ರಾಮನ ಮಾದರಿ. ಈ ಮಾದರಿಗಳನ್ನು ಬೇರೆ ಬೇರೆಯಾಗಿ ಇಲ್ಲವೇ ಒಂದಕ್ಕೊಂದು ಮುಖಾಮುಖಿಯಾಗಿಸಿ ಮತ್ತೆ ಮತ್ತೆ ಕಾರಂತರು ಪರೀಕ್ಷಿಸಿದ್ದಾರೆ. ಹೀಗೆ ಪರೀಕ್ಷಿಸುವಾಗ ಆವರ್ತಗೊಳ್ಳುವ ಹಲವು ಸಂಗತಿಗಳನ್ನು ಬಳಸುತ್ತಾ ಹೋಗುವುದುಂಟು. ಕೆಲವು ನಿದರ್ಶನಗಳನ್ನು ನೋಡಬಹುದು. 'ಸನ್ಯಾಸಿಯ ಬದುಕು', 'ಸಮೀಕ್ಷೆ' ಹಾಗೂ 'ಕನ್ನಡಿಯಲ್ಲಿ ಕಂಡಾತ' ಎಂಬ ಮೂರು ಕಾದಂಬರಿಗಳನ್ನು ಗಮನಿಸೋಣ. ಮೂರೂ ಕಾದಂಬರಿಗಳ ಶಿಲ್ಪದಲ್ಲಿ ಒಂದು ಮುಖ್ಯ ಸಾಮ್ಯವಿದೆ. ಕಾದಂಬರಿಗಳು ನೆಲದೊಡನೆ, ದತ್ತ ಬದುಕಿನೊಡನೆ ಒಂದಾಗಿರುವ ಪಾತ್ರಗಳನ್ನು ಒಂದು ಕಡೆಯೂ, ಓಡಿ ಹೋಗಿ ತಮ್ಮದೇ ಆದ ಜೀವನಕ್ರಮವನ್ನು ರೂಪಿಸಿಕೊಳ್ಳಲು ಯತ್ನಿಸುವ ಪಾತ್ರಗಳನ್ನು ಇನ್ನೊಂದು ಕಡೆಯೂ ಇರಿಸಿಕೊಂಡಿವೆ. ಆದರೆ ಆ ಸಾಮ್ಯವನ್ನು ಕಾದಂಬರಿಗಳು ಮಂಡಿಸುವ ದೃಷ್ಟಿಕೋನ ಮಾತ್ರ ಬೇರೆ ಬೇರೆ. ಸನ್ಯಾಸಿಯ ಬದುಕು ಕಾದಂಬರಿಯಲ್ಲಿ ಓಡಿಹೋದವನ ಬಗೆಗೆ ಸ್ಪಷ್ಟವಾದ ಟೀಕೆ ಇದೆ. ಇದು ರುಕ್ಮಾಯಿಯ ನೆರವಿನಿಂದ ಜೀವನ ನಿರ್ವಹಿಸಿದ ಸುಮಿತ್ರೆಯ ಜೀವನದ ಬಗ್ಗೆ ತೋರುವ ಆದರದ ಮೂಲಕ ವ್ಯಕ್ತವಾಗುತ್ತದೆ. ಕೊನೆಗೆ ದೇವುಯಾನೆ ಶ್ಯಾಮಸುಂದರ ಓಡಿಹೋಗಿ ಸನ್ಯಾಸಿಯಾಗಿರುವ ತನ್ನ ತಂದೆಯ ಬಗ್ಗೆ ತಿರಸ್ಕಾರವನ್ನು ತೋರುವ ನೆಲೆಯಲ್ಲಿ ಗಟ್ಟಿಗೊಳ್ಳುತ್ತದೆ. 'ಸಮೀಕ್ಷೆ'ಯಲ್ಲಿ ಪ್ರವೃತ್ತಿ ಹಾಗೂ ನಿವೃತ್ತಿಯ ನೆಲೆಗಳೆರಡೂ ಪರೀಕ್ಷಿತವಾಗುವುದು ಶ್ರೀನಿವಾಸನ ವರ್ತನೆಯಲ್ಲಿ. ಅದಕ್ಕವನು ನಿದರ್ಶನಗಳನ್ನು ಇತರರಿಂದ ಪಡೆಯಬಹುದಾದರೂ ಅವನು ಚಿಂತಿಸುವ ಕ್ರಮದಲ್ಲಿ ಇವೆರಡೂ ಅವನ

ಸಾಧ್ಯತೆಗಳೇ ಆಗಿರುತ್ತವೆ. ಈ ಕಾದಂಬರಿಯೂ ಕೊನೆಗೆ ನೆಲದೊಡನೆ ಪಡೆಯುವ ಸಂಪರ್ಕದ ಜೀವಂತಿಕೆಯನ್ನು ಗುರುತಿಸುವತ್ತ ಮುಖಮಾಡಿದೆ. 'ಕನ್ನಡಿಯಲ್ಲಿ ಕಂಡಾತ' ಕಾದಂಬರಿ ಇನ್ನೊಂದು ದಿಕ್ಕಿನಲ್ಲಿ ಹೊರಟಿದೆ. ಇಲ್ಲಿ ಹೆಂಡತಿ ಮಕ್ಕಳನ್ನು ಬಿಟ್ಟು ಓಡಿಹೋದ ಪರಮೇಶ್ವರಯ್ಯನ ಜೀವನವನ್ನು ಒಂದು ಕಡೆ, ಅವನನ್ನು ಬಿಟ್ಟ ಕಾವೇರಿ ಮತ್ತು ಮಕ್ಕಳ ಜೀವನವನ್ನು ಮತ್ತೊಂದು ಕಡೆ ಇರಿಸಿ ಕೊಳ್ಳಲಾಗಿದೆ. ಆದರೆ ಓಡಿಹೋದ ಪರಮೇಶ್ವರಯ್ಯನ ಬಗ್ಗೆ ಟೀಕೆ ಇಲ್ಲ. ಹಾಗೆ ಓಡಿಹೋದ ಯಶವಂತರಾವ್ (ಅಳಿದ ಮೇಲೆ), ರಮಾಕಾಂತ ಬಾಪಟ (ಮೂಜನ್ಮ) ಇವರಂತೆ ಪರಮೇಶ್ವರಯ್ಯನೂ ಕೂಡ ಹೊಸ ಜೀವನ ಕ್ರಮವನ್ನು ರೂಪಿಸಿಕೊಳ್ಳು ತ್ತಾನೆ. ಆದರೆ ಇಲ್ಲಿ ಕಾದಂಬರಿ ತನ್ನ ಎರಡು ಭಾಗಗಳನ್ನು ಸಂಯೋಜಿಸುವಾಗ ಹಳೆಯ ಋಣವನ್ನು (ಚಿನ್ನದ ಒಡವೆಗಳನ್ನು) ಕಾವೇರಿಗೆ ಹಿಂತಿರುಗಿಸುವುದನ್ನು ಬಳಸಿಕೊಂಡಿದೆ (ಯಶವಂತರಾವ್ ಮತ್ತು ರಮಾಕಾಂತ ಬಾಪಟ ಇವರೂ ಕೂಡ ಹೀಗೇ ಮಾಡುವರು) ಆದರೆ ಅದಕ್ಕೂ ಮುಖ್ಯ ಸಂಗತಿ ಎಂದರೆ ಪರಮೇಶ್ವರಯ್ಯ ತನ್ನ ಹಿಂದಿನ ಜೀವನದ ನೆನಪನ್ನು ಕಳೆದುಕೊಳ್ಳುವ ಬಗೆ. ಇಲ್ಲಿ ಮತ್ತೆ ಕಾರಂತರು ಅವನನ್ನು ನಿಸರ್ಗದ ನಡುವೆ ಎಸೆಯುತ್ತಾರೆ (ಲಿಯರನ ನೆನಪು ನಮಗೆ ಬಂದರೆ ಆಶ್ಚರ್ಯವಿಲ್ಲ). ಮರುಹುಟ್ಟನ್ನು ಪಡೆದಂತೆ ಪರಮೇಶ್ವರಯ್ಯ ಇನ್ನೊಂದು ಜೀವನ ಕ್ರಮವನ್ನು ರೂಪಿಸಿಕೊಳ್ಳುತ್ತಾನೆ. ಓಡಿಹೋದವನು ಮರಳಿ ಜೀವೋನ್ಮುಖನಾಗು ವಲ್ಲಿ ನಿಸರ್ಗದ ನೆರವನ್ನು ಮತ್ತೆ ಕಾರಂತರು ಪಡೆಯುತ್ತಾರೆ.

ನಿಸರ್ಗಕ್ಕೆ ಹಿಂತಿರುಗುವ ಆಶಯದ ಆವರ್ತನೆಯನ್ನು ಬೇರೆ ಬೇರೆ ಶಿಲ್ಪಗಳಲ್ಲಿ ಕಾರಂತರು ಬಳಸುವ ವಿಧಾನ ಕೂಡ ಗಮನಾರ್ಹವಾದುದು. 'ಇನ್ನೊಂದೇ ದಾರಿ'ಯ ಜಯರಾಮು, 'ಕರುಳಿನ ಕರೆ'ಯ ಮಾಧು, 'ಚಿಗುರಿದ ಕನಸು'ವಿನ ಶಂಕರ, 'ಇದ್ದರೂ ಚಿಂತೆ'ಯ ಸೀತಾರಾಮು, 'ಗೆದ್ದ ದೊಡ್ಡಸ್ತಿಕೆ'ಯ ನಾಗೇಂದ್ರು ಇವರೆಲ್ಲ ಹೀಗೆ ಹಿಂತಿರುಗಿದವರೇ. ಆದರೆ ಬೇರೆ ಬೇರೆ ಸಂದರ್ಭ ಹಾಗೂ ಕಾರಣಗಳಿಂದ. ಅಂದರೆ ಜೀವನದ ಯಾವ ಯಾವ ಲಯ ವಿನ್ಯಾಸಗಳು ಹೀಗೆ ವ್ಯಕ್ತಿಯನ್ನು ಅವನ ಮೂಲ ಸೆಲೆಗೆ ಮತ್ತೆ ಹೊರಳಲು ಪ್ರೇರೇಪಣೆ ನೀಡುವುದೆಂಬುದನ್ನು ಕಾರಂತರು ಶೋಧಿಸು ತ್ತಿರುವಂತಿದೆ. ಛಿದ್ರಗೊಂಡಿದ್ದ ಕುಟುಂಬಗಳು ಈ ಹುಡುಗರ ಹಿಂತಿರುಗುವಿಕೆ ಯಿಂದಾಗಿ ಮರಳಿ ತಮ್ಮ ಚಹರೆಯನ್ನು ಪಡೆದುಕೊಳ್ಳುತ್ತವೆ ಎಂಬುದು ಗಮನಾರ್ಹ. ಅಂದರೆ ಕಾರಂತರು ಹೀಗೆ ಹಿಂತಿರುಗುವುದನ್ನು ಕಾದಂಬರಿಗೊಂದು ಕೊನೆಯನ್ನು ತರಲೆಂದು ಮಾತ್ರ ಬಳಸುವುದಿಲ್ಲ. ಬದಲಿಗೆ ಶಿಲ್ಪದ ಈ ವಿವರ, ಅವರ ಜೀವನ ವ್ಯಾಖ್ಯಾನದೊಡನೆ ಪಡೆದಿರುವ ನಂಟು ಸ್ಪಷ್ಟವಾಗುತ್ತದೆ.

'ಮರಳಿಮಣ್ಣಿಗೆ'ಯ ಮೂರನೆಯ ಮಾದರಿಯ ನಾಯಕರುಗಳೆಲ್ಲ ಕನಸು ಗಾರರು. ರಾಮ, ವ್ಯಾಸ, ಕೃಷ್ಣ (ಸ್ಪಷ್ಟದ ಹೊಳೆ), ಜಯರಾಮು, ಸೀತಾರಾಮು, ಇವರು ಇದಕ್ಕೆ ನಿದರ್ಶನ. ಎರಡನೆಯ ತಲೆಮಾದರಿಯ (ಲಚ್ಚ) ನಾಯಕರುಗಳು

ಇಲ್ಲವೇ ಹೊಸ ಬದುಕನ್ನು ಹುಡುಕುತ್ತ ಹೊರಟವರು ಅಥವಾ ಹೊಣೆಯಿಂದ ಜಾರಿಕೊಳ್ಳಲು ಯತ್ನಿಸಿದವರು. ಕಾರಣವೇನೇ ಇರಲಿ ಹೀಗೆ ಹೊರಹೋದವರ ದೃಷ್ಟಿಯಿಂದ ಕಾದಂಬರಿಯ ಶಿಲ್ಪವನ್ನು ಕಟ್ಟುವ ಯತ್ನವನ್ನು ಕಾರಂತರು ಮಾಡಿದ್ದಾರೆ. 'ಅಳಿದ ಮೇಲೆ' ಹಾಗೂ 'ಮೂಜನ್ಮ' ಅಂಥ ಕಾದಂಬರಿಗಳು. ವರ್ತಮಾನದಲ್ಲಿ ಅಥವಾ ಕಾದಂಬರಿಯ ಪ್ರಾರಂಭದಲ್ಲಿ ಒಂಟಿಯಾಗಿ ಸತ್ತ (ರಮಾಕಾಂತ ಬಾಪಟಯಾನೆ, ಚಂದ್ರಕಾಂತ ಗುಪ್ತ ಕೊಲೆಯಾಗಿರುತ್ತಾನೆ) ವ್ಯಕ್ತಿಗಳ ಮೂಲವನ್ನು ಶೋಧಿಸುತ್ತಾ ಹೊರಟಾಗ ಕೊನೆಗೆ ವಿಷಮ ದಾಂಪತ್ಯದ ತುದಿಗಳನ್ನು ತಲುಪಲಾಗಿದೆ. ಇಂಥ ಮುರಿದ ದಾಂಪತ್ಯದ ಗಂಡು ತುದಿಗಳನ್ನು ಹಿಡಿದು ಹೊರಡುವ ಕಾದಂಬರಿಗಳು ಒತ್ತಟ್ಟಿಗಿದ್ದರೆ ಹೆಣ್ಣು ತುದಿಗಳನ್ನು ಹಿಡಿದು ಚಿಂತನ ಕ್ರಮವನ್ನು ಬೆಳೆಸುವ ಕಾದಂಬರಿಗಳು ಇನ್ನೊಂದು ಕಡೆಗಿವೆ. ಇಂಥ ಹೆಂಗಸರ ಪಟ್ಟಿ ದೊಡ್ಡದು. ಒಂಟಿಯಾದ ಈ ಹೆಂಗಸರು ತಮ್ಮ ಒಂಟಿತನವನ್ನೇ ನೋಂಪಿಯನ್ನಾಗಿ ಸ್ವೀಕರಿಸುವ ಬಗೆಯನ್ನು ಕೆಲವು ಕಾದಂಬರಿಗಳಲ್ಲಿ ಕಂಡರೆ ಮುಂದಿನ ಕೆಲವು ಕೃತಿಗಳಲ್ಲಿ ಗಂಡಸಿನ ಇಂಥ ನಂಬಿಕೆ ದ್ರೋಹಗಳು (ಜೀವನದ ಲಯವನ್ನು ಮುರಿದದ್ದು) ಹೆಂಗಸಿನ ಮನೋಲೋಕವನ್ನು ತಲ್ಲಣದತ್ತ ತಳ್ಳುವುದನ್ನು ಕಾಣುತ್ತೇವೆ. ನಾಗವೇಣಿಯ ಪಿಟೀಲು ವಾದನದಲ್ಲಿ ಇದರ ಸೂಚನೆಗಳು ಸಿಕ್ಕರೂ ಅದು ಬೆಳೆದು ನಿಲ್ಲುವುದು 'ನಂಬಿದವರ ನಾಕ ನರಕ'ದ ವಾಗ್ದೇವಿ, ಸತ್ಯಭಾಮೆಯರಲ್ಲಿ ಹಾಗೂ 'ಧರ್ಮರಾಯನ ಸಂಸಾರ'ದ ಮಹಾಲಕ್ಷ್ಮಿಯಲ್ಲಿ ಸತ್ಯಭಾಮೆಯ ದಿಟ್ಟತನ ತೆರೆಯ ಮರೆಯಲ್ಲಿ ನಡೆದಂತೆ ಕಂಡರೆ ಧರ್ಮರಾಯನ ಸಂಸಾರದ ಸರಸ್ವತಿ ನಾಗಪ್ಪಯ್ಯನನ್ನು ಒಲಿಯುವಲ್ಲಿ ನಿರ್ಧಾರಕ ನೆಲೆಯನ್ನು ತಲುಪುವುದು.

ಒಂಟಿಯಾದ ಹಾಗೂ ಒಂಟಿತನಕ್ಕೆ ಸಿಲುಕಿದ (ಗಂಡನ ಜತೆ ಇದ್ದರೂ) ಹೆಣ್ಣುಗಳ ಮೈಮನಗಳ ಒಡಕು ಕಾರಂತರನ್ನು ಕೆಣಕಿ ಆವರ್ತಗೊಳ್ಳುತ್ತ ಬಂದಿರುವ ಇನ್ನೊಂದು ಸಂಗತಿ. ಇದನ್ನೂ ಕೂಡ ಬೇರೆ ಬೇರೆ ಕಾದಂಬರಿಗಳಲ್ಲಿ ಪರೀಕ್ಷಿಸುತ್ತಾ ಬಂದಿದ್ದಾರೆ. ಮಾದರಿ ಮಾತ್ರ ತೀರಾ ಈಚಿನ 'ಮೈಮನಗಳ ಸುಳಿಯಲ್ಲಿ' ಕೃತಿಯಲ್ಲಿದೆ. ಮಂಜುಳೆ ತನ್ನ ಸಮಸ್ಯೆಯನ್ನು ತಾತ್ವಿಕ ನೆಲೆಯಲ್ಲಿ ವಿವರಿಸಿಕೊಳ್ಳಬಲ್ಲಳು. ಆದರೆ ಅದು ಸಾಧ್ಯವಾಗದ (ಹಾಗೆ ನೋಡಿದರೆ ಕಾರಂತರ ಎಷ್ಟು ಪಾತ್ರಗಳಿಗೆ ಮಂಜುಳೆಗಿರುವ ಆತ್ಮ ಪರಿವೀಕ್ಷಣೆಯ ಅವಕಾಶವಿದೆ?) ಹೆಂಗಸರಲ್ಲಿ ಅದು ತಳೆಯುವ ರೂಪ ವಿವಿಧ ನೆಲೆಗಳಲ್ಲಿ ಕಾಣಲು ಯತ್ನಿಸಲಾಗಿದೆ. 'ಕೇವಲ ಮನುಷ್ಯರು' ಕಾದಂಬರಿಯ ಶಾಂತ 'ಇದ್ದರೂ ಚಿಂತೆ'ಯ ಸಾವಿತ್ರಿ, ಒಂದು ಕಡೆ ಇದ್ದರೆ, 'ಜಾರುವ ದಾರಿಯಲ್ಲಿ'ಯ ಗುಲಾಬಿ, 'ಮೈ ಮನಗಳ ಸುಳಿಯಲ್ಲಿ'ನ ಶಾರಿ ಇನ್ನೊಂದು ಕಡೆ ಇದ್ದಾರೆ. 'ಒಡ ಹುಟ್ಟಿದವರು' ಕೃತಿಯ ಸೇವಂತಿಯೂ ಇಂಥವಳೆ.

ನಾನು ಇದುವರೆಗೂ ಕಾರಂತರ ಕಾದಂಬರಿಗಳ ಮುಖ್ಯ ಮಾದರಿ ಶಿಲ್ಪಗಳಲ್ಲಿ ಹೇಗೆ ಆವರ್ತ ವಿಷಯಗಳ ಬೇರೆ ಬೇರೆ ಸ್ವರೂಪಗಳು ಶೋಧಿತವಾಗುತ್ತವೆ ಎಂಬುದನ್ನು ಚಿಂತಿಸಲು ಯತ್ನಿಸಿದೆ. ಇದರಿಂದ ಖಚಿತವಾಗುವ ಸಂಗತಿ ಎಂದರೆ ಕಾರಂತರ ಒಂದು ಕೃತಿಯ ಮೂಲಕವೇ ಆ ಮಾದರಿ ಶಿಲ್ಪದ ಆಕಾರವನ್ನು ಗ್ರಹಿಸುವುದು ಸಾಧ್ಯವಿಲ್ಲವೆಂಬ ನಮ್ಮ ಆಧಾರ ಕಲ್ಪನೆಯು ಸಾಬೀತಾಗುವುದು.

ಇನ್ನು ಸಮಕಾಲೀನ ಮತ್ತು ಬೌದ್ಧಿಕ ಗ್ರಹಿಕೆಯ ವಸ್ತುಗಳನ್ನು ಕುರಿತ ಕಾದಂಬರಿಗಳ ಶಿಲ್ಪವನ್ನು ಕುರಿತಂತೆ ನಮ್ಮ ಆಲೋಚನೆಯನ್ನು ಬೆಳೆಸಬಹುದು. ಹಾಗೆ ನೋಡಿದರೆ ಲಭ್ಯವಿರುವ ಮೊದಲ ಕಾದಂಬರಿಯೇ ಇಂಥ ವಸ್ತುವನ್ನು ಹೊಂದಿರುವಂಥದು (ದೇವದೂತರು). ವಿಡಂಬನೆಯ ನೆಲೆಯಲ್ಲಿ ಕಾರಂತರು ಈ ಬಗೆಯ ವಸ್ತುಗಳನ್ನು ನಿರ್ವಹಿಸುವುದನ್ನು ಮತ್ತೆ ಹೆಚ್ಚಾಗಿ ಬಳಸಲಿಲ್ಲ. ಸಮಕಾಲಿನ ಬದುಕಿನಲ್ಲಿ ಇರುವ ಬಿರುಕುಗಳು ಹಾಗೂ ಕೇಂದ್ರೀಕರಣ ಶಕ್ತಿಯ ಗೈರುಹಾಜರನ್ನು ಅವರು ಶಿಲ್ಪದ ರೂಪಣ ಕ್ರಿಯೆಯಲ್ಲೇ ತೋರಿಸಿರುವುದುಂಟು. 'ಇನ್ನೊಂದೇ ದಾರಿ' ಯಲ್ಲಿ ಕೇಂದ್ರೀಕರಣ ಶಕ್ತಿಯ ಮಾದರಿಯಾಗಿದ್ದ ಹೊನ್ನಜ್ಜಿ ಸತ್ತಮೇಲೆ ಸಂದೇಹ ವಾದಿಯಾದ ಆಧುನಿಕರು, ಶ್ರೀರಾಮ ಮತ್ತು ಜಯರಾಮರು ಕಾದಂಬರಿಯ ವೈಚಾರಿಕ ಕೇಂದ್ರವಾಗುತ್ತಾರೆ. ಕಾದಂಬರಿ ನೆಲೆಗಾಣದಂತೆ ಮುಂದುವರಿಯುತ್ತದೆ. ಇಲ್ಲಿ ಬಿರುಕು ವಾಚ್ಯವಾದಂತೆ ಕಾಣುತ್ತದೆ. 'ಜಾರುವ ದಾರಿಯಲ್ಲಿ' ಕಾದಂಬರಿಯ ಶಿವಪ್ಪನನ್ನು ನೋಡೋಣ. ಇವನು ಕೆಲವು ಬಗೆಗಳಲ್ಲಿ ಶಂಕರ (ಚಿಗುರಿದ ಕನಸು) ನನ್ನು ಹೋಲುತ್ತಾನೆ. ಆದರೆ ಜೀವನದಲ್ಲಿ ಶಂಕರನ ಯಶಸ್ಸು ಶಿವಪ್ಪನಿಗೆ ದೊರಕುವುದಿಲ್ಲ. ಶಂಕರ ನಿಸರ್ಗದೊಡನೆ ಬೆರೆಯುವ ನಿರ್ಧಾರ ಮಾಡಿದರೆ ಶಿವಪ್ಪ ಸಾಮಾಜಿಕ ವ್ಯಕ್ತಿತ್ವವನ್ನು ಬೆಳೆಸಿಕೊಳ್ಳುವ ಯತ್ನ ಮಾಡುತ್ತಾನೆ. ಅವನ ಆದರ್ಶ ಎಷ್ಟೇ ಉನ್ನತವಾದುದಾದರೂ ಕಾರಂತರ ಮಟ್ಟಿಗೆ ಅದೊಂದು ಮೌಲ್ಯವಿಘಟನೆಯೇ ಸರಿ. ಹೀಗಾಗಿ ಶಿವಪ್ಪ ಇಂದುಮತಿಯನ್ನು ಕಳೆದುಕೊಳ್ಳಬೇಕಾಗುತ್ತದೆ. ಆದರೆ ಶಂಕರನ ಬಳಿಗೆ ವರಲಕ್ಷ್ಮಿ ಬಂದು ನೆಲಸುತ್ತಾಳೆ. ಹೀಗೆ ಸಾರ್ವಜನಿಕ ವ್ಯಕ್ತಿತ್ವವನ್ನು ಬೆಳೆಸಿಕೊಳ್ಳುವವರು ತೆರಬೇಕಾದ ಬೆಲೆಯೆಂದರೆ ಕುಟುಂಬ ಜೀವನಕ್ಕೆ ಎರವಾಗುವುದು. 'ಗೊಂಡಾರಣ್ಯ'ದ ಕಾಂಚನ ಮಾಲೆ, 'ಒಂಟಿದನಿಯ' ಜಗನ್ನಾಥರಾವ್, ಹಾಗೂ ಚಂದೂಲಾಲ್ ಶಹಾ ಇದಕ್ಕೆ ನಿದರ್ಶನರಾಗುತ್ತಾರೆ.

ಈ ರೀತಿ ಸಮಕಾಲೀನ ಜೀವನದ ವಿವಿಧ ಮುಖಗಳನ್ನು, ವಿವಿಧ ಚಿಂತನಾ ವಿಧಾನಗಳನ್ನು ಚಿತ್ರಿಸುವ ಕೃತಿಗಳಲ್ಲಿ ಕುಟುಂಬ ಜೀವನವು ಛಿದ್ರಗೊಂಡಿರುವುದನ್ನು ಸ್ಪಷ್ಟವಾಗಿಯೇ ಕಾದಂಬರಿಗಳಲ್ಲಿ ಸೂಚಿಸಲಾಗಿದೆ. ಹೀಗಾದರೂ ಕಾರಂತರು ಸಮಕಾಲೀನ ಬದುಕನ್ನು ವೈಚಾರಿಕವಾಗಿ ಗ್ರಹಿಸುವ ಬಗೆಯಲ್ಲಿ ವಿವರಗಳಲ್ಲಿ ಅನುಭವಗಮ್ಯವಾಗುವ ಸಂಗತಿಗಳಲ್ಲಿ ಹಿಡಿಯಲಾರರು ಎನ್ನುವ ಅನುಮಾನವು ಉಳಿದೇ ಬಿಡುವುದು. ಈ ಕಾರಣವಾಗಿಯೇ ಅವರ ಅಂಥ ಕಾದಂಬರಿಗಳು ನೇರವಾದ ಚರ್ಚೆಗಳಲ್ಲಿ, ನಿರೂಪಕರ ವಿಚಾರ ಮಂಡನೆಗಳಲ್ಲಿ ಹೆಚ್ಚಾಗಿ ನಿರತವಾಗಿರುತ್ತವೆ. ಕತೆಯ ಅಂಶವನ್ನು ತಾನು

ಕಡಿಮೆ ಮಾಡಿದ್ದೇನೆ ಅಥವಾ ಕೈ ಬಿಟ್ಟಿದ್ದೇನೆ ಎಂಬ ಅಂಶ ಕೂಡ ಕಾದಂಬರಿಕಾರರಿಗೆ ಗೊತ್ತಾಗಿರುವ ಸಂಗತಿಯಾಗಿದೆ. ಇದಕ್ಕೆ, ಅಂದರೆ ವಿವರಗಳಲ್ಲಿ ಜೀವನವನ್ನು ಕಟ್ಟಿಕೊಡುವ ಹಿಂದಿನ ಕಾದಂಬರಿಗಳ ಮಾದರಿಯನ್ನು ಬಿಟ್ಟುಕೊಟ್ಟಿದ್ದಕ್ಕೆ ಕಾರಣವೆಂದರೆ, ಈಗಾಗಲೇ ಸೂಚಿಸಿದಂತೆ ಕಾರಂತರು ಇಂಥ ಕಡೆಗಳಲ್ಲಿ ಚರಿತ್ರಕಾರರ ಧಾಟಿ ಹಾಗೂ ಹೊಣೆಯನ್ನು ಹೊರಲು ಯತ್ನಿಸುವುದು.

ಶಿಲ್ಪದ ಸಮಸ್ಯೆಯನ್ನು ಇನ್ನೊಂದು ಕಡೆಯಿಂದ ನೋಡಲು ಈಗ ಯತ್ನಿಸುತ್ತೇನೆ. ಮೊದಲೇ ಹೇಳಿದಂತೆ ಕಾರಂತರು ವಾಸ್ತವವಾದಿ ನಿಟ್ಟಿನಲ್ಲಿ ವಸ್ತುವಿನ ಕಾಲ ಮತ್ತು ನಿರೂಪಣೆಯ ಕಾಲಗಳನ್ನು ಹೊಂದಿಸುತ್ತಾರೆ. ಆದರೆ ಹೀಗೆ ಮಾಡುವುದರಿಂದ ಜೀವನದ ಅನಂತ ಸಾಧ್ಯತೆಗಳ, ವಿನ್ಯಾಸಗಳ ಶೋಧನೆ ಹಾಗೂ ಮಂಡನೆಗೆ ಒಂದು ಮಿತಿಯನ್ನು ಹಾಕಿಕೊಂಡಂತೆ ಆಗುವುದು. ಇದರಿಂದಾಗಿ ಕಾದಂಬರಿಗಳಲ್ಲಿ ಹೊಸ ವಿನ್ಯಾಸವೊಂದನ್ನು ಕಾರಂತರು ಆಗಾಗ ರೂಪಿಸಲು ಯತ್ನಿಸಿದ್ದಾರೆ. ಆ ಮೂಲಕ ವರ್ತಮಾನದ ವಿವರಗಳಿಂದ ವರ್ತಮಾನದ್ದಲ್ಲದ ಜೀವನದ ಸೆಳಕುಗಳನ್ನು ಹಾಗೂ ವರ್ತಮಾನದ್ದಲ್ಲದ ವಿವರಗಳಿಂದ ವರ್ತಮಾನದ ಸ್ವರೂಪವನ್ನು ಗ್ರಹಿಸಲು ಯತ್ನಿಸಿದ್ದಾರೆ. ಯಶವಂತರಾಯ ಮತ್ತು ಚಂದ್ರಕಾಂತಗುಪ್ತರ ವರ್ತಮಾನದ ರೂಪಗಳಿಗೆ ಕಾರಣಗಳನ್ನು, ಪ್ರಚೋದನೆಗಳನ್ನು ಅವರ ಭೂತಕಾಲದಲ್ಲಿ ಹುಡುಕುವ ಯತ್ನ ಒತ್ತಟ್ಟಿಗೆ ನಡೆದಿದೆ. ಇದನ್ನು ಮುಂದುವರಿಸಿ ಒಟ್ಟಾರೆ ಜೀವನ ಕ್ರಮದ ಆಶಯಗಳು ಭೂತಕಾಲದ ನಿರ್ದೇಶನಗಳನ್ನು ಪಡೆದಿದೆ ಎಂಬುದನ್ನು ಕಾರಂತರು 'ಮೂಕಜ್ಜಿಯ ಕನಸುಗಳು' ಕಾದಂಬರಿಯಲ್ಲಿ ಮಂಡಿಸಲು ಯತ್ನಿಸಿದ್ದಾರೆ. ಆ ಕಾದಂಬರಿಯಲ್ಲಿ ವರ್ತಮಾನವನ್ನು ಶತಮಾನಗಳ ಭೂತಕಾಲದೊಡನೆ ಕೊಂಡಿ ಹಾಕಿ ನೋಡಲಾಗಿದೆ. ಇನ್ನೂ ಒಂದು ಮುಖ್ಯ ಅಂಶ ಅಲ್ಲಿದೆ. ಸಾಮಾನ್ಯವಾಗಿ ನಿಸರ್ಗ ಜೀವನದ ಆಶಯಗಳಿಗೆ ರೂಪಗಳನ್ನು ಹೊತ್ತು ಬರುತ್ತಿದ್ದುದು ಈ ಕಾದಂಬರಿಯಲ್ಲಿ ತಾನೇ ಆ ಆಶಯಗಳನ್ನು ಅಡಗಿಸಿಟ್ಟುಕೊಂಡಂತೆ ಚಿತ್ರಿತವಾಗಿದೆ. ನಾಗವೇಣಿ, ರಾಮ (ಮರಳಿ ಮಣ್ಣಿಗೆ) ಪದ್ಮಾವತಿ, ನಾಗಪ್ಪಯ್ಯ (ಧರ್ಮರಾಯನ ಸಂಸಾರ) ಸತ್ಯಭಾಮೆ, ಅವಳ ಮಗು (ನಂಬಿದವರ ನಾಕ ನರಕ) - ಇವರ ಸಂದರ್ಭದಲ್ಲಿ ಚಿತ್ರಿತವಾದ ನಿಸರ್ಗ ಈಗ -ತಾನೇ ಮಹಾಮಾತೆಯಾಗಿ ನಿಲ್ಲುತ್ತದೆ. ಅದರ ವ್ಯಾಖ್ಯಾಕಾರಳಾಗಿ ಬರುವವಳು ಕಾಣ್ಕೆಯುಳ್ಳ ಮೂಕಜ್ಜಿ. ಇಲ್ಲಿ ಭೂತ ಹಾಗೂ ವರ್ತಮಾನಗಳನ್ನು ಸಂಯೋಜಿಸುವ ಕ್ರಮ ಒದಗಿಸಿಕೊಟ್ಟಿರುವ ಶಿಲ್ಪ ಕಾರಂತರ ಕಾದಂಬರಿಗಳಲ್ಲಿ ಹೊಸದೇ ಸರಿ. ಆದರೂ ಅದು ಮೊದಲಿನ ಶಿಲ್ಪಗಳ ಒಂದು ಹೊಸ ಸಾಧ್ಯತೆ ಎಂದು ಬಗೆಯುವುದೇ ಉಚಿತವಾದುದು. ಭೂತವು ವರ್ತಮಾನದ ಆಶಯಗಳನ್ನು ಅಡಗಿಸಿಟ್ಟುಕೊಂಡಿರುವ ಬಗೆಯನ್ನು ಈ ಮೊದಲು 'ಶನೀಶ್ವರನ ನೆರಳಿನಲ್ಲಿ' ಕಾದಂಬರಿಯಲ್ಲಿ ಪರೀಕ್ಷಿಸಿದ್ದರು. 'ಬೆಟ್ಟದ ಜೀವ' ಕಾದಂಬರಿಯ ರಚನೆಯನ್ನು ಹೋಲುವ ಈ ಕೃತಿಯಲ್ಲಿ ಒಡೆದು ಹೋದ ಕುಟುಂಬವಿದೆ. ಕೇಂದ್ರೀಕರಣ ಶಕ್ತಿಯಾದ ತಾಯಿ ಕೂಡ ಕೇವಲ ನಂಬಿಕೆಯೊಂದನ್ನು ಆಧರಿಸಿ ನಿಂತಿದ್ದಾಳೆ. ಆಧುನಿಕ

ಜಗತ್ತಿನ ಮೌಲ್ಯಗಳು (ಕಾನೂನಾಗಿ) ಪ್ರವೇಶಿಸಿದಾಗ ಕುಟುಂಬವನ್ನು ಕಟ್ಟಲಾರದೆ ಹೋಗುವ ಈ ತಾಯಿಯ ಶ್ರದ್ಧೆಯ ಬಿಂದು ಶನೀಶ್ವರ. ಆದರೆ ಈ ಕೇಂದ್ರ ನಿರರ್ಥಕವಾಗಿ ಒಡಕು ಮುಂದುವರಿಯುತ್ತದೆ. ಕದನ ಕೋರ್ಟಿಗೆ ಹೋಗುತ್ತದೆ. ಹಳ್ಳಿ ತನ್ನ ಏಕಾಂತತೆಯನ್ನು ಕಳೆದುಕೊಳ್ಳುತ್ತದೆ. ಸೀತಾನದಿ ಹಾಗೂ ಜಲಪಾತದ ಆಕರ್ಷಣೆಯಿಂದ ಒಳಗೆ ಬರುತ್ತಿದ್ದವರು; ನೋಟಕರು, ಸೌಂದರ್ಯದ ಆರಾಧಕರು, ಅದೇ ಜಲಪಾತದ ಸನಿಹದಲ್ಲೇ ಕುಳಿತು ಸಂಚುಗಳು ನಡೆಯುತ್ತವೆ. ಹೀಗೆ ಪರಿಸರ ವರ್ತಮಾನದ ಬೆಳವಣಿಗೆಗಳನ್ನು ಅಡಗಿಸಿಟ್ಟುಕೊಂಡಂತೆ ಭಾಸವಾಗುತ್ತದೆ.

ಆದರೆ ಇದೇ ಮಾದರಿಯನ್ನು ಸಮಕಾಲೀನ ಜೀವನದ ಕೇಂದ್ರರಾಹಿತ್ಯ ಸ್ಥಿತಿಗೂ ಅನುಸರಿಸಲು ಕಾರಂತರು 'ಅದೇ ಊರು, ಅದೇಮರ' ಕಾದಂಬರಿಯಲ್ಲಿ ಹಾಗೂ ತೀರಾ ಈಚಿನ 'ಕಣ್ಣಿದ್ದೂ ಕಾಣರು' ಕೃತಿಯಲ್ಲಿ ಯತ್ನಿಸಿದ್ದಾರೆ. ಆದರೆ ಅದು ಕೇವಲ ಚಿಂತನೆಯಾಗಿ, ಚರ್ಚೆಯಾಗಿ ನಿಂತಂತೆ ತೋರುತ್ತದೆ.

ಕಾರಂತರ ಕಾದಂಬರಿಗಳ ಶಿಲ್ಪವನ್ನು ಕುರಿತ ಚಿಂತನೆಗೆ ಬೇಕಾದ ನೆಲೆಗಳನ್ನು ಹಾಗೂ ಅವುಗಳ ಅನ್ವಯವನ್ನು ಮಾಡಿಯಾದ ಮೇಲೆ ಇನ್ನೊಂದು ಸಂಗತಿಯತ್ತ ತಮ್ಮ ಗಮನವನ್ನು ಸೆಳೆಯಬಯಸುತ್ತೇನೆ. ಈ ಕಾದಂಬರಿಗಳ ಶಿಲ್ಪ, ಪ್ರಬಂಧದ ಮೊದಲಲ್ಲಿ ಪರಿಭಾಷೆಯ ಚರ್ಚೆಯ ಸಂದರ್ಭದಲ್ಲಿ ಸೂಚಿಸಲಾದ ವಾಸ್ತು ಇಲ್ಲವೇ ಚಿತ್ರಗಳ ಶಿಲ್ಪವನ್ನು ಹೋಲುವುದಿಲ್ಲ. ಬದಲಿಗೆ ಇಲ್ಲಿನ ಶಿಲ್ಪದ ರೂಪ ಸಂಗೀತದಲ್ಲಿ ಕಂಡು ಬರುವಂಥದು. ಈ ಮಾತನ್ನು ವಿವರಿಸಬಯಸುತ್ತೇನೆ. ಈಗಾಗಲೇ ಹೇಳಿದಂತೆ ಕಾರಂತರು ಒಂದು ಶಿಲ್ಪದ ಮಾದರಿಯನ್ನು ಒಂದಲ್ಲ ಹಲವು ಕೃತಿಗಳಲ್ಲಿ ಮತ್ತೆ ಮತ್ತೆ ಪ್ರಯೋಗಿಸುತ್ತಿರುತ್ತಾರೆ. ತನ್ನಲ್ಲೇ ಪೂರ್ಣವಾದ ಶಿಲ್ಪವನ್ನು ಹೊಂದಿರುವ ಅವರ ಪ್ರತಿಯೊಂದು ಕೃತಿಯ ಆಚೀಚೆ ಅದೇ ಶಿಲ್ಪದ ಪ್ರಾಯೋಗಿಕ ರೂಪವನ್ನು ಹೊತ್ತ ಕೆಲವು ಕೃತಿಗಳಿರುತ್ತವೆ. ಅವುಗಳಲ್ಲಿ ಆವರ್ತನಗೊಳ್ಳುವ ಕೆಲವು ಅಂಶಗಳ ಮೂಲಕ ಹೊಸ ಮತ್ತು ಯುಕ್ತ ವಿನ್ಯಾಸಗಳನ್ನು ಕಾಣಲು ಕಾದಂಬರಿಕಾರರು ಯತ್ನಿಸುತ್ತಾರೆ. ಕೆಲವುಕಡೆ ಇನ್ನೂ ಬೆಳೆಯಬಹುದಾಗಿದ್ದ ಸಂಗತಿಗಳನ್ನು ಹಾಗೇ ಬಿಟ್ಟಂತೆ, ಬೇಡವೆನಿಸಬಹುದಾದ ಸಂಗತಿಗಳನ್ನು ಬೆಳೆಸಿದಂತೆ ತೋರುತ್ತದೆ. ಎಷ್ಟೋ ಹೊರಚಾಚುಗಳು ಅನ್ವೇಷಿತವಾಗದೆ, ತಕ್ಕ ಮಂಡನೆಯನ್ನು ಪಡೆಯದೇ ಹೋಗುವ ಸಂದರ್ಭಗಳಿವೆ. ಅಂಥ ಕೃತಿಗಳು ಮೇಲು ನೋಟಕ್ಕೆ ಹಾಗೂ ಪ್ರಚಲಿತ ಚಿಂತನೆಗೆ ಶಿಲ್ಪವಿಲ್ಲದ ರಚನೆಗಳೆಂದು ತೋರುವುದು ಸಹಜ. ಆದರೆ ಅವು ಇನ್ನಾವುದೋ ಕೆಲವು ಕೃತಿಗಳೊಡನೆ ಹೊಂದಿರುವ ಆಂತರಿಕ ಸಂಬಂಧದಲ್ಲಿ ಮಾತ್ರ ತಮ್ಮ ಶಿಲ್ಪದ ಸಾಧ್ಯತೆಗಳನ್ನು ಕಾಣಿಸುತ್ತವೆ. ಇಲ್ಲಿಯೇ ನಮಗೆ ಸಂಗೀತದ ಹೋಲಿಕೆ ಉಪಯುಕ್ತವಾಗುವುದು. ರಾಗವೊಂದರ ಮೂಲ ಮಾದರಿಯನ್ನು ಮತ್ತೆಮತ್ತೆ ಹಾಡುಗಾರ, ವಾದನಕಾರ ಪ್ರಯೋಗಿಸಿ ಆವಿಷ್ಕರಿಸಲು ಯತ್ನಿಸುತ್ತಿರುತ್ತಾನೆ. ಅವನ ಒಂದೊಂದು ಯತ್ನವೂ, ಪ್ರಯೋಗವೂ ಆ ರಾಗದ ಒಂದೊಂದು ಸಾಧ್ಯತೆಯನ್ನು ತೋರಿಸು

ತ್ತಿರಬಹುದು. ಕೆಲವು ಪ್ರಯೋಗಗಳು ರಾಗದ ಮೂಲ ಮಾದರಿಯನ್ನು ಅಪರಿಪೂರ್ಣವಾಗಿ ಬೆಳೆಸಿ ನಿಲ್ಲಿಸಿದಂತೆ ತೋರಲೂ ಬಹುದು. ಆದರೆ ಈ ಎಲ್ಲ ಪ್ರಯೋಗಗಳೂ ಒಂದಕ್ಕೊಂದು ಪೂರಕವಾಗಿ ಒಟ್ಟಾರೆಯಾಗಿ ರಾಗದ ರೂಪವನ್ನು ನಮಗೆ ತೋರಿಸಿ ಕೊಡಬಲ್ಲವು. ಇಲ್ಲಿಯೂ ಕಾರಂತರು ತಮ್ಮ ಕಾದಂಬರಿಗಳ ಮೂಲಕ ಪರಿಪೂರ್ಣವಾದ, ಸ್ವಯಂಪೂರ್ಣವಾದ ಆಕಾರಗಳನ್ನು ಮಂಡಿಸುತ್ತಿರುವುದಿಲ್ಲ. ಅದಕ್ಕಾಗಿ ಯತ್ನಿಸುತ್ತಿರುತ್ತಾರೆ. ಹಾಗೂ ಈ ಯತ್ನ ಕೂಡ ಧ್ಯಾನಿತವಲ್ಲ. ಕಾದಂಬರಿಯಂಥ ಸಾಹಿತ್ಯ ಪ್ರಕಾರವನ್ನು ಒಂದು ಸಾಧನವನ್ನಾಗಿ ಬಳಸುವ ಈ ಲೇಖಕರು ಕೃತಿಯ ಶಿಲ್ಪವನ್ನು ಜೀವನದಿಂದ ಬೇರೆ ಮಾಡಿ ನೋಡುವು ದಿಲ್ಲವೆಂದು ಹೇಳಿಯಾಗಿದೆ. ಆದ್ದರಿಂದ ಶಿಲ್ಪದ ಆದರ್ಶ ರೂಪವನ್ನು ಹುಡುಕು ತ್ತಿದ್ದಾರೆ ಎಂದು ಹೇಳಿದಾಗ ಪರ್ಯಾಯವಾಗಿ ಜೀವನದ ಕೇಂದ್ರ ಬಿಂದು ಹಾಗೂ ಅದರ ಆಕಾರವನ್ನು ಕಟ್ಟಿಕೊಡುವ ಶಕ್ತಿ ಯಾವುದೆಂಬುದನ್ನು ಹುಡುಕುತ್ತಿದ್ದಾರೆ ಎಂದು ಹೇಳಿದಂತೆ ಆಯಿತು.

ಕಾರಂತರ ಕಾದಂಬರಿಗಳ ಶಿಲ್ಪದ ಪ್ರಶ್ನೆಯೊಡನೆ ಸಂಬಂಧಪಟ್ಟ ಇನ್ನೆರಡು ಸಂಗತಿಗಳತ್ತ ತಮ್ಮ ಗಮನವನ್ನೀಗ ಸೆಳೆಯುತ್ತೇನೆ. ಶಿಲ್ಪದ ವಿವಿಧ ಮಾದರಿಗಳ ಪ್ರಯೋಗಕ್ಕೂ ಸಾಮಾಜಿಕ ಬದಲಾವಣೆಗಳಿಗೂ ಇರುವ ಸಂಬಂಧದ ಶೋಧನೆ ಮೊದಲನೆಯದು. ಓದುಗ ವರ್ಗದ ಸ್ವರೂಪಕ್ಕೂ ಕಾದಂಬರಿಗಳ ಶಿಲ್ಪದಲ್ಲಿ ನಡೆವ ಪರಿವರ್ತನೆಗೂ ಇರುವ ಸಂಬಂಧದ ಹುಡುಕಾಟ ಎರಡನೆಯದು. ಈ ಎರಡು ವಿಚಾರ ಗಳನ್ನು ಕುರಿತು ಸ್ಥೂಲವಾದ ಕೆಲವು ಸಂಗತಿಗಳನ್ನು ಮಾತ್ರ ಇಲ್ಲಿ ಮಂಡಿಸಲು ಯತ್ನಿಸುವೆನು.

ಕಳೆದ ಶತಮಾನದ ನಡುಭಾಗದಿಂದ ಈವರೆಗೆ ನಡೆದ ಬದಲಾವಣೆಯನ್ನು ಹಲವು ಹಂತಗಳಲ್ಲಿ ಕಾರಂತರು ವಿಭಜಿಸಿಕೊಳ್ಳುತ್ತಾರೆ. ಈ ವಿಭಜನೆಯ ತಿರುವುಗಳು ಮೊದಲ ಮಹಾಯುದ್ಧ, ಎರಡನೆ ಮಹಾಯುದ್ಧ, ನಡುವಣ ಗಾಂಧಿ ಪ್ರಭಾವ, ಸ್ವಾತಂತ್ರ್ಯೋತ್ತರ ಕಾಲ ಬೇರೆಯದೇ ಆದ ಒಂದು ಹಂತ. ಈ ಒಂದೊಂದು ಹಂತ ದಲ್ಲೂ ಜೀವನದ ಲಯಗಳು ಮುರಿದು ಬೇರೊಂದು ಆಕಾರ ಬಂದದ್ದನ್ನು ಗ್ರಹಿಸುವ ಕಾದಂಬರಿಕಾರರು ಅದನ್ನು ತಮ್ಮ ಕಾದಂಬರಿಗಳಲ್ಲಿ ಕಂಡರಿಸಲು ಯತ್ನಿಸಿದ್ದಾರೆ. ಇದೂ ಅಲ್ಲದೆ ಮನುಷ್ಯನ 'ಎಲ್ಲ ಕಾಲದ ಪ್ರಶ್ನೆಗಳು' ಈ ವಿವಿಧ ಹಂತಗಳಲ್ಲಿ ಹೇಗೆ ಉತ್ತರವನ್ನು ಕಂಡುಕೊಂಡವು ಎಂಬುದನ್ನು ನೋಡಲು ಯತ್ನಿಸಿದ್ದಾರೆ. ಉದಾ: ಮಂಜುಳೆ (ಮೈಮನಗಳ ಸುಳಿಯಲ್ಲಿ) ಎದುರಿಸಿದ ಸಮಸ್ಯೆಯು ವಿವಿಧ ಹಂತಗಳಲ್ಲಿ ಬೇರೆ ಬೇರೆ ಉತ್ತರಗಳನ್ನು ಪಡೆದುಕೊಂಡಿದೆ. ಸುನಾಲಿನಿ (ಸರಸಮ್ಮನ ಸಮಾಧಿ), ಗುಲಾಬಿ (ಜಾರುವ ದಾರಿಯಲ್ಲಿ), ಕಾಂತಿ (ಒಂಟಿದನಿ) ಇವರೆಲ್ಲರು ಇದಕ್ಕೆ ತಕ್ಕ ಉದಾಹರಣೆಗಳಾಗಬಲ್ಲರು. ನಡೆಯುತ್ತಿದ್ದ ಬದಲಾವಣೆಗಳು ಮೌಲ್ಯಗಳಲ್ಲಿ ತರು

ತ್ತಿದ್ದ ಪರಿವರ್ತನೆಗಳನ್ನು ಕಾರಂತರು ಗ್ರಹಿಸುತ್ತಲೇ ಹೊಸ ಆಕಾರಗಳನ್ನು ಜೀವನವು ಪಡೆಯುತ್ತಿರುವುದನ್ನೂ ಆ ಆಕಾರದ ಲಕ್ಷಣಗಳನ್ನು, ಅದರ ಕೇಂದ್ರಸ್ಥ ಶಕ್ತಿಯನ್ನು ಕಂಡುಕೊಳ್ಳಲು ಯತ್ನಿಸಿದ್ದಾರೆ. ಹೀಗಾಗಿ ಕಾರಂತರು ಏಕಕಾಲಕ್ಕೆ ಕಾದಂಬರಿಕಾರ, ಸಮಾಜ ವಿಜ್ಞಾನಿ, ಸಾಮಾಜಿಕ ಮನೋವಿಜ್ಞಾನಿ ಎಲ್ಲವೂ ಆಗಿದ್ದಾರೆ. ಮುಂದುವರಿದ ಹಂತದಲ್ಲಿ ಚರಿತ್ರಕಾರರೂ ಆಗುತ್ತಾರೆ. ಕನ್ನಡ ಸಂಸ್ಕೃತಿಯ ಸಂದರ್ಭದಲ್ಲಿ ಈ ಎಲ್ಲ ಹೊಣೆಯನ್ನು ಹೊರುವುದು ಬರೆಹಗಾರನಿಗೆ ಅನಿವಾರ್ಯವಾಗಿತ್ತು ಎಂಬುದನ್ನು ಇಲ್ಲಿ ಮತ್ತೆ ವಿವರಿಸುವುದು ಅನವಶ್ಯಕ. ಆದ್ದರಿಂದ ಕಾರಂತರು ಈ ಎಲ್ಲ ಹೊಣೆಗಳನ್ನು ನಿರ್ವಹಿಸುತ್ತ ಕಂಡುಕೊಂಡ ಜೀವನದ ಶಿಲ್ಪದ ವಿವಿಧ ವಿನ್ಯಾಸಗಳೇ ಅವರ ಕಾದಂಬರಿಗಳಲ್ಲಿ ಮೂಡಿ ಬರುತ್ತಿವೆ ಎಂದು ತಿಳಿಯುವುದು ಸರಿಯಾದ ಮಾರ್ಗ. ಇದು ಬರೆಹಗಾರರಾಗಿ ಕಾರಂತರಿಗೆ ನೀಡುವ ವಿನಾಯತಿಯಲ್ಲ. ಬದಲಿಗೆ ಸಾಂಸ್ಕೃತಿಕವಾಗಿ ಬರಹಗಾರನನ್ನು ವಿವರಿಸಲು ಇರುವ ಏಕೈಕ ಮಾರ್ಗ.

ಇನ್ನು ಕಾರಂತರು ಬರೆಯಲು ತೊಡಗಿದ ಸಂದರ್ಭದ ಓದುಗರು ಕಾದಂಬರಿ ಇಲ್ಲವೇ ಸಾಹಿತ್ಯದ ವಿವಿಧ ಮಾದರಿಗಳನ್ನು ಅಧಿಕೃತ ಜೀವನ ವ್ಯಾಖ್ಯೆಗಳೆಂದು ತಿಳಿಯಲೇ ಬೇಕಾಗಿದ್ದವರು. ಎಂದರೆ ಅಕ್ಷರ ಮಾಧ್ಯಮದ ಮೂಲಕ ಅವರು ಬಯಸುತ್ತಿದ್ದುದು ತಮ್ಮ ಸಂವೇದನೆಗಳ ವಿಸ್ತರಣೆಯನ್ನು; ಅರಿವಿನ ಹೆಚ್ಚಳವನ್ನು. ಈಗಲೂ ಈ ಸಂದರ್ಭ ಸಂಪೂರ್ಣವಾಗಿ ಬದಲಾಗಿ ಹೋಗಿದೆ ಎಂದಲ್ಲ. ಆದರೆ ಇತರ ಮೂಲಗಳು ಅದರಲ್ಲೂ ಸಮೂಹ ಮಾಧ್ಯಮಗಳು ಬೆಳೆದಿರುವುದರಿಂದ ಓದುಗನಿಗೆ ಈಗ ಆಯ್ಕೆ ಸಾಧ್ಯವಿದೆ. ಈ ಮಾತನ್ನು ಹೇಳುತ್ತಿರುವುದರ ಔಚಿತ್ಯವನ್ನು ವಿವರಿಸಲು ಯತ್ನಿಸುತ್ತೇನೆ.

ಜೀವನ ಹಾಗೂ ಓದುಗನ ನಡುವೆ ಕಾದಂಬರಿಕಾರ ನಿಂತು ಓದುಗನಿಗೆ ಜೀವನದ ವಿವಿಧ ವಿನ್ಯಾಸಗಳನ್ನು, ಅರ್ಥವನ್ನು, ಲಯಗಳನ್ನು ವಿವರಿಸುವ ಹೊಣೆಯನ್ನು ಹೊತ್ತಿದ್ದ ಕಾಲದಲ್ಲಿ ಕಾರಂತರು ತಮ್ಮ ಮೊದಲ ಕಾದಂಬರಿಗಳನ್ನು ಬರೆದರು. ಆಗ ಅಧಿಕೃತ ಜಗತ್ತನ್ನು ಮಂಡಿಸುವುದೇ ಮುಖ್ಯವಾಗಿತ್ತು. ಅದಕ್ಕಾಗಿ ಅವರು ಯಾವ ರಾಜಿಯನ್ನೂ ಮಾಡಿಕೊಳ್ಳದೆ! ಅಂಥವೇ ಕಾದಂಬರಿಗಳನ್ನು ತಕ್ಕ ಶಿಲ್ಪದಲ್ಲಿ ರೂಪಿಸಿದರು.

ಬೆಟ್ಟದಜೀವ ಕಾದಂಬರಿಯಲ್ಲಿ ನಿರೂಪಕ ಪಾತ್ರವಾಗಿ ಬಂದರೂ ಅದು ಕಾದಂಬರಿಯ ಶಿಲ್ಪದಲ್ಲೆ ಬದಲಾವಣೆ ತರುವಂತೆ ಬಂದದ್ದು 1960ರ ಸುಮಾರಿನಲ್ಲಿ. ಆ ವರ್ಷ ಬರೆದ ಮೂರು ಕಾದಂಬರಿಗಳಲ್ಲಿ (ಅಳಿದ ಮೇಲೆ, ಶನೀಶ್ವರನ ನೆರಳಿನಲ್ಲಿ, ಮತ್ತು ಜಗದೋದ್ಧಾರ–ನಾ) ನಿರೂಪಕನೇ ನೇರವಾಗಿ ಪ್ರಥಮ ಪುರುಷದಲ್ಲಿ ನಿರೂಪಣೆಯನ್ನು ಪ್ರಾರಂಭಿಸಿದ್ದು ಕೇವಲ ಕಾಕತಾಳೀಯವಾಗಿರಲಾರದು. ಅಲ್ಲಿಂದ

ಮುಂದೆ ನಿರೂಪಕನ ವ್ಯಾಖ್ಯಾನಗಳು ಹೆಚ್ಚುತ್ತಾ ಹೋಗುತ್ತವೆ. ಎಂದರೆ ಚಿತ್ರಿಸು ತ್ತಿರುವ ಜಗತ್ತಿನ ಅಧಿಕೃತತೆಗಿಂತ ಅವರ ಮೂಲಕ ಹೊರಡಿಸುವ ಅರ್ಥದ ಅಧಿ ಕೃತತೆಯ ಕಡೆಗೆ ಒತ್ತು ಹೆಚ್ಚಾದದ್ದು ಕಂಡುಬರುತ್ತದೆ.

ಈ ಬದಲಾವಣೆಯನ್ನು ಓದುಗರ ಅಪೇಕ್ಷೆ ಮತ್ತು ಅವರ ಸಿದ್ಧತೆಯಲ್ಲಿ ಆದ ವ್ಯತ್ಯಾಸಗಳ ನೆರವಿನಿಂದ ಹಾಗೂ ಅದರ ಹಿನ್ನೆಲೆಯಲ್ಲಿ ಮಾತ್ರ ವಿವರಿಸಲು ಸಾಧ್ಯವೆಂದು ನಾನು ತಿಳಿಯುತ್ತೇನೆ. ಅಧಿಕೃತ ಜೀವನ ಚಿತ್ರಗಳಿಗೆ ಅದನ್ನು ಕುರಿತಾದ ಚಿಂತನೆಗಳಿಗೆ ಓದುಗ ಇತರ ಮೂಲಗಳನ್ನು ಕೂಡ ಆಶ್ರಯಿಸುವುದು ಸಾಧ್ಯವಾದ್ದ ರಿಂದ ಕಾದಂಬರಿಕಾರನ ಹೊಣೆ ಬೇರೆಯೇ ಆಗುತ್ತದೆ. ಅದನ್ನು ನಿರ್ವಹಿಸುವ ಹಾದಿ ಯಲ್ಲಿ ಕಾರಂತರು ಕಾದಂಬರಿಗಳ ಶಿಲ್ಪದಲ್ಲಿ ಮೂಲಭೂತ ಬದಲಾವಣೆ ಮತ್ತು ಪ್ರಯೋಗಗಳನ್ನು ಮಾಡುತ್ತಾ ಬಂದಿದ್ದಾರೆ ಎಂದು ನಾನು ತಿಳಿಯುತ್ತೇನೆ.

ಈ ಪ್ರಬಂಧದಲ್ಲಿ ಕಾರಂತರ ಕಾದಂಬರಿಗಳ ಶಿಲ್ಪವನ್ನು ಕುರಿತಂತೆ ಹೇಳಬಹು ದಾದ ಎಲ್ಲ ವಿಚಾರಗಳನ್ನೂ ಹೇಳಿಲ್ಲ. ಹಾಗೂ ಹೇಳುವುದು ಸಾಧ್ಯವೂ ಇಲ್ಲ. ಆ ದಿಕ್ಕಿನಲ್ಲಿ ಚಿಂತಿಸಲು ಬೇಕಾದ ಕೆಲವು ನೆಲೆಗಳನ್ನು ರೂಪಿಸಲು ಯತ್ನಿಸಿದ್ದೇನೆ. ಈ ನೆಲೆಗಳು ಕಾರಂತರ ಕಾದಂಬರಿಗಳ ಅಭ್ಯಾಸದಿಂದ ಹಾಗೂ ಕನ್ನಡದ ಸಾಂಸ್ಕೃತಿಕ ಸಂದರ್ಭದ ಚಿಂತನೆಯಿಂದ ರೂಪುಗೊಂಡದ್ದು. ಹಾಗೇ ರೂಪುಗೊಳ್ಳಬೇಕೆಂಬುದು ನನ್ನ ಅಪೇಕ್ಷೆಯಾಗಿದೆ ಎಂಬುದನ್ನು ಪ್ರಬಂಧದ ಮೊದಲಲ್ಲೇ ನಿರೂಪಿಸಿದ್ದೇನಷ್ಟೆ.

## ಟಿಪ್ಪಣಿಗಳು

1. ಭಾರತೀಯ ಕಾವ್ಯ ಮೀಮಾಂಸೆಯಲ್ಲಿ ಕೃತಿಯ ಶಿಲ್ಪವನ್ನು ಕುರಿತಂತೆ ನೇರವಾದ ಚಿಂತನೆಗಳು ಮಂಡಿತವಾಗಿವೆ. ಕೃತಿಯ ಭಾಷಿಕ ಸ್ವರೂಪವನ್ನು ಅವಲಂಬಿಸಿ ಮಾರ್ಗ, ರೀತಿ ಹಾಗೂ ಪಂಥ ಎಂಬ ಮಾತುಗಳನ್ನು ಬಳಸಲಾಗಿದೆ. ಆದರೆ ಕೃತಿಯ ಅಂಗಗಳ ಸಂಯೋಜನೆ ಯನ್ನು ಕುರಿತ ಚಿಂತನೆಗಳು ಮಂಡಿತವಾಗಿರುವುದು ಆನಂದವರ್ಧನನಲ್ಲಿ. ಅವನು ತನ್ನ ಧ್ವನ್ಯಾ ಲೋಕದಲ್ಲಿ "ಸಂಘಟನಾ" ಎಂಬ ಪರಿಕಲ್ಪನೆಯನ್ನು ಬಳಸಿದ್ದಾನೆ. ಅವನೇ ಬಳಸಿದ "ಬಂಧ ಛಾಯಾ" ಎಂಬ ಮಾತು ಗಮನ ಸೆಳೆಯುವಂಥದು. ಕುಂತಕನು ತನ್ನ ಕಾವ್ಯ ವ್ಯಾಖ್ಯಾನದಲ್ಲಿ "ವ್ಯವಸ್ಥಿತವಾದ ಬಂಧ"ವು ಕಾವ್ಯದ ಅವಶ್ಯಕತೆಗಳಲ್ಲಿ ಒಂದು ಎಂದಿದ್ದಾನೆ. ಆದರೆ ಈ ಬಂಧ ವ್ಯವಸ್ಥೆಯ ನಿರ್ಣಾಯಕ ಹಾಗೂ ನಿರ್ಧಾರಕ ಅಂಶವೆಂದರೆ "ಔಚಿತ್ಯ". ನಿರ್ದಿಷ್ಟ ಭಾವ ಚೋದನೆ ಗಾಗಿ ಸ್ಥಾಯಿ ಮತ್ತು ಸಂಚಾರಿ ಭಾವಗಳನ್ನು ಅಂಗಾಂಗಿ ಸಂಬಂಧದಲ್ಲಿ, ಔಚಿತ್ಯವನ್ನು ಅವಲಂಬಿಸಿ ಸಂಯೋಜಿಸಬೇಕು ಎಂಬ ನೆಲೆಯಲ್ಲಿ ಅರ್ವಾಚೀನ ಕಾವ್ಯಮೀಮಾಂಸಕರು ಹೇಳಿರುವುದುಂಟು.

ಇದಕ್ಕೂ ಮೊದಲು ನಾಟಕದ ರಚನೆಯನ್ನು ವಿಶ್ಲೇಷಿಸುವ ವಿಚಾರಗಳನ್ನು ಚರ್ಚಿಸು ವಾಗಲೂ ಕೂಡ ಅಂಗಾಂಗ ಸಮನ್ವಯವನ್ನು ಕುರಿತ ಚಿಂತನೆಯು ಮಂಡಿತವಾಗಿತ್ತು. ಅಂಗಾಂಗ ಗಳು ಸಮವಾಯ ಸಂಬಂಧದಲ್ಲಿ—ಅಂದರೆ ತಮ್ಮ ಪ್ರತ್ಯೇಕ ಅಸ್ತಿತ್ವವನ್ನು ಕಳೆದುಕೊಂಡು

ಸಂಯೋಜಿತವಾಗಬೇಕು ಎಂಬ ನಿಲುವು ಸಾಕಷ್ಟು ಗಹನವಾದ ನೆಲೆಗಳಿಗೆ ನಮ್ಮನ್ನು ಒಯ್ಯುತ್ತದೆ. ಗಾನಮೇಳವೊಂದರಲ್ಲಿ ಗಾಯಕ ಇಲ್ಲವೇ ವಾದನದ ಸ್ವಂತಿಕೆಯು ಪ್ರತ್ಯೇಕವಾಗಿ ಗಮನಕ್ಕೆ ಬರದಿರುವ ನಿದರ್ಶನದ ಮೂಲಕ ಪಾಶ್ಚಾತ್ಯ ಚಿಂತಕ ಅರಿಸ್ಟಾಟಲ್ ಹೇಳಿದ್ದೂ ಇದೇ ಆಗಿದೆ.

2. ಒಂದು ಕುತೂಹಲದ ಸಂಗತಿ. ಕಾರಂತರು ತಮ್ಮ ಇಪ್ಪತ್ತೆಂಟು ಕಾದಂಬರಿಗಳಲ್ಲಿ ವಸ್ತುವನ್ನು ಮಂಡಿಸುವಾಗ ಅನುಸರಿಸುವ ವಿಭಜನಾಕ್ರಮದಲ್ಲಿ ಸಾರೂಪ್ಯವಿದೆ. ಆ ಕಾದಂಬರಿಗಳಲ್ಲಿ ಅವರು ಹದಿನೈದು ಅಧ್ಯಾಯಗಳನ್ನು ಮಾತ್ರ ಮಾಡಿಕೊಂಡಿರುವುದು ಆಕಸ್ಮಿಕವೆಂದು ಹೇಳಲಾಗುತ್ತದೆಯೆ ? ಇದು ಕೇವಲ ಪ್ರಶ್ನೆ. ಹಾಗೂ ಇದರಿಂದ ನನ್ನ ಪ್ರಬಂಧಕ್ಕೆ ಪೂರಕವಾಗುವ ಯಾವ ಸಾಮಗ್ರಿಯೂ ದೊರಕುವುದಿಲ್ಲವೆಂಬುದು ನನಗೆ ತಿಳಿದಿದೆ.

# ಕಾರಂತರ ಕಾದಂಬರಿಗಳಲ್ಲಿ ಸಾಮಾಜಿಕನ್ಯಾಯ ಕಲ್ಪನೆ

ಬರಗೂರು ರಾಮಚಂದ್ರಪ್ಪ

ಸಮಾಜ ವಿಜ್ಞಾನಿ ಎಸ್. ಎಂ. ನ್ಯಾಡೆಲ್‌ನ ಒಂದು ಹೇಳಿಕೆ ಹೀಗಿದೆ :

Society means the totality of social facts projected on to the dimension of relationship and grouping. Culture, the same totality in the dimension of action.

ಕಾರಂತರ ಕಾದಂಬರಿಗಳನ್ನು ಚರ್ಚಿಸುವಾಗ ಈ ಹೇಳಿಕೆಯ ಉಲ್ಲೇಖ ಉಚಿತವಾದುದೆಂದು ಭಾವಿಸಿದ್ದೇನೆ. ಸಂಬಂಧ ಮತ್ತು ಸಮೂಹದ ಆಯಾಮದಲ್ಲಿ ಕಾಣಿಸಿಕೊಳ್ಳುವ ಸಾಮಾಜಿಕ ಸತ್ಯಗಳ ಮೊತ್ತವನ್ನು ಸಮಾಜವೆಂದು ಕರೆಯುವ ನ್ಯಾಡೆಲ್ ತನ್ನ ವ್ಯಾಖ್ಯಾನದಲ್ಲಿ ಸಾಹಿತಿಯ ಹತ್ತಿರಕ್ಕೂ ಬಂದಿದ್ದಾನೆ. ಯಾಕೆಂದರೆ ಸಾಹಿತಿಯೊಬ್ಬ ಸಮಾಜವನ್ನು ಕೇವಲ ಮನುಷ್ಯ ಪ್ರಾಣಿಗಳ ಗುಂಪೆಂದು ಭಾವಿಸದೆ, ಅಲ್ಲಿರುವ ಸಾಮೂಹಿಕ ಸಂಬಂಧ, ಸಾಂಸ್ಕೃತಿಕ ಕ್ರಿಯೆ ಮತ್ತು ಇದರಿಂದ ಹೊರಡುವ ಸಾಮಾಜಿಕ ಸತ್ಯಗಳನ್ನು ಮನನ ಮಾಡಿಕೊಳ್ಳುವ ಅಗತ್ಯವಿದೆ.

ನಮಗೆ ಇಷ್ಟವಾಗಲಿ, ಬಿಡಲಿ, ಈ ಸಾಮಾಜಿಕ ಪರಿಸರದ ಪ್ರಕ್ರಿಯೆಯಲ್ಲಿ ಪಾಲುದಾರರಾಗುವುದು ಅನಿವಾರ್ಯವಾಗಿದೆ. ಈ ಪಾಲುದಾರಿಕೆಯ ಸ್ವರೂಪ ವಿಭಿನ್ನವಾಗಿರಬಹುದು. ಕೆಲವರು ಸಾಂಪ್ರದಾಯಿಕ ಹೊಂದಾಣಿಕೆಯಲ್ಲೇ 'ಸತ್ಯ' ಕಾಣಬಹುದು. ಇನ್ನು ಕೆಲವರು ಸಾಂಪ್ರದಾಯಿಕ ನೆಲೆಯನ್ನು ವಿರೋಧಿಸುವ ಹೋರಾಟದಲ್ಲೇ ಸತ್ಯದ ಹಾದಿ ಹುಡುಕಬಹುದು. ಅಥವಾ ಹೋರಾಟ ಮತ್ತು ಹೊಂದಾಣಿಕೆಗಳ ವೈರುಧ್ಯದ ಬದುಕಿನ ಸಂಬಂಧಗಳ ಶೋಧನೆಗೆ ತೊಡಗಬಹುದು. ನಾವು ಸಮಾಜ, ಸಾಹಿತ್ಯ, ಹೋರಾಟ – ಇತ್ಯಾದಿಗಳ ಬಗ್ಗೆ ಮಾತಾಡುವಾಗ ಒಂದು ಮಾತನ್ನು ಚೆನ್ನಾಗಿ ನೆನಪಿಟ್ಟುಕೊಳ್ಳಬೇಕು: ಯಾವುದೇ ಸಂಗತಿ ನೂರಕ್ಕೆ ನೂರರಷ್ಟು ಅಂತರಂಗಿಕವಾಗಲಿ ಅಥವಾ ಕೇವಲ ಬಹಿರಂಗದ್ದಾಗಲಿ ಆಗಿರುವುದಿಲ್ಲ. ಎರಡರ ಪರಸ್ಪರ ಸಂಬಂಧದಲ್ಲೇ ನಮ್ಮ ನೆಲೆಗಳು ಕಾಣಿಸುವುದು, ನಿಲುವುಗಳು ರೂಪುಗೊಳ್ಳುವುದು. ಆದ್ದರಿಂದ ಸಾಹಿತ್ಯದಲ್ಲಿ ವೈಯಕ್ತಿಕ ವಸ್ತುವೊಂದು ಸಾಮಾಜಿಕವೂ ಆಗಬಹುದು; ಸಾಮಾಜಿಕ ವಸ್ತುವೊಂದು ವೈಯಕ್ತಿಕವೂ ಆಗಬಹುದು. ಆದರೆ ಸಾಹಿತಿಯ ಪ್ರತಿಭೆ ಮತ್ತು ಪರಿಸರ ಪ್ರಜ್ಞೆಗಳು ವಸ್ತುವಿನ ವ್ಯಾಪಕತೆ ಅಥವಾ ಸೀಮಿತತೆಯನ್ನು ನಿರ್ಧರಿಸುತ್ತವೆ. ಸಾಹಿತ್ಯದ ಸಾರ್ವಭೌಮತ್ವದ

ಘ್ರಮೆಯಲ್ಲಿ ಕೇವಲ ಅಂತರ್ಮುಖಿಯಾಗುವ ಸಾಹಿತಿ ತನ್ನ ವೈಯುಕ್ತಿಕ ಪರಿಧಿಯು ನಿಷ್ಠೆಯಲ್ಲಿ ನಿಂತು ಹೋಗುವ ಅಪಾಯವಿದ್ದೇ ಇದೆ. ಸಾಹಿತಿಯೊಬ್ಬ ಅಂತರ್ಮುಖಿ ಯಾಗಬೇಕಾದ್ದು ಸೃಷ್ಟಿಕ್ರಿಯೆಯ ಸಂದರ್ಭದಲ್ಲೇ ಹೊರತು ಅನುಭವವನ್ನು ತುಂಬಿ ಕೊಡುವ ಬದುಕಿನ ಬೀದಿಯಲ್ಲಲ್ಲ. ಅಂತೆಯೇ ಸಾಮಾಜಿಕತೆಯೆನ್ನುವುದು ವೈಯಕ್ತಿ ಕತೆಯ ವಿರೋಧಿಯಲ್ಲ, ಸೃಜನಶೀಲ ಕೃತಿಯೊಂದರ ಸಾಮಾಜಿಕತೆ, ವೈಯಕ್ತಿಕ ಮನಸ್ಸು ಮತ್ತು ಮೆದುಳುಗಳ ಮೂಲಕವೇ ಹೊರದಾರಿ ಹುಡುಕಿಕೊಳ್ಳಬೇಕು. ಆದ್ದರಿಂದ ಉನ್ನತ ಸಾಮಾಜಿಕ ಪ್ರಜ್ಞೆ, ವ್ಯಕ್ತಿಯನ್ನೂ ಒಳಗೊಂಡ ಒಂದು ಒಂದು ಸಾಮಾಜಿಕ ಶೋಧನೆಯ ಶಕ್ತಿಯಾಗಿರುತ್ತದೆ; ವ್ಯಕ್ತಿ ಮತ್ತು ಸಮಾಜದ ವಿವಿಧ ಅಂಗಗಳ ಅಂತಹ ಸಂಬಂಧದ ಅರಿವಿನಿಂದ ಹುಟ್ಟಿದ ಅಭಿವ್ಯಕ್ತಿಯಾಗಿರುತ್ತದೆ.

ಕಾರಂತರ ಕಾದಂಬರಿಗಳಲ್ಲೂ ಸಮಾಜದ ವಿವಿಧ ಅಂಗಗಳ ದರ್ಶನವಿದೆ. ಕಾದಂಬರಿ ಪ್ರಕಾರ ಕಾವ್ಯಕ್ಕಿಂತ ಭಿನ್ನವಾದ್ದರಿಂದ ಇಲ್ಲಿ ಸಾಮಾಜಿಕ ಅಂತರ್ ಸಂಬಂಧಗಳ ಶೋಧನೆಗೆ ಅವಕಾಶ ಹೆಚ್ಚು. ಕಾರಂತರ ಬಹಳಷ್ಟು ಕಾದಂಬರಿಗಳಲ್ಲಿ ಇಂಥ ಶೋಧನೆಯಿದೆ. ಏರದೆ ಇಳಿಯದೆ ಹರಿಯುವ ಶೋಧನಾತ್ಮಕತೆಯೇ ಕಾರಂತರ ಶೈಲಿಯಾಗಿದೆ. ಇನ್ನೊಂದು ಮುಖ್ಯ ಸಂಗತಿಯೆಂದರೆ ಕಾರಂತರ ಹೆಚ್ಚು ಕಾದಂಬರಿ ಗಳ ಸಾಮಾಜಿಕ ಅಂಗ ಕುಟುಂಬ. ಇಂಡಿಯಾದಂಥ ದೇಶದಲ್ಲಿ 'ಕುಟುಂಬ' ಬಹುಮುಖ್ಯ ಸಾಮಾಜಿಕ ಘಟಕವೆಂಬುದರಲ್ಲಿ ಅನುಮಾನವೇ ಇಲ್ಲ. ವ್ಯಕ್ತಿಯ ಬೆಳವಣಿಗೆಯಿಂದ ಹಿಡಿದು ಆತನ ಎಲ್ಲ ಕ್ರಿಯೆಗಳ ಹಿಂದೆ ಕುಟುಂಬದ ಕ್ರಿಯಾರೂಪ ಇದ್ದೇ ಇರುತ್ತದೆ. ಇದು ವಿಕಸನಶೀಲವೂ ಆಗಿರಬಹುದು; ನಿಯಂತ್ರಕ ಶಕ್ತಿಯೂ ಆಗಿರಬಹುದು. ವ್ಯಕ್ತಿಯ ಬಹುಮುಖ್ಯ ನಿರ್ಧಾರಗಳಲ್ಲಿ ಕುಟುಂಬ ತನ್ನ ಕಣ್ಣು ಹಾಕಿಯೇ ಇರುತ್ತದೆ. ಅಂದರೆ ವ್ಯಕ್ತಿಯ ಮನಸ್ಸು, ಮೆದುಳು ಸಾಮಾಜಿಕ ಕ್ರಿಯೆ-ಇಂಥ ಎಲ್ಲದರ ಹಿಂದೆ ಕುಟುಂಬ ತನ್ನದೇ ಪಾತ್ರವನ್ನು ನಿರ್ವಹಿಸುತ್ತದೆ. ಆದ್ದ ರಿಂದಲೇ ಇಂಡಿಯಾದ ವ್ಯಕ್ತಿಪ್ರಜ್ಞೆ, ತನ್ನ ಮಹತ್ವದ ಸಾಧನೆಗಳ ಸಂದರ್ಭದಲ್ಲಿ 'ಕುಟುಂಬ'ವನ್ನು ಮೀರುವ ಅಥವಾ ಅದನ್ನು ಒಗ್ಗಿಸಿಕೊಳ್ಳುವ ಸಾಹಸ ಮಾಡ ಬೇಕಾಗುತ್ತದೆ. ಕುಟುಂಬವು ನಮ್ಮ ಮೌಲ್ಯ ವ್ಯವಸ್ಥೆಯ ಮುಖ್ಯ ಭಾಗವಾಗಿರು ವುದೇ ಇದಕ್ಕೆ ಕಾರಣ. ನಾವು ನಂಬಿದ ಮೌಲ್ಯಗಳು ಪರೀಕ್ಷೆಗೊಳಗಾಗುವ ಮುಖ್ಯ ಸ್ಥಳವಿದು. ಯಾಕೆಂದರೆ ಸಮಾಜದಲ್ಲಿ ರೂಪುಗೊಂಡ ನಿರ್ದಿಷ್ಟ ಜೀವನ ವಿಧಾನ ಪ್ರಖರವಾಗಿ ಪ್ರಕಟವಾಗುವುದು 'ಕುಟುಂಬ'ವೆಂಬ ಸಾಮಾಜಿಕ ಸಂಸ್ಥೆಯಲ್ಲಿ. ಈ ಸಂಸ್ಥೆ ಹೆಚ್ಚು ವ್ಯವಸ್ಥಿತವಾದುದು. ಮಾನವವಿಜ್ಞಾನಿ Herskovitz ಹೇಳುವಂತೆ "Society is an organised interacting aggregate of individuals who follow a given way of life" ಈತ ಹೇಳುವ 'ವ್ಯಕ್ತಿಗಳ ಸಂಯೋಜಿತ ಅಂತರ್‌ಕ್ರಿಯೆ' ಕುಟುಂಬದಲ್ಲಿ ಹೆಚ್ಚು ಕಾಣಿಸುತ್ತದೆ. ಕುಟುಂಬವು ಸಾಮಾಜಿಕಮೌಲ್ಯಗಳ ಮುಖ್ಯ ಕನ್ನಡಿ

ಎನ್ನಬಹುದು. ಹೀಗಾಗಿ ಪ್ರಮುಖ ಬರಹಗಾರರು ಎಲ್ಲಿ ಸುತ್ತಿ ಬಳಸಿದರೂ ಕುಟುಂಬದ ಕೇಂದ್ರಕ್ಕೆ ಒಮ್ಮೆಯಾದರೂ ಬಂದು ತಂಗಬೇಕಾಗುತ್ತದೆ. ಶಿವರಾಮ ಕಾರಂತರಿಗಾದರೊ ಇದು ವಸ್ತುವಿಗೆ ಬೇಕಾದ ಪ್ರಮುಖ ಸಾಧನವಾಗಿದೆ. 'ಚೋಮನ ದುಡಿ'ಯಂಥ ಕಾದಂಬರಿಯಲ್ಲೂ ಕೌಟುಂಬಿಕ ನೆಲೆ ಪ್ರಮುಖ ಪಾತ್ರವಹಿಸುತ್ತದೆ. ನಂಬಿದವರ ನಾಕ ನರಕ, ಬೆಟ್ಟದ ಜೀವ, ಮರಳಿ ಮಣ್ಣಿಗೆಯಂಥ ಕೃತಿಗಳ ಬಗ್ಗೆ ಪ್ರತ್ಯೇಕವಾಗಿ ಹೇಳಬೇಕಿಲ್ಲ. ಕಾರಂತರು ಬದುಕಿ ಬೆಳೆಯುತ್ತಿರುವ ಭೌಗೋಳಿಕ ವಿನ್ಯಾಸವೂ ಈ 'ಕುಟುಂಬ ಪ್ರಾಧಾನ್ಯ'ಕ್ಕೆ ಕಾರಣವಿರಬಹುದು. ಬಯಲುಸೀಮೆಯ ಊರುಗಳ ಕಲ್ಪನೆಗೂ ದಕ್ಷಿಣ ಕನ್ನಡದ ಊರುಗಳ ಕಲ್ಪನೆಗೂ ವ್ಯತ್ಯಾಸವಿದೆ. ಎರಡು ವಿಭಿನ್ನ ಪರಿಸರಗಳಲ್ಲಿ ವಿಕಾಸ ಹೊಂದುವ ಮನಸ್ಸು ಗ್ರಹಿಸುವ ಸಾಮಾಜಿ ಕತೆಯಲ್ಲೂ ವಿಭಿನ್ನತೆಯಿರುವುದು ಸಹಜ. ಆದ್ದರಿಂದಲೇ ಬಯಲು ಸೀಮೆ, ಮಲೆನಾಡು, ದಕ್ಷಿಣ ಕನ್ನಡ, ಉತ್ತರ ಕರ್ನಾಟಕ-ಹೀಗೆ ವಿವಿಧ ಭಾಗಗಳ ಸಾಹಿತಿ ಗಳಲ್ಲಿ ಭಾಷೆಯ ವ್ಯತ್ಯಾಸವಷ್ಟೇ ಅಲ್ಲ, ಬದುಕಿನ ಅನುಭವ ಮತ್ತು ಗ್ರಹಿಕೆಗಳಲ್ಲೂ ವ್ಯತ್ಯಾಸವಿದೆಯೆನ್ನಿಸುತ್ತದೆ. ಆದ್ದರಿಂದ ಸಾಹಿತ್ಯದಲ್ಲಿ ಸಮಾಜದ ಎಲ್ಲ ಘಟಕಗಳೂ, ಸಂಸ್ಥೆಗಳೂ ಬರಬಹುದಾದರೂ ಪ್ರಧಾನವಾಗಿ ಕೃತಿಕಾರನ ಅನುಭವಕ್ಕೆ ಹತ್ತಿರವಾದ 'ಸಂಸ್ಥೆ'ಯ ಮೂಲಕವೇ ಮೌಲ್ಯಶೋಧನೆ ನಡೆಯುತ್ತದೆ. ಕಾರಂತರ ಪರಿಸರದಲ್ಲಿ ಊರುಗಳೆಂದರೆ ಬೆರಳೆಣಿಕೆಯ ಕುಟುಂಬಗಳ ಗುಂಪಷ್ಟೇ ಎಂಬುದನ್ನು ಇಲ್ಲಿ ನೆನೆಯ ಬಹುದು.

ಕಾರಂತರ ಕಾದಂಬರಿಗಳಲ್ಲಿ ಸಾಮಾಜಿಕ ನ್ಯಾಯ ಕಲ್ಪನೆಯ ವಿಷಯವೂ ಮೇಲೆ ಚರ್ಚಿಸಿದ ಕೇಂದ್ರಕ್ಕೆ ಸಂಬಂಧಿಸಿದೆ. ಅವರ ಕಾದಂಬರಿಗಳಲ್ಲಿ ಪ್ರಕಟವಾಗಿರುವ 'ಸಾಮಾಜಿಕ ನ್ಯಾಯ'ದ ಸ್ವರೂಪವನ್ನು ಗುರುತಿಸುವುದಕ್ಕೆ ಮೊದಲು 'ಸಾಮಾಜಿಕ ನ್ಯಾಯ' ಎಂಬ ಪರಿಕಲ್ಪನೆಯನ್ನು ವಿವರಿಸಿಕೊಳ್ಳುವುದು ಅಗತ್ಯ. ಯಾಕೆಂದರೆ ಇದು ಕೇವಲ 'ನ್ಯಾಯ'ವಲ್ಲ, 'ಸಾಮಾಜಿಕ ನ್ಯಾಯ'. ಹಾಗಾದರೆ 'ನ್ಯಾಯ'ದ ಕಲ್ಪನೆಗೂ 'ಸಾಮಾಜಿಕ ನ್ಯಾಯ'ಕ್ಕೂ ವ್ಯತ್ಯಾಸವಿದೆಯೆ?

ಸಾಮಾನ್ಯವಾಗಿ 'ನ್ಯಾಯ' ಎನ್ನುವುದು ಅಸ್ತಿತ್ವದಲ್ಲಿರುವ ನಿಯಮಗಳಿಗನು ಸಾರವಾಗಿ ನಿರ್ಧಾರವಾಗುತ್ತದೆ. ವಾದ-ಪ್ರತಿವಾದಕ್ಕೆ ಬೇಕಾದ್ದು ನಿಯಮಾನುಸಾರ ವಿಷಯ ಪೂರೈಕೆ. ಕಡೆಗೆ ನಿರ್ಧಾರ ಅಥವಾ ತೀರ್ಪು ನಿಯಮ ಅಥವಾ ಕಾನೂನು ಗಳನ್ನು ಆಧರಿಸುತ್ತದೆ. ತಪ್ಪು-ಒಪ್ಪುಗಳಿಗೆ ಬೇಕಾದ ವಿಷಯ ಸಮರ್ಥನೆ ನಡೆಯ ಬೇಕಾಗುತ್ತದೆ. ಅಂದರೆ ಕಾನೂನಿನ 'ನ್ಯಾಯ' ತಾಂತ್ರಿಕವಾದುದು. ಅದಕ್ಕೆ ಮಾನ ವೀಯ ಸ್ಪರ್ಶ ಕೊಡುವ ಪ್ರಯತ್ನಗಳು ನಡೆಯುತ್ತಲೇ ಇದ್ದರೂ, ಎಲ್ಲವೂ ಒಂದು ನಿರ್ದಿಷ್ಟ ವಿಧಾನದಲ್ಲೇ ನಡೆಯಬೇಕಾದ್ದರಿಂದ, ಒಂದು ಚೌಕಟ್ಟಿನೊಳಗೇ ನ್ಯಾಯ ನಿರ್ಧಾರ ಆಗಬೇಕಾದ್ದರಿಂದ, ಕಾನೂನನ್ನು ಮೀರಿದ ಮಾನವೀಯ ತೀರ್ಪುಗಳು

ಹೊರಬರುವುದು ಕಷ್ಟ. ಆದ್ದರಿಂದ ಕಾನೂನೇ ಮಾನವೀಯವಾಗಿ ರೂಪುಗೊಳ್ಳದ ಹೊರತು 'ನ್ಯಾಯ' ಮಾನವೀಯವಾಗುವುದಿಲ್ಲ.

'ಸಾಮಾಜಿಕ ನ್ಯಾಯ'ವೆಂಬ ಪರಿಕಲ್ಪನೆ ಮೌಲ್ಯ ಸಂಘರ್ಷದ ಫಲವಾಗಿ ರೂಪುಗೊಂಡದ್ದು. ಅಸ್ತಿತ್ವದಲ್ಲಿರುವ ಸಾಮಾಜಿಕ ಸಂಹಿತೆಯ ಮಿತಿಗಳನ್ನು ಮೀರುವ ಪ್ರಯತ್ನವು ಹೊಸ ಸಾಮಾಜಿಕ ಪ್ರಜ್ಞೆಯನ್ನು ಮೂಡಿಸುತ್ತದೆ. ಇದರ ಫಲವಾಗಿ ಬಹುಜನ ಒಪ್ಪಿತ ಮೌಲ್ಯ ವ್ಯವಸ್ಥೆ ಬಿರುಕು ಬಿಡಲಾರಂಭಿಸುತ್ತದೆ. ಇದು ವೈಚಾರಿಕವಾಗಿ ಸಾಮಾಜಿಕ ಸಂಘರ್ಷದ ಪ್ರಾರಂಭ. ಸಾಮಾಜಿಕ ಮೌಲ್ಯಗಳು ಕಾಲಕಾಲಕ್ಕೆ ಬದಲಾಗುತ್ತ ಪ್ರಗತಿಪರ ಸಮಕಾಲೀನ ಅಗತ್ಯಗಳನ್ನು ಪೂರೈಸುವ ಸಾಧನಗಳಾಗದಿದ್ದರೆ, ಅವುಗಳ ಮೂಲಕ ವ್ಯಕ್ತವಾಗುವ ನ್ಯಾಯ ಕಲ್ಪನೆ ತಾಂತ್ರಿಕವಾಗಿ ಸರಿಯಾಗಿರಬಹುದಾದರೂ ಅಮಾನವೀಯವಾಗಿರುತ್ತದೆ. ಇದಕ್ಕೆ ಇಂಡಿಯಾದ ವರ್ಣಪದ್ಧತಿ ಉತ್ತಮ ಉದಾಹರಣೆ. ಸಾವಿರಾರು ವರ್ಷಗಳಿಂದ ಒಪ್ಪಿಕೊಂಡು ಉದ್ದಕ್ಕೂ ಕ್ರೂರ ಹೊಂದಾಣಿಕೆಯಲ್ಲೇ ಬದುಕು ತಳ್ಳಿದ ಜನರಿಗೆ ನಿಜವಾದ ನ್ಯಾಯ ಸಿಗಬೇಕಾದರೆ ವರ್ಣವ್ಯವಸ್ಥೆಯ ವಿರೋಧಿ ನೆಲೆ ತಲುಪಲೇಬೇಕು. ವರ್ಣ ವ್ಯವಸ್ಥೆಯನ್ನು ಒಪ್ಪಿ ವಿತರಣೆಗೊಳ್ಳುವ 'ನ್ಯಾಯ' ಸಾವಿರಾರು ವರ್ಷಗಳಿಂದ ಅಸ್ತಿತ್ವದಲ್ಲಿರುವ ಸಾಮಾಜಿಕ ಸಂಹಿತೆಗೆ ಸರಿಯಿರಬಹುದು. ಆದರೆ ಈ ಸಂಹಿತೆಯೇ ಅಮಾನವೀಯವೆಂಬ ವಿಚಾರದಿಂದ ಹುಟ್ಟುವ ನ್ಯಾಯ, ಜಡ ಸಾಮಾಜಿಕ ಸಂಹಿತೆಯನ್ನು ಪಲ್ಲಟಗೊಳಿಸುತ್ತದೆ ; ಸಾಮಾಜಿಕನ್ಯಾಯವಾಗುತ್ತದೆ. ಒಂದು ಕುಟುಂಬದ ವಿಚಾರಕ್ಕೇ ಬರೋಣ. ಕುಟುಂಬವೊಂದು ಜಡಮೌಲ್ಯಗಳನ್ನೇ ಪರಮ ಶ್ರೇಷ್ಠವೆಂದು ಭಾವಿಸಿದೆಯೆಂದುಕೊಳ್ಳಿ. ಆಗ ಕುಟುಂಬದ ಸದಸ್ಯರಲ್ಲಿ ಯಾರೊಬ್ಬರು ಇದನ್ನು ಮೀರಿದರೂ ಅಪರಾಧವೆನ್ನಿಸುತ್ತದೆ. ಈ ಮೀರುವಿಕೆ ಅಮಾನವೀಯ ಮೌಲ್ಯಗಳ ವಿರುದ್ಧವಾಗಿದ್ದಾಗ ಇದೇ ನ್ಯಾಯಬದ್ಧವೆಂದು ತೀರ್ಮಾನಿಸುವುದು ಸಾಮಾಜಿಕ ನ್ಯಾಯ. ವಿಧವಾ ವಿವಾಹ ಇದಕ್ಕೊಂದು ಉದಾಹರಣೆ. ಇನ್ನು, ಸಾಮಾಜಿಕ ನ್ಯಾಯವೆನ್ನುವುದು ಆರ್ಥಿಕ ಸಂಗತಿಗಳನ್ನು ಒಳಗೊಳ್ಳುವುದಿಲ್ಲವೆ ಎಂಬ ಪ್ರಶ್ನೆ. ಒಳಗೊಳ್ಳುತ್ತದೆಯೆಂಬುದು ನನ್ನ ಅಭಿಪ್ರಾಯ. ಸಾಮಾಜಿಕ ನ್ಯಾಯವೆನ್ನುವುದು ಪ್ರಸ್ತುತ ಸಮಾಜದಲ್ಲಿ ಅಸ್ತಿತ್ವದಲ್ಲಿರುವ ಅನಪೇಕ್ಷಿತ ಅಮಾನವೀಯ ಮೌಲ್ಯಪ್ರೇರಿತ ನ್ಯಾಯ ವಿತರಣೆಗೆ ವಿರುದ್ಧವಾದುದರಿಂದ, ಇದರಲ್ಲಿ ಆರ್ಥಿಕ ಸಂಗತಿಗಳೂ ಸೇರುತ್ತವೆ. ಉದಾಹರಣೆಗೆ : ಭೂಸುಧಾರಣೆ. ಒಟ್ಟಿನಲ್ಲಿ ಸಾಮಾಜಿಕ ನ್ಯಾಯದ ಮೂಲ ಮುನ್ನೋಟವೇ ಹೊರತು ಹಿನ್ನೋಟವಲ್ಲ. ಹಿನ್ನೋಟವೇನಿದ್ದರೂ ಅರ್ಥಮಾಡಿಕೊಳ್ಳುವುದಕ್ಕೆ ; ಮುನ್ನೋಟ ಕ್ರಿಯಾತ್ಮಕತೆಗೆ.

ನಮ್ಮ ಸಮಾಜದಲ್ಲಿ 'ನೀತಿ'ಯ ಪಾತ್ರ ಮುಖ್ಯವಾದದ್ದು. ನ್ಯಾಯ ಕಲ್ಪನೆಯ ಹಿಂದೆ ನೀತಿ ಕಲ್ಪನೆ ಸದಾ ಇರುತ್ತದೆ. ಆದ್ದರಿಂದ ನೀತಿಯ ಬಗೆಗೆ ಒಬ್ಬ ವ್ಯಕ್ತಿಗೆ

ಇರುವ ಅಭಿಪ್ರಾಯ ಮತ್ತು ಗ್ರಹಿಕೆಗಳು ಆತನ ನ್ಯಾಯಾನ್ಯಾಯಾ ಗ್ರಹಿಕೆಗೆ ಆಧಾರವಾಗಿರುತ್ತವೆ. ಶಿವರಾಮಕಾರಂತರು ತಮ್ಮ "ಬಾಳ್ವೆಯೇ ಬದುಕು" ಕೃತಿಯಲ್ಲಿ 'ನೀತಿ'ಯ ಬಗ್ಗೆ ಹೀಗೆ ಹೇಳುತ್ತಾರೆ:

> "ನೀತಿ ಎಂಬುದು ವ್ಯಕ್ತಿಯ ನಡತೆಯನ್ನು ಅಳೆಯುವ ಒಂದು ನೋಟ;......... ನೀತಿ ಎಂಬುದು ಗುಂಪು ಗುಂಪುಗಳಲ್ಲಿ ಭಿನ್ನವಾಗಿದೆ. ಕಾಲಕಾಲಗಳಲ್ಲಿ ಭಿನ್ನವಾಗಿದೆ. ಒಂದು ಕಾಲದ ಜನಸಮುದಾಯದಲ್ಲಿ 'ನೀತಿ' ಎಂದು ಎಣಿಸಲ್ಪಡುವ ವರ್ತನೆಯು ಬೇರೊಂದು ಜನಸಮುದಾಯದಲ್ಲಿ 'ಅನೀತಿ' ಎಂದು ಪರಿಗಣಿಸಲ್ಪಡಬಹುದು,......... ಮನುಷ್ಯನ ನೀತಿಶಾಸ್ತ್ರ ಅವನ ಹಿನ್ನೆಲೆಯ ಮೇಲೆ ಹೊಂದಿದೆ. ಅದರಂತೆ ಆಯಾಯ ಕಾಲದ ಅವಶ್ಯಕತೆ, ಜನಾಭಿಪ್ರಾಯಗಳನ್ನೂ ಹೊಂದಿಕೊಂಡಿದೆ.........ಈ ಹಿಂದಿನ ನೋಟ ಏನೇ ಇರಲಿ, ಜನರಲ್ಲಿ ವಿಮರ್ಶೆ ಹೆಚ್ಚಾದರೆ, ಇಲ್ಲವೆ ಇನ್ನಾವುದಾದರೂ ಅವಶ್ಯ ಪ್ರಸಂಗ ಬಲವಂತ ಮಾಡಿದರೆ ಈ ನೀತಿಯ ನೋಟ ಬದಲಾಗಬಹುದು."

ಕಾರಂತರ ಈ ಅಭಿಪ್ರಾಯ ಸಂಸ್ಕೃತಿಯ ಚಲನಶೀಲತೆಯನ್ನು ಮನ್ನಿಸುತ್ತದೆ. ಯಾರು ಸಂಸ್ಕೃತಿಯನ್ನು ಸ್ಥಗಿತವೆಂದು ಭಾವಿಸುತ್ತಾರೊ ಅಂಥವರು ಮಾತ್ರ ಓಬಿರಾಯನ ಕಾಲದ್ದೆಲ್ಲವೂ ಸರಿ, ಸತ್ಯ, ನ್ಯಾಯ ಮತ್ತು ನೀತಿಯೆಂದು ನಂಬುತ್ತಾರೆ. ಕಾರಂತರು ಸಮಾಜದ ಪರಿವರ್ತನಶೀಲತೆಯನ್ನು ಒಪ್ಪುವುದರಿಂದ ಅವರ ನೀತಿ ಕಲ್ಪನೆ ಆರೋಗ್ಯಕಾರಿಯಾಗಿದೆ. ನೀತಿ ಎನ್ನುವುದರ ಮೊದಲ ಹಾಗು ಮುಖ್ಯ ಪಾಠ ಪ್ರಾರಂಭವಾಗುವುದು ಕುಟುಂಬದಲ್ಲಿ. ಆದ್ದರಿಂದ ಕುಟುಂಬದ ಮೌಲ್ಯ ವಿಚಾರಗಳಲ್ಲಿ ಸಾಹಿತಿಗೆ ಎಂಥ ನ್ಯಾಯ-ನೀತಿಗಳ ಕಲ್ಪನೆಯಿದೆಯೆಂಬ ವಿಶ್ಲೇಷಣೆ ಆತನ ಸಾಮಾಜಿಕತೆಗೆ, ಆ ಮೂಲಕ ಆತ ಒಪ್ಪುವ ಸಾಮಾಜಿಕ ನ್ಯಾಯದ ನೆಲೆಗೆ ಒಂದು ಉದಾಹರಣೆಯಾಗಬಲ್ಲದು.

ಈ ಹಿನ್ನೆಲೆಯಲ್ಲಿ ಕಾರಂತರ ಕಾದಂಬರಿಗಳಲ್ಲಿ ಬರುವ ವ್ಯಕ್ತಿ ಮತ್ತು ಕುಟುಂಬದ ಸಂಬಂಧ ಹಾಗೂ ಅಲ್ಲಿಂದ ಹೊರಡುವ ಸಾಮಾಜಿಕ ನ್ಯಾಯವನ್ನು ನೋಡಬಹುದು.

ಬ್ರಹ್ಮಚರ್ಯವೆನ್ನುವುದು ಭಾರತೀಯ ಸಮಾಜದಲ್ಲಿ ಗೌರವಾರ್ಹ ಸಂಗತಿಯಾಗಿದೆ. ಮನುಷ್ಯ ತನ್ನ ಕಾಮನೆಗಳನ್ನು ಗೆಲ್ಲುವ ಸಾಧನವಾಗಿ ಬ್ರಹ್ಮಚರ್ಯವನ್ನು ರೂಢಿಸಿಕೊಳ್ಳಬೇಕೆಂದು ಸಂತ ಮನಸ್ಸುಗಳೆಲ್ಲ ಆಶಿಸುತ್ತವೆ. ಇದಕ್ಕೆ ಮಹಾತ್ಮಗಾಂಧಿಯವರೇ ಸಾಕ್ಷಿ. ಬ್ರಹ್ಮಚರ್ಯ ಮೀರುವುದು ಒಂದು ಸಾಮಾಜಿಕ ನ್ಯಾಯವೆನ್ನಿಸದಿದ್ದರೂ ಮನುಷ್ಯನ ಅಂತರಂಗಿತ ಆಸೆ-ಕಾಮನೆಗಳಿಗೆ ಬ್ರಹ್ಮಚರ್ಯವೊಂದೇ ಪರಿಹಾರವೆನ್ನುವುದು ಸಾಮಾಜಿಕ ಅನ್ಯಾಯ. ಯಾಕೆಂದರೆ ವ್ಯಕ್ತಿಯೊಬ್ಬ ತನಗೆ ತಾನು ಬ್ರಹ್ಮಚರ್ಯ ಆಚರಿಸುವುದು ಬೇರೆ, ಅದನ್ನು ಒಂದು ಸಾಮಾಜಿಕ ವಿಧಾನವೆಂದು ಪ್ರತಿಪಾದಿಸುವುದು ಬೇರೆ. ಅದನ್ನು ಸಾಮಾಜಿಕ ವಿಧಾನವೆಂದು ಪರಿಗಣಿಸಿದಾಗ ಸಾಮಾಜಿಕ

ನ್ಯಾಯಾನ್ಯಾಯದ ಚರ್ಚೆ ಅಗತ್ಯವಾಗುತ್ತದೆ. ಈ ಬಗ್ಗೆ ಕಾರಂತರ ಅನುಭವವನ್ನೇ ನೋಡೋಣ. "ಹುಚ್ಚು ಮನಸ್ಸಿನ ಹತ್ತು ಮುಖಗಳು" ಕೃತಿಯಲ್ಲಿ ಅವರು ಒಂದು ಪ್ರಸಂಗವನ್ನು ನಿರೂಪಿಸಿದ್ದಾರೆ. ಕಾರಂತರ ಸ್ನೇಹಿತನೊಬ್ಬ ವೇಶ್ಯಾಕುಲದಲ್ಲಿ ಹುಟ್ಟಿದವನು. ಆತನ ತಂಗಿಗೆ ಮದುವೆ ಮಾಡಿಸುವ ಸಂಕಲ್ಪ ಮಾಡಿದ ಕಾರಂತರು ಗಂಡುಗಳಿಗೆ ಹುಡುಕಿ ಸುಸ್ತಾಗುತ್ತಾರೆ. ಅತ್ಯಂತ ನಿರಾಶೆಯಿಂದ ಗಾಂಧೀಜಿಯವರಿಗೆ ಪತ್ರ ಬರೆದಾಗ ಇಂಥ ಹುಡುಗಿಯರು ಜೀವನ ಪರ್ಯಂತ ಬ್ರಹ್ಮಚರ್ಯ ನಡೆಸಲೆಂಬ ಪರಿಹಾರ ಬಂತು. ಆಗ ಕಾರಂತರಿಗೆ 'ತೀರಾ ಬೇಸರವಾಯಿತು. ಕಣ್ಣೀರು ಬಂದಿತು. ಮನುಷ್ಯ ಸ್ವಭಾವದ ಪರಿಚಯವೇ ಗಾಂಧೀಜಿಗಿಲ್ಲ' ಎನ್ನಿಸಿತು. ಇಲ್ಲಿಯೇ ಗಾಂಧೀಜಿ ಜನದೂರ ವ್ಯಕ್ತಿಯಾಗುತ್ತಾರೆ. ಕಾರಂತರು ಜೀವ ವಿರೋಧಿಯಾಗದೆ ಬೆಳೆಯುತ್ತಾರೆ.

ಇಂಥ ನಿಲುವಿನ ವಿಶ್ಲೇಷಣೆಯೆಂಬಂತೆ ಕಾರಂತರ 'ಸಮೀಕ್ಷೆ' ಕಾದಂಬರಿ ರೂಪು ಗೊಂಡಿದೆ. ಬಾಳಿನಲ್ಲಿ ಯಾವುದು ಸಾರ್ಥಕ, ಯಾವುದು ನಿರರ್ಥಕವೆಂಬ ಸಮೀಕ್ಷೆಗೆ ತೊಡಗುವ ಈ ಕಾದಂಬರಿ ಬ್ರಹ್ಮಚರ್ಯವು ಒಂದು ಸಾಮಾಜಿಕ ಸಂಹಿತೆಯೆಂಬಂತೆ ಭಾವಿಸುತ್ತ, ಬದುಕುತ್ತ ಬಂದ ವಿಧಾನವನ್ನು ಪ್ರಶ್ನಿಸುವುದರಿಂದ ವಿಶಾಲಾರ್ಥದಲ್ಲಿ ಸಾಮಾಜಿಕ ನ್ಯಾಯ ವಿಶ್ಲೇಷಣೆಗೂ ಸಂಬಂಧಿಸಬಹುದು. ಕಾದಂಬರಿಯ ನಾಯಕ ಶ್ರೀನಿವಾಸ ಬ್ರಹ್ಮಚರ್ಯ ಪರಿಪಾಲನೆಗೆ ಬದ್ಧನಾಗಿ ಬದುಕಲು ಹೊರಟು ವಿಫಲನಾಗಿ ಅನಿವಾರ್ಯ ಸ್ಥಿತಿಯಲ್ಲಿ ವಿವಾಹವಾಗುತ್ತಾನೆ. ಈತನ ಬದುಕಿನ ಬೆಳವಣಿಗೆಯಲ್ಲಿ ರೂಪು ಗೊಳ್ಳುವ ಬ್ರಹ್ಮಚರ್ಯದ ಸಮೀಕ್ಷೆ ಬಾಳಿನ ಒಂದು ವಿಧಾನದ ಸಮೀಕ್ಷೆಯೂ ಆಗುತ್ತದೆ. ಇದು ನೇರವಾಗಿ ಸಾಮಾಜಿಕ ನ್ಯಾಯದ ಸಂಗತಿಯಲ್ಲವಾದರೂ ಜೀವವಿರೋಧಿಯಾದ ಕೃತಕ ತಡೆಗಳನ್ನು ಧಿಕ್ಕರಿಸುವ ನಿಲುವು ಸಾಂಪ್ರದಾಯಿಕ ಸಂತ ನೀತಿಗೆ ಸವಾಲಾಗು ವುದರಿಂದ ಸಾಮಾಜಿಕ ನ್ಯಾಯ ಗ್ರಹಿಕೆಗೊಂದು ದಾರಿಯಾಗುತ್ತದೆ. ಇದು ಮತ್ತಷ್ಟು ಪ್ರಖರವಾಗಿ ವ್ಯಕ್ತವಾಗುವುದು 'ಸನ್ಯಾಸಿಯ ಬದುಕು' ಕಾಬಂಬರಿಯಲ್ಲಿ. ಈ ಕಾದಂಬರಿಯು ಶಂಕರರಾಯರ ಸನ್ಯಾಸಿ ಬದುಕಿನ ಬೆನ್ನಿಗೇ ಇರುವ ಇತಿಹಾಸ ಕ್ರೂರ ವ್ಯಂಗ್ಯವಾಗಿದೆ. ಹೆಂಡತಿ ಮಕ್ಕಳ ದಾರುಣ ಬದುಕು ಸನ್ಯಾಸಿಯ ಬದುಕಿನ ಅನ್ಯಾಯಕ್ಕೆ ಸಾಕ್ಷಿಯಾಗಿದೆ. ಸಮಾಜದ ಅವಿಭಾಜ್ಯ ಅಂಗವಾದ ವ್ಯಕ್ತಿಗಳು ತಮಗೆ ತಾವು ಯಾವುದೇ ನೆಲೆ ತಲುಪಲು ಸ್ವತಂತ್ರರಾದರೂ, ಸಾಮಾಜಿಕ ಸಂಸ್ಥೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡ ಮೇಲೆ ಅದಕ್ಕೆ ನ್ಯಾಯ ಸಲ್ಲಿಸುವ ಹೊಣೆಯನ್ನು ಅರಿಯಬೇಕು. ಹಾಗೆ ಮಾಡದೆ ಇದ್ದಾಗ ಅದೊಂದು ಸಾಮಾಜಿಕ ಅನ್ಯಾಯ. 'ಸನ್ಯಾಸಿಯ ಬದುಕು' ಇಂಥ ಅನ್ಯಾಯವನ್ನು ದಾಖಲಿಸುವುದರಿಂದ ಸಾಮಾಜಿಕ ನ್ಯಾಯವನ್ನೂ ಧ್ವನಿಸಿದಂತಾಗಿದೆ.

'ಕನ್ಯಾಬಲಿ' ಕಾದಂಬರಿ ಸಾಮಾಜಿಕ ಅನ್ಯಾಯವನ್ನು ನೇರವಾಗಿ ಬಯಲಿ ಗೆಳೆಯುವ ಕೃತಿ. ಧರ್ಮ ಭಾರತೀಯ ಬದುಕಿನಲ್ಲಿ ಒಂದು ಜೀವನ ವಿಧಾನವಾಗಿಯೇ

ರೂಪುಗೊಂಡಿದೆ. ಅದು ಪ್ರತ್ಯಕ್ಷ ಅಥವಾ ಪರೋಕ್ಷವಾಗಿ ತನ್ನ ಪ್ರಭಾವವನ್ನು ಸಮಾಜದ ಮೇಲೆ ಬೀರಿ ಬೇರುಬಿಟ್ಟಿದೆ. ಈ ಮೂಲದಿಂದಲೇ ನೀತಿ-ನ್ಯಾಯದ ನಿರ್ಧಾರಗಳೂ ಆಗುತ್ತವೆ; ವ್ಯಕ್ತಿಯ ಸುತ್ತ ಸಾಮಾಜಿಕ ನಿಯಮಗಳು ರೂಪುಗೊಂಡು ನಿಯಂತ್ರಿಸುತ್ತ ಬಂದಿವೆ. ಇದರ ಕ್ರೌರ್ಯಕ್ಕೆ 'ವೈಧವ್ಯ' ಉತ್ತಮ ಸಾಕ್ಷಿ. 'ಕನ್ಯಾಬಲಿ'ಯು ಬಾಲವಿಧವೆ ಮಾಲತಿಯ ಮೂಲಕ ಇಂಥ ಕ್ರೌರ್ಯದ ಕರಾಳ ಮುಖವನ್ನು ಸಮರ್ಥವಾಗಿ ದಾಖಲಿಸುತ್ತ ಸಾಮಾಜಿಕ ಅನ್ಯಾಯವನ್ನು ದಿಟ್ಟವಾಗಿ ಬಯಲಿಗೆಳೆಯುತ್ತದೆ. ಮಾಲತಿ ತನ್ನದಲ್ಲದ ತಪ್ಪಿಗೆ ಬಲಿಯಾಗುತ್ತಾಳೆ. ಪ್ರಫುಲ್ಲನನ್ನು ಪ್ರೇಮಿಸಿ ಮದುವೆಯಾಗಲಿಚ್ಛಿಸಿದರೂ ಸಮಾಜ ಅಡ್ಡಗಾಲು ಹಾಕಿ ಅದೂ ಮಣ್ಣು ಗೂಡುತ್ತದೆ. ಕಡೆಗೆ ಮಾಲತಿ ವೇಶ್ಯೆಯಾಗುತ್ತಾಳೆ.ವೈಧವ್ಯದ ಬಗೆಗೆ ನಮ್ಮ ಸಮಾಜದ ದೃಷ್ಟಿ ಎಷ್ಟು ಅಮಾನವೀಯವೆಂಬ ಅನುಭವ ಈ ಕೃತಿಯಿಂದ ದೊರಕುತ್ತದೆ. ಸಾಮಾಜಿಕ ಅನಿಷ್ಟದ ದುರಂತ ಫಲವನ್ನು ದಾಖಲಿಸುವಲ್ಲಿ ಇದೊಂದು ಪ್ರಗತಿಪರ ಕೃತಿಯಾಗಿದೆ.

ಪುರುಷ ಪ್ರಧಾನ ಸಮಾಜದಲ್ಲಿ ನಡೆಯುವ ಸ್ತ್ರೀ ಶೋಷಣೆಯ ಚಿತ್ರವೂ ಕಾರಂತರಲ್ಲಿ ಬಂದಿದೆ. ನಾನು ಮೊದಲೇ ಹೇಳಿದಂತೆ ಇದು ಕುಟುಂಬವನ್ನು ಕೇಂದ್ರವಾಗಿಟ್ಟುಕೊಂಡಿದೆ. 'ಕನ್ಯಾಬಲಿ' ಸ್ತ್ರೀ ಶೋಷಣೆಯ ಒಂದು ಮುಖವಾದರೆ 'ನಂಬಿದವರ ನಾಕ ನರಕ' ಇನ್ನೊಂದು ಮುಖವನ್ನು ತೋರಿಸುತ್ತದೆ. ಗಂಡನ ಸುಖದಿಂದ ವಂಚಿತಳಾದ ಸತ್ಯಭಾಮೆಯ ಕತೆ ಇದು. ಗಂಡನ ವ್ಯಭಿಚಾರಗಳ ಬಗ್ಗೆ ಯೋಚಿಸದ ಸಮಾಜ, ಇವಳ ಬಗ್ಗೆ ಮಾತ್ರ ಕತೆ ಕಟ್ಟುತ್ತದೆ. ಇದಕ್ಕೆ ಇರುವ ಒಂದೇ ಆಧಾರವೆಂದರೆ ಆತ ಗಂಡಸು, ಈಕೆ ಹೆಂಗಸು. ಪುರುಷ ಪ್ರಧಾನ ಸಮಾಜದಲ್ಲಿ ಹೇಗೆ ಹೆಣ್ಣಿಗೊಂದು ನ್ಯಾಯ ಗಂಡಿಗೊಂದು ನ್ಯಾಯ ನಿರ್ಧಾರ ನಡೆಯುತ್ತದೆಯೆಂಬುದಕ್ಕೆ ಸತ್ಯಭಾಮೆಯ ಬದುಕು ಬೆಳಕು ಚೆಲ್ಲುತ್ತದೆ. ಇಡೀ ಕೃತಿಯಲ್ಲಿ ಕಾರಂತರ ಸಹಾನುಭೂತಿ ಸತ್ಯಭಾಮೆಯ ಕಡೆಗಿದೆ.

ಮೇಲಿನ ವಿವೇಚನೆಯಿಂದ ಒಂದು ತೀರ್ಮಾನಕ್ಕೆ ಬರಬಹುದು. ಕಾರಂತರು ಸಾಂಪ್ರದಾಯಿಕ ಸಾಮಾಜಿಕ ಸಂಹಿತೆಯ ಉಲ್ಲಂಘನೆಯಲ್ಲಿ ಸಾಮಾಜಿಕ ನ್ಯಾಯವನ್ನು ಕಾಣುತ್ತಾರೆ. ಅರ್ಥಪೂರ್ಣ ಹಾಗೂ ಆರೋಗ್ಯಕರ ಕಾಮಸಂಬಂಧಗಳ ಮೂಲಕವೂ ಇದನ್ನು ಮನಗಾಣಿಸಲು ಯತ್ನಿಸುತ್ತಾರೆ. ಇದಕ್ಕೆ ಅವರ ಅನೇಕ ಕಾದಂಬರಿಗಳಲ್ಲಿ ಹೇರಳ ವಿವರಗಳು ಸಿಗುತ್ತವಾದರೂ ಇಲ್ಲಿ ಅವೆಲ್ಲದರ ವಿಶ್ಲೇಷಣೆ ಅಗತ್ಯವಿಲ್ಲ.

ಕಾರಂತರ ಸಾಮಾಜಿಕ ನ್ಯಾಯ ಕಲ್ಪನೆಯನ್ನು ಗುರುತಿಸಲು ಸಹಾಯಕವಾಗುವ ಬೇರೆ ರೀತಿಯ ಕೃತಿಗಳೂ ಇವೆ. ಅವುಗಳಲ್ಲಿ 'ಚೋಮನ ದುಡಿ' ಮುಖ್ಯವಾದುದು. ಹೊಲೆಯನಾಗಿ ಹುಟ್ಟಿದ 'ಆಕಸ್ಮಿಕ'ದಿಂದ ಭೂಮಿ ಪಡೆಯಲಾಗದ ಸಾಮಾಜಿಕ

ವಂಚನೆಗೊಳಗಾದ ಚೋಮ ತನ್ನದೇ ಸ್ವಂತ ಹೊಲ ಪಡೆಯಲು ಪ್ರಯತ್ನಿಸಿ ದುರಂತಕ್ಕೀಡಾಗುವ ವಸ್ತುವುಳ್ಳ ಈ ಕಾದಂಬರಿ ಸಾಮಾಜಿಕ–ಆರ್ಥಿಕ ಸಮಸ್ಯೆಯನ್ನು ಒಟ್ಟೊಟ್ಟಿಗೇ ಚಿತ್ರಿಸುತ್ತದೆ. ಇದಕ್ಕೆ ಚೋಮನ ಪಾತ್ರ ಸ್ವರೂಪವೂ ಕಾರಣವಾಗಿದೆ. ಹುಟ್ಟಿನ ಕಾರಣಕ್ಕಾಗಿ ಹೊಲದಿಂದ ವಂಚಿತನಾಗುವುದರಿಂದ ಆತನ ಸಮಸ್ಯೆಗೆ ಪ್ರಖರ ಸಾಮಾಜಿಕ ಆಯಾಮ ಮತ್ತು ಆರ್ಥಿಕ ನೆಲೆಗಳು ಒಟ್ಟಿಗೇ ಲಭ್ಯವಾಗಿವೆ. ಕಾದಂಬರಿ ಯುದ್ದಕ್ಕೂ ಚೋಮನಿಗೆ ಭೂಮಿ ಲಭ್ಯವಾಗಬೇಕಾದ್ದು ನ್ಯಾಯವೆಂಬ ಭಾವ ಬೆಳೆಯುತ್ತದೆ. ಆದರೆ ಊಳಿಗಮಾನ್ಯ ಪದ್ಧತಿಯ ಪ್ರತಿನಿಧಿಯಾದ ಸಂಕಪ್ಪಯ್ಯ ಆದರ ಎಲ್ಲ ಸೂಕ್ಷ್ಮಗಳನ್ನೂ ಪ್ರಕಟಿಸುವ ಪಾತ್ರವಾಗುವುದಿಲ್ಲ. ಆತನಿಗೆ ಹೊಲ ಕೊಡುವ ಆಸೆಯಿದೆ; ಆದರೆ ಮನೆಯಲ್ಲಿರುವ ಮುದುಕಿಯ ತಡೆ ಇದೆ. ಮುದುಕಿ ಸಾಂಪ್ರದಾಯಿಕತೆಯ ಸಂಕೇತವಾದರೆ ಸಂಕಪ್ಪಯ್ಯ ಆದರ ಸುಳಿಯಲ್ಲಿರುವ ವ್ಯಕ್ತಿಯಾಗಿದ್ದಾನೆ. ಸಂಕಪ್ಪಯ್ಯನ ನಿರ್ಧಾರ ಮತ್ತು ಚೋಮನ ದುರಂತಗಳಲ್ಲಿ ಮುಖ್ಯವಾಗಿ ಎದ್ದು ಕಾಣುವ ಘಟಕವೆಂದರೆ ಕುಟುಂಬವೇ ಆಗಿದೆ. ಚೋಮನ ದುರಂತಕ್ಕೆ ಹೊಲ ದಕ್ಕದ ನಿರಾಶೆಯೊಂದಿಗೆ ತನ್ನ ಕುಟುಂಬದ ಸದಸ್ಯರ ವರ್ತನೆ, ಸಾವು, ಅನುಭವಿಸಿದ ಅತ್ಯಾಚಾರಗಳೂ ಕಾರಣವಾದಂತೆ, ಸಂಕಪ್ಪಯ್ಯನಿಗೆ ಭೂಮಿಯ ವಿಷಯ ಒಂದು ಕೌಟುಂಬಿಕ ವಿಷಯವಾಗುತ್ತದೆ. ಆದ್ದರಿಂದಲೇ ಮುದುಕಿಯ ಮನಸ್ಸಿಗೆ ವಿರುದ್ಧವಾಗಿ ನಡೆಯುವುದಿಲ್ಲ. ಆದರೆ ಈ ಕುಟುಂಬ ಹೊರಗಿನ ಸಾಮಾಜಿಕ - ಆರ್ಥಿಕ ಅಂಶಗಳ ಸಾಂದ್ರ ಸ್ಥಳವೆಂಬುದು ಸತ್ಯ.

ಕಾರಂತರಿಗೆ, ಚೋಮನಿಗೆ ಭೂಮಿ ದಕ್ಕಬೇಕಾದ್ದು ಸಾಮಾಜಿಕ ನ್ಯಾಯವೆಂಬ ಭಾವನೆಯಿದೆ. ಆದರೆ ಈ ಸಾಮಾಜಿಕ ನ್ಯಾಯ ಕಲ್ಪನೆಯ ಹಿಂದೆ ವೈಚಾರಿಕ ಸೂತ್ರಕ್ಕೆ ಬದಲಾಗಿ ಸಹಾನುಭೂತಿಯ ಸ್ಪರ್ಶವಿದೆ. ಆದ್ದರಿಂದ ಸಮಾಜದ ಆರ್ಥಿಕ ಬೆಳವಣಿಗೆ, ಸಾಮಾಜಿಕ ವಿಕಾಸ ಮತ್ತು ಇವುಗಳು ಉಂಟುಮಾಡಿದ ಕ್ರಮಬದ್ಧ ಪರಿಣಾಮಗಳು ಅವರ ಶೋಧನೆಗೆ ಸಾಧನವಾಗುವುದಿಲ್ಲ. ಅವರ ಶೋಧನೆಗೆ ಸಹಾನುಭೂತಿಯೇ ಸಾಧನ ಮತ್ತು ಸಾಧನೆ. ಹೀಗಾಗಿ ಕಾದಂಬರಿಯು ವ್ಯಕ್ತಿ ಮತ್ತು ಕುಟುಂಬದ ಪರಿವಲಯದಲ್ಲಿ ತನ್ನ ಭಾವನೆಗಳನ್ನು ಪ್ರಕಟಿಸುತ್ತದೆ. ಈ ಪರಿವಲಯಕ್ಕೆ ಇದ್ದಿರಬಹುದಾದ ಸಾಮಾಜಿಕ–ಆರ್ಥಿಕ ಆಯಾಮಗಳನ್ನು ಗೌಣವಾಗಿಸುತ್ತದೆ. ಇದು ಕಾರಂತರ ಬರವಣಿಗೆಯ ರೀತಿಯೂ ಹೌದು. ಏನೇ ಆದರೂ ಚೋಮನಂಥವರ ಬಗ್ಗೆ ಸಹಾನುಭೂತಿ ರೂಪಿಸುವಲ್ಲಿ ಈ ಕೃತಿಯ ಪಾತ್ರವನ್ನು ಮೆಚ್ಚಬೇಕು.

ಒಂದೇ ಮಾತಿನಲ್ಲಿ ಹೇಳಬೇಕೆಂದರೆ–ಚೋಮನಿಗೆ ಭೂಮಿ ದಕ್ಕಬೇಕಾದ್ದು ಜನ್ಮಸಿದ್ಧ ಹಕ್ಕು ಎಂಬ ನಿಲುವಿಗಿಂತ, ಆತನಿಗದು ದಕ್ಕಬಾರದೆ ಎಂದು ಮಿಡಿಯುವ ಅಂತಃಕರಣ ಈ ಕಾದಂಬರಿಯ ಹಿನ್ನೆಲೆಗಿದೆ.

ಆದರೆ, ಆರ್ಥಿಕ ವಿಚಾರಗಳಲ್ಲಿ ಕಾರಂತರ ನಿಲುವು ಸ್ಪಷ್ಟವಾಗುವುದು 'ನಾವು ಕಟ್ಟಿದ ಸ್ವರ್ಗ' ಮತ್ತು 'ಗೆದ್ದ ದೊಡ್ಡಸ್ತಿಕೆ' ಕಾದಂಬರಿಗಳಲ್ಲಿ. 'ನಾವು ಕಟ್ಟಿದ ಸ್ವರ್ಗ' ಕಾದಂಬರಿಯಂತು ಟ್ರೇಡ್ ಯೂನಿಯನ್‌ಗಳ ತೆಗಳುವಿಕೆಗಾಗಿಯೇ ಇದ್ದಂತಿದೆ. ಟ್ರೇಡ್ ಯೂನಿಯನ್‌ಗಳೆಲ್ಲ ಚೆನ್ನಾಗಿ ಕೆಲಸ ಮಾಡುತ್ತವೆಯೆಂದು ಹೇಳಲಾಗದಿದ್ದರೂ, ಆ ಕ್ರಿಯಾಶೀಲತೆ ನಿರ್ದಿಷ್ಟ ಸೈದ್ಧಾಂತಿಕ ತಳಹದಿಯನ್ನು ಅವಲಂಬಿಸಿರುವುದನ್ನು ಅಲ್ಲಗಳೆಯುವಂತಿಲ್ಲ. ಕಾರಂತರ ಸಿಟ್ಟು ಇರುವುದು ಈ ಸೈದ್ಧಾಂತಿಕ ನೆಲೆಯ ಮೇಲೆ. ಆದ್ದರಿಂದಲೇ ಅವರಿಗೆ ಆಕ್ರೋಶ. ಅನೇಕ ಕಾದಂಬರಿಗಳಲ್ಲಿ ಶೋಧನಾತ್ಮಕ ವಿಧಾನ ಹಿಡಿದ ಕಾರಂತರು ಇಲ್ಲಿ ಅದನ್ನು ಕಳೆದುಕೊಂಡಿದ್ದಾರೆನ್ನಿಸುತ್ತದೆ. ಇದು ಮತ್ತಷ್ಟು ಸ್ಪಷ್ಟವಾಗುವುದು 'ಗೆದ್ದ ದೊಡ್ಡಸ್ತಿಕೆ'ಯಲ್ಲಿ. ಕಾರಂತರ ನಿಲುವನ್ನು 'ಮುನ್ನುಡಿ'ಯೇ ಸಾರಿ ಹೇಳುತ್ತದೆ. ಅಲ್ಲಿ ಭೂ ಸುಧಾರಣೆಯ ತತ್ವವನ್ನೇ ಪ್ರಶ್ನಿಸಲಾಗಿದೆ. ಒಬ್ಬರಿಂದ ಭೂಮಿಯನ್ನು 'ಕಿತ್ತುಕೊಳ್ಳುವುದಕ್ಕೆ' ಏನು ಹಕ್ಕಿದೆ ಎಂಬಂಥ ಧೋರಣೆ ಇಲ್ಲಿದೆ. ಈ ಸಂದರ್ಭದಲ್ಲಿ ಹಿಂದಕ್ಕೆ ಹೋಗಿ ಚೋಮನ ಒಳಹೊಕ್ಕಾಗ ಮತ್ತೊಮ್ಮೆ ಸ್ಪಷ್ಟವಾಗುತ್ತದೆ–ಅಲ್ಲಿರುವುದು ಸಹಾನುಭೂತಿಯೇ ಹೊರತು ಬೇರೇನೂ ಅಲ್ಲವೆಂದು. ಭೂಮಿ 'ಕಿತ್ತುಕೊಳ್ಳಲು' ಗೇಣಿದಾರರಿಗೆ ಹಕ್ಕಿಲ್ಲದೆ ಎಂಬಂಥ ನಿಲುವಿಗೆ ಉತ್ತರ ಈ ಭಾರಿ ಜಮೀನ್ದಾರರಿಗೆ ಇಷ್ಟೆಲ್ಲ ಭೂಮಿ ಎಲ್ಲಿಂದ ಬಂತು? ಅನೇಕರಿಗೆ ಏನೂ ಇಲ್ಲದಿರುವಾಗ ಒಬ್ಬ ಮಾತ್ರ ಎಲ್ಲವನ್ನೂ ಪಡೆಯುವುದು ಮಾತ್ರ ಹಕ್ಕೇನು? – ಇಂಥ ಪ್ರಶ್ನೆ ಬಹುಶಃ ಕಾರಂತರಂಥವರಿಗೆ ಅಸಂಬದ್ಧವೆನ್ನಿಸಬಹುದು. ಆದರೆ ಬಂಡವಾಳಶಾಹಿ, ಪುರೋಹಿತಶಾಹಿಗಳ ಹಿಡಿತದಲ್ಲಿ ಸೊರಗುತ್ತಿರುವ ನಮ್ಮ ಸಮಾಜವನ್ನು ಸರಿಯಾಗಿ ಅರ್ಥ ಮಾಡಿಕೊಳ್ಳುವ ಸೈದ್ಧಾಂತಿಕತೆಗೆ ಇದರ ಸುಸಂಬದ್ಧತೆ ಅರ್ಥವಾಗುತ್ತದೆ. ಮಾನವೀಯತೆಯೆನ್ನುವುದು ಕೇವಲ ಕರುಣೆಯಲ್ಲ. ಸಮಾಜದ ಒಟ್ಟು ವಿಕಾಸವನ್ನು ವೈಜ್ಞಾನಿಕವಾಗಿ ಅರ್ಥಮಾಡಿಕೊಳ್ಳುವುದರಿಂದ ಹುಟ್ಟುವ ಸಮಾಜ ಬದಲಾವಣೆಯ ತುರ್ತಿನಲ್ಲಿ ಮಾನವೀಯತೆಯಿದೆ. ಇಂಥ ಮಾನವೀಯತೆ ಸಮಾಜದ ಶ್ರೇಣೀಕೃತ ಸ್ಥಿತಿಯನ್ನು ಅರ್ಥಮಾಡಿಕೊಂಡು ನೊಂದವರ ಪರವಾಗಿರುತ್ತದೆ. ಆದರೆ ಕಾರಂತರು ಆರ್ಥಿಕ ವಿಚಾರಗಳು ಬಂದಾಗ ಯಥಾಸ್ಥಿತಿವಾದಿಯಾಗುತ್ತಾರೆ. ಇಲ್ಲಿ ಅವರ ಸಾಮಾಜಿಕ ನ್ಯಾಯ ಕಲ್ಪನೆ, ಕೇವಲ ಸಾಂಪ್ರದಾಯಿಕ ನ್ಯಾಯ ಕಲ್ಪನೆಯಾಗುತ್ತದೆ.

ಒಟ್ಟಿನಲ್ಲಿ ಹೇಳುವುದಾದರೆ ಕಾರಂತರು ಅರ್ಥಪೂರ್ಣ ಕಾಮಸಂಬಂಧಗಳ ಬಗ್ಗೆ 'ಕ್ರಾಂತಿಕಾರಿ' ನಿಲುವು ತಾಳುತ್ತಾರೆ. ಆದರೆ ಆರ್ಥಿಕ ವಿಚಾರಗಳಲ್ಲಿ ಯಥಾಸ್ಥಿತಿವಾದಿಯಾಗುತ್ತಾರೆ. ಮನುಷ್ಯನ ಮನಸ್ಸಿಗೆ ನೇರವಾಗಿ ಸಂಬಂಧಿಸಿದ ಕಾಮನೆಯಂಥ ವಿಚಾರಗಳಲ್ಲಿ ನಮ್ಮ ಬಹುಪಾಲು ಲೇಖಕರು 'ಕ್ರಾಂತಿಕಾರ'ರಾಗಲು ಹಿಂದೇಟು

ಹಾಕುವುದಿಲ್ಲ. ಆದರೆ ಸಮಾಜ ಬದಲಾವಣೆಗೆ ಚಾಲನೆ ಕೊಡುವ ಆರ್ಥಿಕ ಸೈದ್ಧಾಂತಿಕತೆಯಲ್ಲಿ ಸಾಂಪ್ರದಾಯಿಕ ನೀತಿಯಿಂದ ನಿಯಂತ್ರಿತರಾಗುತ್ತಾರೆ. ಕಾರಂತರ ಸಾಮಾಜಿಕ ನ್ಯಾಯ ಕಲ್ಪನೆಗೂ ಈ ಮಿತಿಯಿದೆ.

# ಕಾರಂತರ ಕಾದಂಬರಿಗಳಲ್ಲಿ ರಾಜಕಾರಣದ ನೆಲೆಗಳು

ಡಿ. ಎಸ್. ನಾಗಭೂಷಣ

ಮುಂಬೈನ ಗೆಳೆಯರೊಬ್ಬರು ಶಿವರಾಮ ಕಾರಂತರನ್ನು ಏಕವ್ಯಕ್ತಿ ವಿಶ್ವವಿದ್ಯಾನಿಲಯ ಅಂತ ಕರೆದಿದ್ದಾರೆ. ಕಲಾವಿದ ಹೆಬ್ಬಾರರು ತಮ್ಮ "a full view" ಅನ್ನೋ ಕೃತೀನಲ್ಲಿ ಕಾರಂತರಿಗೆ ಮೂರೋ ನಾಲ್ಕೋ ಮುಖಗಳನ್ನು, ನಾಲ್ಕೋ ಐದೋ ಕೈಗಳನ್ನು ಬಿಡಿಸಿ, ಎದೆ ಮೇಲೆ ಜನಿವಾರದಂತೆ ಕಾಣೋ ದಾರವನ್ನೂ ತೂಗುಬಿಟ್ಟಿದ್ದಾರೆ. ಅದೇನೇ ಇರಲಿ, ಕಾರಂತರದ್ದು ಥರಾವರಿ ವ್ಯಕ್ತಿತ್ವ ಅನ್ನೋದನ್ನ ಈಗ ಹೊಸ ವಿಷಯ ಅನ್ನೋ ಹಾಗೆ ಹೇಳಬೇಕಾಗಿಲ್ಲ. ಅವರ ಬದುಕು ಮತ್ತು ಬರಹ ಅದಕ್ಕೆ ಸಾಕ್ಷೀಭೂತವಾಗಿವೆ.

ಕಾರಂತರ ಈ ಥರಾವರಿ ವ್ಯಕ್ತಿತ್ವದ ಒಂದು ಮುಖ ರಾಜಕಾರಣದಲ್ಲಿನ ಅವರ ಆಸಕ್ತಿ. ರಾಜಕಾರಣಕ್ಕೂ ಕಾರಂತರಿಗೂ ಹಳೇ ನೆಂಟು. ಸ್ವಾತಂತ್ರ್ಯ ಪೂರ್ವದ ಗಾಂಧೀಜಿಯ ಖಾದಿ ಚಳುವಳಿಯಿಂದ ಹಿಡಿದು ಇತ್ತೀಚಿನ ಚಿಕ್ಕಮಗಳೂರು ಉಪಚುನಾವಣೆವರೆಗೂ ರಾಜಕಾರಣದಲ್ಲಿ ಕಾರಂತರ ಆಸಕ್ತಿ ನಿರಂತರವಾಗಿ ಹರಿದು ಬಂದಿದೆ. ಕಾರಂತರು ಕಾಲೇಜು ಬಿಟ್ಟಿದ್ದು ಸ್ವಾತಂತ್ರ್ಯ ಚಳುವಳಿಯಲ್ಲಿ ಧುಮುಕಲೆಂದೇ ಬರೆಯಲಾರಂಭಿಸಿದ್ದೂ ಸಮಾಜವನ್ನು ಬದಲಾಯಿಸಬೇಕೆಂಬ ಹಂಬಲದಿಂದಲೇ. ಗಾಂಧೀಜಿ ಭೂತ ಅವರ ಬೆನ್ನು ಹತ್ತಿತ್ತು. ಖಾದಿ ಚಳುವಳಿ, ಹರಿಜನೋದ್ಧಾರ ಎಂದು ತಲೆ ಮೇಲೆ ಖಾದಿ ಬಟ್ಟೆಯನ್ನೂ ತಲೆಯೊಳಗೆ ಗಾಂಧೀಜಿ ಹೆಣೆದ ಕನಸುಗಳನ್ನೂ ಹೊತ್ತು ಹಳ್ಳಿಗಾಡನ್ನು ಸುತ್ತಿದವರು ಅವರು. ಎಳೆತನ ಕಳೆಯುತ್ತಿದ್ದಂತೆ ಗಾಂಧೀಜಿ ಅಥವಾ ಬೇರೆ ಹಿರಿಯರು ಹೇಳಿದ್ದೇ ತನ್ನ ವಿಚಾರಗಳಾಗಬೇಕಿಲ್ಲ ಅನ್ನೋ ಅರಿವು ಮೂಡಿ ಸ್ವಯಂ ಅನುಭವ-ಭಾವನೆಗಳ ಆಧಾರದ ಮೇಲೆ ಸ್ವಂತ ವಿಚಾರಗಳನ್ನು ರೂಢಿಸಿಕೊಳ್ಳುತ್ತಾ ಬಂದೋರು ಕಾರಂತರು. ಸ್ವಾತಂತ್ರ್ಯದ ದಿನ ಹತ್ತಿರ ಬರುತ್ತಿದ್ದಂತೆ ಮತ್ತು ಸ್ವಾತಂತ್ರ್ಯಾನಂತರ ಕಾಂಗ್ರೆಸ್ ಆಂದೋಲನದಿಂದ ದೂರವಾಗುತ್ತ ಬಂದರು. ಆ ದಿನಗಳ ಅವರ ಭಾವನೆಗಳನ್ನು ಅವರೇ ಹೇಳುತ್ತಾರೆ: "ಸಂಪೂರ್ಣ ಸ್ವಾತಂತ್ರ್ಯ ಬರುವ ದಿನ ದೂರವಿದ್ದರೂ ಅಷ್ಟರೊಳಗಾಗಿಯೇ ನಮ್ಮ ನಾಯಕರಲ್ಲಿ ಕಾಣಿಸಿದ ದ್ವೇಷಾಸೂಯೆ, ಅಧಿಕಾರ ಲಾಲಸೆ, ಕಪಟವೃತ್ತಿ ಮೊದಲಾದವು ನನ್ನಲ್ಲಿ ಬೆರಗು ಹುಟ್ಟಿಸಿವೆ; ಬೇಕಷ್ಟು ನೋವನ್ನು ಕೊಟ್ಟಿವೆ..,ನಮ್ಮ ಮುಂದಾಳುಗಳು ಈ ಕಾಲದಲ್ಲಿ ತೋರಿಸಿದ

ಸಾಹಸ, ಶೌರ್ಯಗಳಿಗೆ ನಾನು ಕುರುಡನಾಗಿಲ್ಲವಾದರೂ ಅವರ ಅಲ್ಪತನವನ್ನು ಕಂಡು ನಾಳಿನ ಭಾರತದ ಭವಿಷ್ಯ ಇಂಥವರ ಕೈಗೆ ಹೋದರೆ ಏನಾದೀತು ಎಂಬ ಭಯ ನನಗೆ ತಟ್ಟಿದ್ದೂ ಉಂಟು. ನಿಜವಾದ ಸ್ವಾತಂತ್ರ್ಯವೇ ಬಂದು ನಮ್ಮನ್ನು ನಾವು ಆಳುವ ದಿವ್ಯ ಗಳಿಗೆ ಮೂಡಿದ ಹೊತ್ತಿನಲ್ಲಿ-ಯೋಗ್ಯತೆ ಪ್ರಾಮಾಣಿಕತೆಗಳು ಮೊದಲ ಬಲಿಯಾಮುದನ್ನು ಕಂಡಿದ್ದೇನೆ"[1] ಈ ಅಸಮಾಧಾನ ಕಾರಂತರನ್ನು 1952ರ ಚುನಾವಣೆಗಳಲ್ಲಿ ಕಾಂಗ್ರೆಸ್ ವಿರುದ್ಧ ಹುರಿಯಾಳಾಗಿ ನಿಲ್ಲಲು ಪ್ರೇರೇಪಿಸಿತು. ಕಾರಂತರೇನೋ ಸೋತರು. ಆದರೆ ಸೋಲಿನ ಆ ಅನುಭವ ಸೋಲಲಿಲ್ಲ. ಚಿಕ್ಕಮಗಳೂರಿನಲ್ಲಿ ಇಂದಿರಾ ವಿರುದ್ಧ ಯಾರೂ ನಿಲ್ಲಲಾರದೆ ಹೋದರೆ ತಾನು ನಿಂತೇನು ಅನ್ನೊ ಅಷ್ಟು ರಾಜಕೀಯ ಕೆಚ್ಚನ್ನು ಉಳಿಸಿಕೊಂಡು ಬಂದೋರು ಕಾರಂತರು.

ಇಷ್ಟು ತೀವ್ರವಾದ ರಾಜಕೀಯ ತುಡಿತವುಳ್ಳ ಬರಹಗಾರನ ಬರಹಗಳಿಗೆ ರಾಜಕಾರಣವೂ ವಸ್ತುವಾಗುವುದು ಸಹಜವೇ. ಕಾರಂತರು ರಾಜಕೀಯ ಭಾಷಣಗಳನ್ನು ಮಾಡಿದ್ದಾರೆ : ಲೇಖನಗಳನ್ನು ಬರೆದಿದ್ದಾರೆ. ಅವರ ಕೆಲವು ಕಾದಂಬರಿಗಳಿಗೂ ರಾಜಕಾರಣ ವಸ್ತುವಾಗಿದೆ. ಸೃಷ್ಟಿಶೀಲ ಬರಹಗಾರರಾಗಿ ಕಾರಂತರು ತಮ್ಮ ಕಾದಂಬರಿಗಳಲ್ಲಿ ಇಂಡಿಯಾದ ಈ ರಾಜಕಾರಣವನ್ನ ಹೇಗೆ ಅರ್ಥಮಾಡಿಕೊಂಡಿದ್ದಾರೆ, ತಮ್ಮ ನಿಲುವುಗಳನ್ನ ಹೇಗೆ ರೂಪಿಸಿಕೊಂಡಿದ್ದಾರೆ ಮತ್ತು ಹೇಗೆ ಮಂಡಿಸುತ್ತಾರೆ ಅನ್ನೋದನ್ನ ಗಮನಿಸುವ ಒಂದು ಪ್ರಯತ್ನವನ್ನು ಈ ಪ್ರಬಂಧದಲ್ಲಿ ಮಾಡಲಾಗಿದೆ. ಕಾರಂತರ ಪ್ರಾತಿನಿಧಿಕವಾದ ರಾಜಕೀಯ ಕಾದಂಬರಿಗಳನ್ನು ಈ ಪ್ರಬಂಧದ ವ್ಯಾಪ್ತಿಯಲ್ಲಿ ಬಳಸಿಕೊಂಡಿದ್ದೇನೆ. ವಿಶೇಷವಾಗಿ ಕಾರಂತರ ಇತ್ತೀಚಿನ ಕಾದಂಬರಿಗಳನ್ನು ಚರ್ಚೆಗೆ ತಕ್ಕೊಂಡಿದ್ದೇನೆ. ಹಿಂದಿನ ಕಾದಂಬರಿಗಳಾದ "ಔದಾರ್ಯದ ಉರುಳಲ್ಲಿ" (1947), "ಗೊಂಡಾರಣ್ಯ" (1954), "ಆಳ ನಿರಾಳ" (1962), "ಉಕ್ಕಿದ ನೊರೆ" (1970), ಹಾಗೂ "ಮೂಜನ್ಮ"(1974)ಗಳು ಈಗಾಗಲೇ ಅಭಿನಂದನ ಗ್ರಂಥಗಳಲ್ಲಿ ಹಾಗೂ ಸಾಹಿತ್ಯಕಾಲಿಕಗಳ ಕಾರಂತ ಸಂಚಿಕೆಗಳಲ್ಲಿ ಸಾಕಷ್ಟು ಚರ್ಚೆಗೆ ಒಳಗಾಗಿವೆ. ಆದರೂ ಈ ಪ್ರಬಂಧದಲ್ಲಿ ಇವನ್ನು ಹಿನ್ನಲೆಯಲ್ಲಿಟ್ಟುಕೊಂಡು ಇತ್ತೀಚಿನ ಕಾದಂಬರಿಗಳಾದ "ಅದೇ ಊರು ಅದೇ ಮರ" (1977), "ಗೆದ್ದ ದೊಡ್ಡಸ್ತಿಕೆ" (1979) ಹಾಗೂ "ನಾವು ಕಟ್ಟಿದ ಸ್ವರ್ಗ" (1980) ಇವನ್ನು ವಿಶೇಷ ಪರಿಶೀಲನೆಗೆ ಒಳಪಡಿಸಲಾಗಿದೆ. ಇದರಿಂದಾಗಿ ಈ ಮೂರೂವರೆ ದಶಕಗಳಲ್ಲಿ ಕಾರಂತರ ರಾಜಕೀಯ ದೃಷ್ಟಿಕೋನಗಳಲ್ಲಿ ಏನಾದರೂ ಬದಲಾವಣೆ ಆಗಿದೆಯೇ ಅನ್ನೋದನ್ನ ಗುರುತಿಸಲು ಸಹಾಯವಾಗಬಹುದು. ಹಾಗೆ ನೋಡಿದರೆ, ವರ್ಷಕ್ಕೊಂದು ಕಾದಂಬರಿ ಬರೆಯುವ ಸಾಮಾನ್ಯ ನಿಯಮ ಇಟ್ಟುಕೊಂಡಿರೋ ಕಾರಂತರು ಈ ನಾಲ್ಕು ವರ್ಷಗಳಲ್ಲಿ ರಾಜಕಾರಣದ ಸುತ್ತಲೇ ಗಿರಕಿ ಹೊಡೆಯುವ ಮೂರು ಕಾದಂಬರಿಗಳನ್ನ ಬರೆದಿದ್ದಾರೆ ಅನ್ನೋ ಸಂಗತೀನೇ ಈಚಿನ ವರ್ಷಗಳಲ್ಲಿ

ರಾಜಕಾರಣ ಅವರ ಮನಸ್ಸಿನಲ್ಲಿ ವಿಶೇಷ ಸ್ಥಾನ ಆಕ್ರಮಿಸಿರೋದರ ದ್ಯೋತಕವಾಗಿರ ಬಹುದು. ಬಹುಶಃ ಈಚಿನ ರಾಜಕೀಯ ಅಲ್ಲೋಲಕಲ್ಲೋಲಗಳೂ ಇದಕ್ಕೆ ಕಾರಣ ವಿರಬಹುದು. 1980ರ ಚುನಾವಣೆಗಳಿಗಿಂತ ಮುಂಚೆ ಬರೆದ "ನಾವು ಕಟ್ಟಿದ ಸ್ವರ್ಗ" ಅನ್ನೋ ಕಾದಂಬರಿಯ ಮುನ್ನುಡಿಯಲ್ಲಿ ಅವರು "ಇಂದಿರೆ ನನ್ನ ಪಾಲಿಗೆ ರಾಜಕೀಯ ಯುಕ್ತಿಗಳ ಅಧಿಷ್ಠಾತ್ರಿ, ಇಲ್ಲಿನ ಪ್ರಜಾಪ್ರಭುತ್ವಕ್ಕೆ ಆಕೆ ಕಂಟಕಪ್ರಾಯಳು. ಇದು ನನ್ನ ವ್ಯಕ್ತಿಗತ ಅಭಿಪ್ರಾಯ. ಆದರೆ ಇನ್ನೂ ಅವಳನ್ನು ತಲೆಯ ಮೇಲೇರಿಸಿ ಕೊಂಡು ಕೊಂಡಾಡುತ್ತಿರುವ ಅಸಂಖ್ಯ ಜನರನ್ನು ಕಂಡಾಗ ದಿಗ್ಭ್ರಮೆ ಹುಟ್ಟುತ್ತದೆ" ಅನ್ನುವಂತಹ ನೇರ ಟೀಕೆಗಿಳಿಯುವಷ್ಟು ಕೋಪಾವಿಷ್ಟರಾಗಿ, ನಂತರದಲ್ಲೇ ನೋವಿ ನಿಂದ ನುಡಿಯುತ್ತಾರೆ: "...ಸಾಹಿತಿಯಾದ ನಾನು ದೇಶದ ಯಾವತ್ತೂ ಜೀವನ ವನ್ನು ಕಲಕುತ್ತಿರುವ ನೀಚ ರಾಜಕೀಯವನ್ನು ಕಂಡು ಕೊರಗುತ್ತಿದ್ದೆ. ನನ್ನ ವ್ಯಕ್ತಿಗತ ಜೀವನದ ಶಾಂತಿ, ಸಮಾಧಾನಗಳನ್ನು ಈ ಚಿಂತೆ ನಿತ್ಯವೂ ಕೆಡಿಸುತ್ತಾ ಬಂದಿದೆ. ಮುಂದಣ ತಿಂಗಳುಗಳಲ್ಲಿ ದೇಶನಿಷ್ಠೆಯನ್ನು ಸ್ವಾರ್ಥಕ್ಕೆ ಬಲಿಕೊಡುವ ಜನಗಳಿಂದ ಎಂಥ ವಿಷಮಯ ವಾತಾವರಣ ಉಂಟಾಗಿದೆ ಎಂಬ ನೋವಿಗೆ (ನಾನು) ಸಾಕ್ಷಿ ಯಾಗಿದ್ದೇನೆ."

ಕಾರಂತರ ಎಲ್ಲ ರಾಜಕೀಯ ಕಾದಂಬರಿಗಳಲ್ಲಿ ನಾವು ಕಾಣುವುದು ಈ ನೋವನ್ನು. ಅವರ ಎಲ್ಲ ರಾಜಕೀಯ ಕಾದಂಬರಿಗಳ ಹಿನ್ನಲೆಯಲ್ಲಿ ಸ್ವಾತಂತ್ರ್ಯ ಹೋರಾಟದ ಮೌಲ್ಯಗಳೆಲ್ಲಾ ಹಸೆಗೆಟ್ಟು ಹೋಗಿರುವುದನ್ನು ಕುರಿತ ವಿಷಾದದ ಛಾಯೆಯನ್ನು ಗುರುತಿಸಬಹುದು. ನಿಜ, ಸ್ವಾತಂತ್ರ್ಯೋತ್ತರ ರಾಜಕಾರಣ ವಿಷಾದ ವನ್ನು ಹುಟ್ಟಿಸುವಂತಹುದೇ. ಆದರೆ ಕಾರಂತರಲ್ಲೊಬ್ಬರಲ್ಲೇ ಅಲ್ಲ; ನಮ್ಮೆಲ್ಲರಲ್ಲೂ. ಆದರೆ ಕಾರಂತರ ವಿಷಾದದಲ್ಲಿ ಬೆರೆತ ಒಂದು ತರಹದ ಹತಾಶೆ ಬೆರೆತ ಜಿಗುಪ್ಸೆ, ಸಿನಿಕತನ ಹಾಗೂ ವಿಚಿತ್ರ ಹಠಮಾರಿತನಗಳು ನಮ್ಮನ್ನು ಬೆರಗುಗೊಳಿಸುತ್ತವೆ. ಮನುಷ್ಯ-ಮನುಷ್ಯರ ನಡುವಣ ವೈಯಕ್ತಿಕ ಸಂಬಂಧ, ಗಂಡು-ಹೆಣ್ಣಿನ ಸಂಬಂಧ, ಮನುಷ್ಯ-ಪ್ರಕೃತಿ ನಡುವಣ ಸಂಬಂಧ-ಇವೆಲ್ಲವುಗಳ ವಿಷಯದಲ್ಲಿ vibrant—ಅಂದರೆ—ಸ್ಪಂದನಶೀಲರಾಗಿ ಕಾಣುವ ಕಾರಂತರು ರಾಜಕಾರಣದ ವಿಷಯಕ್ಕೆ ಬಂದಾಗ ಮಾತ್ರ ಜಡವಾದಂತೆ ಕಾಣುತ್ತಾರೆ. ಸ್ವಾತಂತ್ರ್ಯಾಂದೋಲನದ ಕನಸುಗಳನ್ನು ಸ್ವಾತಂತ್ರ್ಯೋತ್ತರ ರಾಜಕಾರಣ ನಿರ್ದಯವಾಗಿ ಹೊಸಕಿ ಹಾಕಿದ್ದರ ನೋವು ಅವರ ಮನಸ್ಸಿನಾಳದಲ್ಲಿ ಎಷ್ಟು ಗಟ್ಟಿಯಾಗಿ ಬೇರು ಬಿಟ್ಟಿದೆ ಎಂದರೆ, ಆ ಕಹಿಯನ್ನು ವ್ಯಂಗ್ಯ ಅಥವಾ ಕಟಕಿ ಅಥವಾ ವಿಡಂಬನೆ ಅಥವಾ ವಿಷಾದದ ರೂಪದಲ್ಲಿ ಹೊರಗೆಡುವುದರ ಹೊರತಾಗಿ ಇವೊತ್ತಿನ ರಾಜಕಾರಣಕ್ಕೆ ನಿನ್ನೆಯವರಷ್ಟೆ ಅಲ್ಲ, ಇವೊತ್ತಿನವರಾಗಿಯೂ ಪ್ರತಿಕ್ರಿಯಿಸುವ ಕ್ರಿಯಾಶೀಲತೆಯನ್ನೇ ಅವರು ಕಳೆದುಕೊಂಡಿದ್ದಾರೆ ಎಂದೆನಿಸುತ್ತದೆ. ಕಾರಂತರ ರಾಜಕೀಯ ಕಾದಂಬರಿಗಳನ್ನು ಓದುತ್ತಾ ಹೋದಂತೆ, ಅವರೆಂದಾದರೂ ರಾಜಕಾರಣವನ್ನು ಅದರೆಲ್ಲಾ ಆಯಾಮಗಳೊಂದಿಗೆ ಅರ್ಥಮಾಡಿಕೊಳ್ಳುವ ಪ್ರಯತ್ನ

ಮಾಡಿದ್ದರೇ ಎಂಬ ಬಗ್ಗೆ ಅನುಮಾನವೇಳುತ್ತದೆ. "ಕಾರಂತರ ರಾಜಕೀಯ ಕಾದಂಬರಿಗಳು" ಅನ್ನೋ ವರ್ಣನೆಯೊಂದು ಪ್ರಚಲಿತದಲ್ಲಿರುವುದರಿಂದ ನಾನು ಈ ಮಾತನ್ನು ಆಡಬೇಕಾಗಿದೆಯಷ್ಟೆ.

ಕಾರಂತರು ಮೂರು ದಶಕಗಳಿಗೂ ಹಿಂದೆ (1945) ಬರೆದ "ಬಾಳ್ವೆಯೇ ಬೆಳಕು" ಅನ್ನೋ ವೈಚಾರಿಕ ಪುಸ್ತಕವನ್ನೋದಿದವರನ್ನ ಅವರ ರಾಜಕೀಯ ಕಾದಂಬರಿಗಳಲ್ಲಿ ವ್ಯಕ್ತವಾಗುವ ಒಲವುಗಳು ಚಕಿತಗೊಳಿಸುತ್ತವೆ. ಆ ಪುಸ್ತಕದಲ್ಲಿ ಅವರು ಎಲ್ಲ ರೀತಿಯ ಒಡೆತನವನ್ನು ತಿರಸ್ಕರಿಸುತ್ತಾರೆ ಹಾಗೂ ಸಂಪತ್ತು ಮತ್ತು ಅಧಿಕಾರಗಳ ವಿಕೇಂದ್ರೀಕರಣವನ್ನು ಪ್ರತಿಪಾದಿಸುತ್ತಾರೆ. ಹೀಗೆ ನಲವತ್ತರ ದಶಕದಲ್ಲಿ ವೈಚಾರಿಕ ಮಟ್ಟದಲ್ಲಿ ಆದರ್ಶ ಸಮತಾವಾದಿ ಅಥವಾ ಸಮಾಜವಾದಿಯಂತೆ ಕಾಣುವ ಕಾರಂತರು ಕ್ಷೇತ್ರ ರಾಜಕಾರಣದ ವಿಶ್ಲೇಷಣೆಗೆ ಇಳಿದೊಡನೆ ಪಕ್ಕಾ ಯಥಾಸ್ಥಿತಿವಾದಿ ಅಂತ ಕರೆಯಬಹುದಾದ ರಾಜಕೀಯ ಕಾದಂಬರಿಕಾರರಾಗಿ ಅಥವಾ ಇನ್ನಷ್ಟು ಸಾರ್ವತ್ರಿಕವಾಗಿ ಹೇಳುವುದಾದರೆ ರಾಜಕೀಯ ವ್ಯಕ್ತಿತ್ವವಾಗಿ ಮಾರ್ಪಾಟಾದದ್ದರ ಹಿಂದೆ ತಾತ್ತ್ವಿಕ ಕಾರಣಗಳೇನಾದರೂ ಇವೆಯೇ ? ಅವರ ಕಾದಂಬರಿಗಳು ಹಾಗೂ ಇತರೆ ಬರಹಗಳನ್ನು ಓದಿದ ನಂತರವೂ ಇದಕ್ಕೆ, ಸ್ವಾತಂತ್ರ್ಯೋತ್ತರ ಕಾಲದ ಹೊಲಸು ರಾಜಕಾರಣದ ಬಗ್ಗೆ ಅವರಿಗುಂಟಾದ ನಿರಾಶೆ ಹಾಗೂ ನೋವಿನ ಹೊರತಾಗಿ ಬೇರೇನೂ ಕಾರಣ ನಮಗೆ ಗೊತ್ತಾಗುವುದಿಲ್ಲ.

ಅವರ ಯಾವುದೇ ರಾಜಕೀಯ ಕಾದಂಬರಿಯನ್ನು ತೆಗೆದುಕೊಳ್ಳಿ. ಸ್ವಾತಂತ್ರ್ಯ ಪೂರ್ವದ ರಾಜಕಾರಣವನ್ನು ಚಿತ್ರಿಸುವ 1947 "ಔದಾರ್ಯದ ಉರುಳಿನಲ್ಲಿ"ಯ ಪ್ರಭುದೇವನನ್ನೇ ತೆಗೆದುಕೊಳ್ಳಿ. ಅಥವಾ ಮೊದಲ ಸಾರ್ವತ್ರಿಕ ಚುನಾವಣೆಯಾದ ನಂತರ ಬರೆದ "ಗೊಂಡಾರಣ್ಯ"ದ ಸೇತೂರಾಯನನ್ನೇ ತೆಗೆದುಕೊಳ್ಳಿ. ಅಥವಾ ತುರ್ತು ಪರಿಸ್ಥಿತಿಗೆ ಸ್ವಲ್ಪ ಮುಂಚೆ ಬರೆದ "ಮೂಜನ್ಮ"ದ ಯಾದವರಾಯನನ್ನೇ ತೆಗೆದುಕೊಳ್ಳಿ. ಇಲ್ಲವೇ ಇತ್ತೀಚೆಗೆ ಬರೆದ "ನಾವು ಕಟ್ಟಿದ ಸ್ವರ್ಗ"ದ ಕಾಳಪ್ಪನನ್ನೇ ನೋಡಿ. ಇವರೆಲ್ಲಾ ಸಮಾಜವಾದಿ ಘೋಷಣೆಗಳನ್ನು ಕೂಗುತ್ತಾರೆ; ಶ್ರಮಜೀವಿಗಳ ಮತ್ತು ಹಿಂದುಳಿದವರ ಪ್ರತಿನಿಧಿಗಳಾಗಿರುತ್ತಾರೆ. ಆದರೆ ಇವರೆಲ್ಲಾ ಐಷಾರಾಮಿ ಜೀವನಕ್ಕೆ ಬಾಯಿ ಬಿಡುತ್ತಾರೆ ; ಇತರರ ಆಸ್ತಿಯನ್ನು ಕಬಳಿಸಲು ಹಾತೊರೆಯುತ್ತಾರೆ. ಉತ್ಪಾದನೆಗೆ ಅಡ್ಡಿ ಉಂಟುಮಾಡುತ್ತಾರೆ. ಜೊತೆಗೆ ಬಂಡವಾಳಗಾರರೊಂದಿಗೆ ಶಾಮೀಲಾಗಿರುತ್ತಾರೆ ಕೂಡಾ. ಎಡ ಪಂಥೀಯ ರಾಜಕಾರಣದ ಪ್ರತಿಪಾದಕರಿಗೆ ಇದೆಲ್ಲಾ ಅನ್ಯಾಯ ಮಾಡುವಂತಿದೆ ಅಂತೇನೂ ನಾನು ಇದನ್ನೆಲ್ಲಾ ಎತ್ತಿ ಹೇಳುತ್ತಿಲ್ಲ. ಎಡ ರಾಜಕಾರಣದ ಗಾಂಭೀರ್ಯ ಕಾರಂತರ ಇಂತಹ ಚಿತ್ರಣಗಳಿಂದ ಕೆಟ್ಟು ಹೋಗುವಷ್ಟೇನೂ ಅದು ರಕ್ತಹೀನವಾಗಿಲ್ಲವೇನೋ ! ಯಾವುದೇ ವ್ಯಕ್ತಿಗೆ ತನಗೆ ಸರಿ ಕಂಡಂತಹ ರಾಜಕೀಯ ಒಲವುಗಳನ್ನು ಇರಿಸಿಕೊಳ್ಳುವ ಸ್ವಾತಂತ್ರ್ಯ ಇದೆ. ಕಾರಂತರಿಗೂ ಸಹ. ಆದರೆ ಒಬ್ಬ ಸೃಷ್ಟಿಶೀಲ ಬರಹಗಾರನೆನಿಸಿಕೊಂಡವನು ತಾನು

ವ್ಯಕ್ತಪಡಿಸುವ ಒಲವುಗಳಿಗೆ ಬಾಧ್ಯನೂ ಆಗಿರಬೇಕಾಗುತ್ತದೆ. ಅಂದರೆ ಆ ಒಲವುಗಳು ಅಥವಾ ಅವನ್ನು ನಿರೂಪಿಸುವ ಪಾತ್ರಗಳು ಬದುಕು ಒಡ್ಡುವ ಸರ್ವವಿಧದ ಘರ್ಷಣೆಗಳಲ್ಲಿ ಮೈಪಡೆದವಾಗಿರಬೇಕಾಗಿರುತ್ತವೆ. ಬದುಕನ್ನು ಇಡಿಯಾಗಿ ಅರ್ಥೈಸಿಕೊಳ್ಳುವ ಇಂತಹ ಪ್ರಯತ್ನದಲ್ಲೇ ಕಲೆ ಜೀವಂತವಾಗುವುದು ; ಅದರಿಂದ ಹೊಮ್ಮುವ ಪಾತ್ರಗಳು ನಮ್ಮೊಡನೆ ಉಸಿರಾಡತೊಡಗುವುದು ; ಅವು ಪ್ರಕಟಿಸುವ ಒಲವುಗಳು ನಮ್ಮನ್ನು ಕಾಡತೊಡಗುವುದು.

ಈ ದೃಷ್ಟಿಯಿಂದ ನೋಡಿದಾಗ ಕಾರಂತರ ರಾಜಕೀಯ ಕಾದಂಬರಿಗಳು ಬೋಳುಬೋಳಾಗಿ, ಅದರಲ್ಲಿನ ಪಾತ್ರಗಳು ಭೋಳೆ ಭೋಳೆಯಾಗಿ ಮತ್ತು ಸಹಜವಾಗಿ, ಅವು ಪ್ರಕಟ ಪಡಿಸುವ ಒಲವುಗಳು ಜಾಳುಜಾಳಾಗಿ ಕಾಣುತ್ತವೆ. ಕಾದಂಬರಿಯಲ್ಲಿ ನಮಗೆ ಕಾಣದ ಯಾವುದೋ ಕಾರಣದಿಂದ ತಾವು ಪಡೆದುಕೊಂಡ ಅಥವಾ ನಂಬಬೇಕೆನಿಸಿದ ಅಭಿಪ್ರಾಯಗಳನ್ನು ಓದುಗರೊಂದಿಗೆ ಹಂಚಿಕೊಳ್ಳಲು ಅವರು ತಕ್ಕನಾದ ಪಾತ್ರಗಳನ್ನು ಕಡೆದು ಆಟವಾಡಿಸುತ್ತಾರೆ. ಇಂಡಿಯಾದ ಇವೊತ್ತಿನ ರಾಜಕಾರಣದ ವಿನ್ಯಾಸಗಳನ್ನು ರೂಪಿಸುವ ಇಲ್ಲಿನ ಜನಜೀವನದ ಏಳು ಬೀಳುಗಳು, ಆಮೋದ ಪ್ರಮೋದಗಳು, ರಂಪಗಳು, ಚೀತ್ಕಾರಗಳು, ಪ್ರತ್ಯೇಕತೆಗಳು (segregations), ಉದ್ವೇಗಗಳು ಹಾಗೂ ಮೂಕ ನೋವುಗಳು ಈ ಕಾದಂಬರಿಗಳಲ್ಲಿ ದನಿಯನ್ನೇ ಪಡೆದುಕೊಳ್ಳುವುದಿಲ್ಲ. ಹೀಗಾಗಿ ಕಾರಂತರ ಈ ಕಾದಂಬರಿಗಳಲ್ಲಿ ಜನಶಕ್ತಿ ಜಡವಾಗಿಯೇ ಉಳಿಯುತ್ತದೆ. ಏಕೋ ಏನೋ ಕಾರಂತರ ರಾಜಕೀಯ ಕಣ್ಣಿಗೆ ಜನಶಕ್ತಿ ಚೈತನ್ಯವಾಗಿ ಕಾಣಿಸಿಕೊಳ್ಳುವುದು ಉತ್ಪಾದನೆಗೆ ಅಡ್ಡಿಯುಂಟುಮಾಡಿ ಮುಷ್ಕರ ಹೂಡುವ ಕಾರ್ಮಿಕ ವರ್ಗದ ರೂಪದಲ್ಲೋ ಅಥವಾ ಕಷ್ಟಪಟ್ಟೇ ಸಂಪಾದಿಸಿದ್ದೆಂದು ಹೇಳಲಾಗುವ ಇತರರ ಭೂಮಿ ಮೇಲೆ ಹಕ್ಕು ಸಂಪಾದಿಸಲು ಬರುವ ಗೇಣಿದಾರರ ರೂಪದಲ್ಲೋ.

ಕಾರಂತರ ಪ್ರಕಾರ ಹಣ ಕೂಡಿಡುವುದು, ಆಸ್ತಿ ಸಂಪಾದಿಸುವುದು ಕೆಟ್ಟದ್ದಲ್ಲ. ಅಷ್ಟೇ ಅಲ್ಲ, ಯೋಗ್ಯತೆ ದಕ್ಷತೆಗಳಿದ್ದರೆ ಎಷ್ಟಾದರೂ ಆಸ್ತಿ ಸಂಪಾದಿಸಬಹುದು. "ಮೂಜನ್ಮ"ದಲ್ಲಿ ಮಹಾನ್ ರಾಜಕೀಯ ಮುತ್ಸದ್ದಿಯಾಗಿ ನಿರೂಪಿತವಾಗಿರುವ, ಹಲವು ದತ್ತಿಗಳ ನಿರ್ವಾಹಕರಾಗಿರುವ ಚಂದ್ರಕಾಂತ ಗುಪ್ತರ ಈ ಕಟಕಿಯನ್ನು ನೋಡಿ:

> "...ಜನ ಎಷ್ಟೆಷ್ಟು ಅಧಿಕ ಬಡವರಾಗಿರುತ್ತಾರೋ, ದುಡಿಯಲಾರದಂಥ ದುರ್ಬಲರಾಗಿರುತ್ತಾರೋ ಅವರಿಗೆ ಅಷ್ಟಷ್ಟು ಹೆಚ್ಚಿನ ಹಕ್ಕು ಪರರ ದುಡ್ಡಿನ ಮೇಲೆ ಬರುತ್ತದೆ. ಅದು ಯಾರ ಹಣವಾದರೂ ಸರಿಯೇ, ಎಲ್ಲಿಂದ ಬಂದರೂ ಸರಿಯೇ ! ಇವೊತ್ತಿನ ರಾಜಕೀಯ ತತ್ವಗಳ ಸಾರಸರ್ವಸ್ವವೇ ಅದು !"[2]

ಕಾರಂತರ ಪ್ರಕಾರ ಈ ದೇಶದ ಬಂಡವಾಳಗಾರರ ಕಷ್ಟ ದುಃಖಗಳನ್ನು ವಿಚಾರಿಸಿಕೊಳ್ಳುವವರೇ ಇಲ್ಲವಾಗಿದ್ದಾರೆ. "ನಾವು ಕಟ್ಟಿದ ಸ್ವರ್ಗ" ಕಾದಂಬರಿಯಲ್ಲಿ ಪತ್ರಕರ್ತರಾಗಿ ಬರುವ ಕಾರಂತರು ಬಂಡವಾಳಗಾರರ ಬಗ್ಗೆ "ಲೋಕದ ಕಷ್ಟ ನಮಗೆ ತಿಳಿಯುವುದಿಲ್ಲ"[3] ಎಂದು ಮರುಗುತ್ತಾ, ಬಂಡವಾಳಗಾರರು ಹೇಗೆ ಬಂಡವಾಳ ಹೂಡಿದರು ಅನ್ನುವುದನ್ನು ಬಹಳ ಸರಳವಾಗಿ ಮನದಟ್ಟು ಮಾಡುತ್ತಾರೆ : "ಸಾವಿರಾರು ಜನರಿಂದ ಪಾಲುವಂತಿಗೆ ಪಡೆದರು. ಅದು ಸಾಲದೆ ಹೋದಾಗ ಪರರಿಂದ ಸಾಲ ಮಾಡಿದರು. ಆ ಸಾಲದ ಜವಾಬ್ದಾರಿಯನ್ನೂ ಹೊತ್ತರು."[4] ಅಷ್ಟೇ ಅಲ್ಲ, ಕಾರಂತರು ಈ ಕಷ್ಟ ದುಃಖಗಳನ್ನು ಕೊಂಚ ದಾರ್ಶನೀಕರಿಸಲೂ ಹಿಂಜರಿಯು ವುದಿಲ್ಲ: "...ಹಣ ಸಂಪಾದಿಸುವ ಕಷ್ಟ, ಉಳಿಸುವ ಕಷ್ಟ, ಕೊಂಡ ಸಾಲವನ್ನು ಹಿಂದಿರುಗಿಸುವ ಕಷ್ಟ, ನಷ್ಟವಾದರೆ ತಲೆಯೊಡ್ಡುವ ಕಷ್ಟ-ಇವನ್ನೆಲ್ಲಾ ಜನ ಯಾಕೆ ಮಾಡುತ್ತಾರೆ? ಇಂದು ಬದುಕುವುದಕ್ಕಾಗಿ ; ನಾಳಿನ ಸುಖಕ್ಕಾಗಿ."

ಕಾರ್ಮಿಕ ಅಶಾಂತಿಯನ್ನು ಕಾರಂತರು ಎಷ್ಟರಮಟ್ಟಿಗೆ ಅರ್ಥಮಾಡಿಕೊಂಡಿದ್ದಾರೆ ಎಂಬ ಬಗ್ಗೆ "ಮೂಜನ್ಮ"ದ ಚಂದ್ರಕಾಂತ ಗುಪ್ತರ ಯೋಚನಾಲಹರಿಯ ನಿರೂಪಣೆಯಲ್ಲಿ ಸೂಚನೆ ಸಿಗುತ್ತದೆ. ಅವರು ಹೇಳುತ್ತಾರೆ : "ಮೊದಲು ನಮ್ಮ ದೇಶ ಸಂಪತ್ತನ್ನು ಉತ್ಪಾದಿಸಲಿ. ಉತ್ಪಾದಿಸಿದ ಮೇಲೆ ಯಾರು ಎಷ್ಟು ಹಂಚಿ ತಿನ್ನಬೇಕು ಎನ್ನುವ ಜಗಳ ; ಅದರ ಮೊದಲಲ್ಲ. ಸಂಪತ್ತಿನ ಉತ್ಪನ್ನಕ್ಕೆ ಹಾಕುವ ಅಡ್ಡಗಾಲು ನಾಡಿನ ಭವಿಷ್ಯಕ್ಕೇ ಮಾರಕವಾದೀತು-ಎಂಬುದು ಗುಪ್ತರ ದೃಷ್ಟಿಯಾಗಿತ್ತು"[5]. ಇದೇ ಕಾದಂಬರಿಯಲ್ಲಿ ಕಾರಂತರು ಮಾಜಿ ರಾಜಮಹಾರಾಜರುಗಳು ತಮ್ಮೆಲ್ಲಾ ಸವಲತ್ತುಗಳನ್ನು ಕಳೆದುಕೊಳ್ಳಬೇಕಾಗಿದ್ದರ ಬಗ್ಗೆ ಪರಿತಪಿಸುವುದನ್ನು ಕಾಣಬಹುದು : "ಅಂತೂ ರಾಜ್ಯವನ್ನು ಕಳೆದುಕೊಂಡುದು ಅವರೆಲ್ಲರ ಪಾಲಿಗೂ ಒಂದು ದುಃಸ್ವಪ್ನ ಅನ್ನಿಸಿತ್ತು. ಆದರೆ ಮುಂದೆಯೂ ಅವರ ಪಾಲಿಗೆ ಬರತೊಡಗಿದ ಕಿರುಕುಳ ಸ್ವಲ್ಪವಲ್ಲ. ಅವರಿಗೆ ಕೊಟ್ಟ ರಿಯಾಯಿತಿಗಳನ್ನು ಒಂದೊಂದಾಗಿ ಕಸಿಯುತ್ತಾ ಹೋದರು. ಅವರ ಖಾಸಗೀ ಜಮೀನುಗಳನ್ನು ನೆಪವಿಲ್ಲದ ನೆಪದಿಂದ ಕಸಿದುಕೊಂಡರು. ಅದರ ಬಗ್ಗೆ ಜನರಿಂದ ಸತ್ಯಾಗ್ರಹ ಹೂಡಿಸುವ ನಾಟಕವನ್ನು ಮಾಡಿದರು."[6]

ಭೂ ಸುಧಾರಣಾ ಕಾನೂನುಗಳ ಬಗ್ಗೆಯೂ ಕಾರಂತರ ತಕರಾರಿದೆ. ಬಂಡವಾಳವನ್ನು ಕುರಿತ ಅವರ ನಿಲುವು ಭೂಮಿಗೆ ಸಂಬಂಧಿಸಿದಂತೆಯೂ ಅನ್ವಯಿಸುತ್ತದೆ. "ಅದೇ ಊರು ಅದೇ ಮರ" ಹಾಗೂ "ನಾವು ಕಟ್ಟಿದ ಸ್ವರ್ಗ"—ಈ ಎರಡೂ ಕಾದಂಬರಿಗಳಲ್ಲಿ ಭೂ ಸುಧಾರಣಾ ಕಾನೂನಿನಿಂದ ಭೂಮಿ ಕಳಕೊಂಡವರ ಅಥವಾ ಕಳೆದುಕೊಳ್ಳುವ ಅಪಾಯಕ್ಕೆ ಸಿಕ್ಕಿರುವವರ ಗೋಳನ್ನು ಚಿತ್ರಿಸಲಾಗಿದೆ. "ಉಳುವವನೇ ಭೂ ಒಡೆಯ" ಅನ್ನೋ ತತ್ವವನ್ನು ಗೇಲಿಮಾಡಲಾಗಿದೆ.

ಜಾತಿಯ ರಾಜಕೀಯ ಸ್ವರೂಪ ಕುರಿತಂತೆ ಕಾರಂತರ ನಿಲುವು ವಿಚಿತ್ರವಾಗಿದೆ. "ಗೆದ್ದ ದೊಡ್ಡಸ್ತಿಕೆ" ಕಾದಂಬರಿಯಲ್ಲಿ ನಾಗೇಂದ್ರನೆಂಬ ಬ್ರಾಹ್ಮಣ ಹುಡುಗನ ಕಸಿವಿಸಿಗಳನ್ನು ನಿರೂಪಿಸುವಾಗ ಕಾರಂತರು ಪರಂಪರಾಗತ ಜಾತಿ ವ್ಯವಸ್ಥೆ ಸೃಷ್ಟಿಸುವ ಅಸಮಾನತೆಗಳನ್ನು ಪ್ರಸ್ತಾಪಿಸುತ್ತಾರೆ. ಆದರೆ ಈಗ ಅದನ್ನೆಲ್ಲಾ ಮರೆತು ಒಂದಾಗಿ ಬಾಳಬೇಕೆನ್ನುವ ನಿಲುವು ಅವರದು. ಮೂರ್ತವಾದ ಜಾತಿ - ಅಸಮಾನತೆಗಳನ್ನು "ಈಗ ನಾವೆಲ್ಲಾ ಒಂದೇ" ಎಂಬ ಸಮಾನತಾ ಸಂದೇಶದ ಅಮೂರ್ತ ಅರಿವಿನೊಂದಿಗೆ ತೊಡೆದುಹಾಕಬಯಸುವ ಕಾರಂತರು, ಮೀಸಲಾತಿ ಬಗ್ಗೆ "ಅದೇ ಊರು ಅದೇ ಪುರ"ದ ಆದರ್ಶವಾದಿ ಗಾಂಧಿ ಗೋಪಾಲಯ್ಯನವರ ಬಾಯಿಯಲ್ಲೇ ಪುಟ್ಟ ಭಾಷಣ ಮಾಡಿಸುತ್ತಾರೆ : "...ಅದರ ಬದಲು ನಮಗೆ ಕಾಣಿಸುವುದು ಒಂದೇ ದಾರಿ : "ಸರಕಾರೀ ಕೆಲಸದಲ್ಲಿ ಕುರ್ಚಿಯ ಮೇಲೆ ಕುಳಿತು ಮಾಡುವ ಕೆಲಸವಷ್ಟನ್ನೇ ಕೊಡಿ" ಎನ್ನುವುದು. ಎರಡು ಮೂರು ತಲೆಮಾರುಗಳಲ್ಲಿ ಜನರು ಓದಿ, ಮಾಡಿ, ತಾವು ಮಾಡುವ ಕೆಲಸಕ್ಕೆ ತಕ್ಕ ಯೋಗ್ಯತೆ ಪಡೆದರೆ ಅದು ತನ್ನಂತೆಯೇ ಆಗುತ್ತದೆ... ಯೋಗ್ಯತೆ ಬೆಳೆಯಿಸಿಕೊಂಡವರಿಗೆ ಧಾರಾಳ ಅವಕಾಶ ಒದಗಿಸಬೇಕಾದ್ದು ಸರಿಯೇ. ಏನೇ ಮಾಡಿದರೂ ಜನರಲ್ಲಿ ತಮ್ಮ ಕಾಲಿನ ಮೇಲೆ ತಾವು ನಿಲ್ಲಬೇಕು ; ತಮ್ಮ ಶಕ್ತಿಯನ್ನು ಬೆಳೆಯಿಸಿಕೊಳ್ಳಬೇಕು : ಯೋಗ್ಯತೆ ಹೆಚ್ಚಿಸಿಕೊಳ್ಳಬೇಕು ಎಂಬ ಬುದ್ಧಿ ಬೆಳೆಯದಿದ್ದರೆ ಶಾಶ್ವತ ಶಿಶುಗಳ ದೇಶವಾದೀತು ಇದು"[7] 'ಸರ್ಕಾರೀ ಚಾಕರಿಗೆ ತಕ್ಕ ಯೋಗ್ಯತೆ ಬೆಳೆಯಿಸಿಕೊಳ್ಳುವವರೆಗೆ ಹರಿಜನರು ಏನು ಮಾಡಬೇಕು ? ಗಾಂಧಿ ಗೋಪಾಲಯ್ಯನವರೇ ಇದಕ್ಕೆ ಉತ್ತರಿಸುತ್ತಾರೆ : "ನಮ್ಮ ಜಿಲ್ಲೆಯ ಯಾವತ್ತೂ ಹರಿಜನರನ್ನು ಆ ರಬ್ಬರು ತೋಟಗಳಲ್ಲಿ ಯಾಕೆ ನೇಮಿಸಬಾರದು ? ಅದು ಅವರಿಂದಾಗದಂಥ ಕೆಲಸವೇನು ?"[8]

ಇವಿಷ್ಟು ಕಾರಂತರು ಅರ್ಥ ಮಾಡಿಕೊಂಡಂತಹ ರಾಜಕಾರಣದ ಹಲವು ಪಕ್ಕಗಳು. ಕಾರ್ಖಾನೆ ಹಾಗೂ ಬ್ಯಾಂಕುಗಳ ಮತ್ತು ಇತರ ಸಂಘಟಿತ ಕಾರ್ಮಿಕವರ್ಗ ಸ್ವಾರ್ಥಿಯಾಗುತ್ತಿದೆ ಎಂದು ಅದಕ್ಕೆ ಪ್ರತಿಕ್ರಿಯೆ ಎಂಬುವಂತೆ ಖಾಸಗಿ ಬಂಡವಾಳಗಾರರ ವಕಾಲತ್ತು ವಹಿಸುವ ; ರಾಜಮಹಾರಾಜರುಗಳಿಂದ ಪಡೆದ ನೆಲವನ್ನು ಸದುಪಯೋಗಪಡಿಸಿಕೊಂಡಿಲ್ಲವೆಂಬ ಅಸಮಾಧಾನದಲ್ಲಿ ರಾಜಮಹಾರಾಜರುಗಳ ಸ್ಥಿತಿಗತಿಗಳ ಬಗ್ಗೆ ಮರುಕಪಡುವ; ಭೂ ನ್ಯಾಯಮಂಡಳಿಯ ಅಧ್ಯಕ್ಷತೆಗೆ ತುತ್ತಾದ ಬಡ ಕುಟುಂಬವೊಂದರ ಗೋಳನ್ನು ಮುಂದಿಟ್ಟುಕೊಂಡು ಭೂ ಮಾಲೀಕರ ಪರವಾಗಿ ಆರ್ಭಟಿಸುವ; ದಕ್ಷತೆ-ಯೋಗ್ಯತೆಗಳೆಂಬ ಅಳತೆಗೆ ಸಿಗದ ಕಲ್ಪನೆಗಳ ನೆಪದಲ್ಲಿ ಹರಿಜನರನ್ನು ರಬ್ಬರು ತೋಟಗಳಿಗೆ ಕಳಿಸಬಯಸುವ ಕಾರಂತರ ಈ ತೀರಾ ಸರಳೀಕೃತ ರಾಜಕಾರಣಕ್ಕೆ ಸಹಜವಾಗಿ ಬೆನ್ನೆಲುಬೇ ಇಲ್ಲದಾಗಿದೆ. ವ್ಯಾವಹಾರಿಕ ರಾಜಕಾರಣದ ಹೆಸರಿನಲ್ಲಿ ಪ್ರಚಲಿತದಲ್ಲಿರುವ ನಾಲಾಯಕ್ ರಾಜಕಾರಣಕ್ಕೆ ಪ್ರತಿಕ್ರಿಯಿಸುವಷ್ಟರ ಮಟ್ಟಿಗೆ ಮಾತ್ರ ರಾಜಕೀಯವಾಗಿ ಕ್ರಿಯಾಶೀಲವಾಗುವುದರ ದುರಂತ

ಇದಿರಬಹುದು. ಇಂತಹ ವ್ಯಾವಹಾರಿಕ ರಾಜಕಾರಣಕ್ಕೆ ಎದುರಾಗಿ ನಿಂತು ಬಲಿಯಾಗುವ ಅಥವಾ ಪ್ರತಿವ್ಯಾವಹಾರಿಕ ರಾಜಕಾರಣಕ್ಕೆ ಇಳಿಯುವ "ಔದಾರ್ಯದ ಉರುಳಿನಲ್ಲಿ"ನ ದಯಾನಂದರಾಯರು, ರಾಧಾಕೃಷ್ಣ; "ಗೊಂಡಾರಣ್ಯ"ದ ಅರುಣಾಚಲಯ್ಯ ಮತ್ತು ಕಾಂಚನ ಮಾಲೆ ; "ಮೂಜನ್ಮ"ದ ಚಂದ್ರಕಾಂತ ಗುಪ್ತ, "ನಾವು ಕಟ್ಟಿದ ಸ್ವರ್ಗ"ದ ದೇವೇಂದ್ರಪ್ಪ ಹಾಗೂ "ಅದೇ ಊರು ಅದೇ ಮರ"ದ ಗೋಪಾಲಯ್ಯ ಇವರೆಲ್ಲಾ ಯಾವುದೇ ರೀತಿಯಲ್ಲಿ, ರಾಜಕಾರಣಕ್ಕೆ ಹೊಸದಿಕ್ಕು ನೀಡುವ ರಚನಾತ್ಮಕ ರಾಜಕೀಯ ವ್ಯಕ್ತಿತ್ವಗಳಾಗುವುದೇ ಇಲ್ಲ.

ಈ ದೃಷ್ಟಿಯಿಂದ ಕಾರಂತರ ಕಾದಂಬರಿಗಳಲ್ಲಿ ಅವರ ರಾಜಕೀಯ ನಿಲುವುಗಳಿಗೆ ಗಟ್ಟಿಯಾದ ನೆಲೆಗಳೇ ಇಲ್ಲವಾಗಿವೆ. ಬೇರೆ ಮಾತುಗಳಲ್ಲಿ ಹೇಳುವುದಾದರೆ, ಕಾರಂತರು ನಿಜವಾದ ಅರ್ಥದಲ್ಲಿ ರಾಜಕೀಯ ಕಾದಂಬರಿಗಳನ್ನೇ ಬರೆದಿಲ್ಲ. ರಾಜಕೀಯ ಕಾದಂಬರಿಗಳೆಂದು ಕರೆಯಲಾಗುವ ಅವರ ಕಾದಂಬರಿಗಳೆಲ್ಲವೂ ಅವರ ವೈಯಕ್ತಿಕ ರಾಜಕೀಯ ಅಭಿಪ್ರಾಯಗಳು ಹಾಗೂ ಟೀಕೆ ಟಿಪ್ಪಣಿಗಳಿಗೆ ವೇದಿಕೆಗಳಾಗಿವೆಯಷ್ಟೆ.

## ಉಲ್ಲೇಖಗಳು


1. ಸ್ಮೃತಿ ಪಟಲದಿಂದ, ಸಂಪುಟ-೨ (ರಾಜಲಕ್ಷ್ಮಿ ಪ್ರಕಾಶನ), ಮೊದಲ ಮುದ್ರಣ, ಪುಟ ೯೬
2. ಮೂಜನ್ಮ (ಹರ್ಷ ಪ್ರಕಟನಾಲಯ), ಮೊದಲ ಮುದ್ರಣ, ಪುಟ ೭೯
3. ನಾವು ಕಟ್ಟಿದ ಸ್ವರ್ಗ (ರಾಜಲಕ್ಷ್ಮಿ ಪ್ರಕಾಶನ) ಮೊದಲ ಮುದ್ರಣ, ಪುಟ ೧೩೭
4. ನಾವು ಕಟ್ಟಿದ ಸ್ವರ್ಗ, ಅದೇ. ಪುಟ ೧೪೯
5. ಮೂಜನ್ಮ (ಹರ್ಷ ಪ್ರಕಟನಾಲಯ), ಮೊದಲ ಮುದ್ರಣ, ಪುಟ ೧೮೫
6. ಮೂಜನ್ಮ (ಹರ್ಷ ಪ್ರಕಟನಾಲಯ), ಮೊದಲ ಮುದ್ರಣ, ಪುಟ ೧೦೮
7. ಅದೇ ಊರು ಅದೇ ಮರ (ರಾಜಲಕ್ಷ್ಮಿ ಪ್ರಕಾಶನ) ಮೊದಲ ಮುದ್ರಣ, ಪುಟ ೨೨೩
8. ಅದೇ.

# ಕಾರಂತರ ಕಾದಂಬರಿಗಳಲ್ಲಿ ಧರ್ಮ

**ಕೆ. ಸತ್ಯನಾರಾಯಣ**

ಕಾರಂತರಂತಹ ಸಮೃದ್ಧ ಲೇಖಕರಲ್ಲಿ ಧರ್ಮದ ಬಗ್ಗೆಯಾಗಲೀ ಸಮಾಜವನ್ನು ಕುರಿತಾಗಲೀ ಅವರ ಅಭಿಪ್ರಾಯಗಳನ್ನು ಹುಡುಕುವುದು ಅಥವಾ ನಮ್ಮ ಅಭಿಪ್ರಾಯಗಳಿಗೆ ಪುರಾವೆಯನ್ನು ಹುಡುಕುವುದು ಬಹು ಸುಲಭವಾದ ಕೆಲಸ. ಹಾಗೆಯೇ ಅವರನ್ನು ವಿರೋಧಿಸಲು ನೆಪಗಳನ್ನು ಕೂಡ. ಆದರೆ ಇದರಿಂದ ವಿಮರ್ಶೆಗಾಗಲೀ ಲೇಖಕನ ಅಭ್ಯಾಸಕ್ಕಾಗಲೀ ಏನೂ ಉಪಯೋಗವಾಗಲಾರದು. ಇಂತಹ ಶೀರ್ಷಿಕೆಗಳು ವಿಮರ್ಶೆಯ ಹೆಸರಿನಲ್ಲಿ ಕೃತಿಯ ಹೊರಗೆ ನಿಂತು ಮಾತನಾಡಲು ಸಲೀಸಾದ ಕುಮ್ಮಕ್ಕನ್ನು ಕೊಡುತ್ತವೆ. ಕಾರಂತರಂತಹ ಕಾದಂಬರಿಕಾರರ ಸಾರ್ವಜನಿಕ ವ್ಯಕ್ತಿತ್ವ ಕೂಡ ಕೆಲವೊಮ್ಮೆ ಈ ರೀತಿಯ ವಿಷಯಗಳನ್ನು ಕುರಿತ ಚರ್ಚೆಯಲ್ಲಿ ಗೊಂದಲ ವೇರ್ಪಡಲು ಕಾರಣವಾಗಬಹುದು. ಧರ್ಮ, ಸಮಾಜ, ಲೈಂಗಿಕತೆ-ಇಂತಹ ವಿಷಯಗಳ ಬಗ್ಗೆ ಸ್ಪಷ್ಟ ಮತ್ತು ಖಚಿತ ಅಭಿಪ್ರಾಯಗಳನ್ನು ತಮ್ಮ ಲೇಖನಗಳಲ್ಲಿ, ಭಾಷಣಗಳಲ್ಲಿ, ವಿಚಾರ ಸಾಹಿತ್ಯದಲ್ಲಿ ಕಾರಂತರು ಮಂಡಿಸುತ್ತಾರೆ. ಈ ಅಭಿಪ್ರಾಯಗಳಿಗೆ ತಕ್ಕಂತೆ ಕಾರಂತರು ಕಾದಂಬರಿಗಳನ್ನು ಬರೆಯುತ್ತಾರೆಯೇ ಎಂದು ಹುಡುಕುವುದು ಕೂಡ ಕೃತಿಯನ್ನೆ ಅಲ್ಲದೆ ಬೇರೆ ಸಂಗತಿಗಳಿಂದ ಪೂರ್ವಗ್ರಹೀತರಾಗಿ ವಿಮರ್ಶೆ ಮಾಡಲು ಹೊರಟಂತೆ (ಆದರೆ ಓದುಗರು ಅಥವಾ ಪತ್ರಿಕೆಗಳಿಗೆ ಕಾಲಂ ವಿಮರ್ಶೆ ಬರೆಯುವವರಿರಲಿ, ಗಂಭೀರ ಧೋರಣೆಯುಳ್ಳ ವಿಮರ್ಶಕರು ಕೂಡ ಇಂತಹ ಪ್ರಯತ್ನಗಳಲ್ಲಿ ತೊಡಗುವುದನ್ನು ನಾವು ಕಾಣುತ್ತೇವೆ. 'ಮೂಕಜ್ಜಿಯ ಕನಸುಗಳು' ಕಾದಂಬರಿಯಲ್ಲಿನ ವಿಚಾರಗಳಿಗಾಗಿಯೇ ಅದು ಕಾರಂತರ ಅಷ್ಟು ಉತ್ತಮ ಕಾದಂಬರಿಯಲ್ಲದಿದ್ದರೂ ಎಷ್ಟು ಜನ ವಿಮರ್ಶಕರು ನಮ್ಮಲ್ಲಿ ಅದನ್ನು ಕುರಿತು ಅನಗತ್ಯವಾದ ಉತ್ಸಾಹದಿಂದ ಮಾತಾಡಿಲ್ಲ). ನನ್ನ ಈ ಪ್ರಬಂಧದಲ್ಲು ಇಂತಹ ಅಪಾಯಗಳು ಇರಬಹುದೆಂಬ ಸೂಚನೆ ಕೊಡಲು ಇಷ್ಟು ಪೀಠಿಕೆ.

ಕಾರಂತರ ಕಾದಂಬರಿಯ ಜಗತ್ತು ನಮ್ಮೆಲ್ಲರಿಗೂ ತುಂಬಾ ಆಪ್ತವಾಗಿರುವುದರಿಂದ ಧರ್ಮ, ಸಮಾಜವನ್ನು ಕುರಿತು ಅವರು ಮಂಡಿಸುವ ಅಭಿಪ್ರಾಯಗಳನ್ನು ಬಿಟ್ಟು ನನ್ನ ಪರಿಶೀಲನೆಯನ್ನು ಈ ಕೆಲವು ಪ್ರಶ್ನೆಗಳ ಚೌಕಟ್ಟಿನಲ್ಲಿ ಪರಿಶೀಲಿಸುತ್ತೇನೆ.

(ಅ) ಧರ್ಮ, ದೇವರು ಕುರಿತ ಅವರ ವಿಚಾರಗಳು ಕಾದಂಬರಿಗಳ ಚೌಕಟ್ಟಿಗೆ ಬರುವ ಕ್ರಮ ಎಂತಹುದು? ಅದಕ್ಕಾಗಿ ಕಾರಂತರು ಹುಡುಕುವ ಉಪಾಯಗಳಾವುವು ?

(ಆ) ದೈವ-ಧರ್ಮವನ್ನು ಕುರಿತ ಅವರ ವಿಚಾರಗಳಲ್ಲಿ ನಮ್ಮ ಸಮಾಜದ ಆಶಯಗಳಿಗೆ ಕಾರಂತರು ಎಲ್ಲಿ ಹತ್ತಿರ ಮತ್ತು ಎಲ್ಲಿ ಭಿನ್ನ ?

(ಇ) ಸಾಹಿತ್ಯವನ್ನು Inter Disciplinaryಯಾಗಿ ನೋಡಬೇಕೆಂಬ ಮಾತು ಇವತ್ತು ಫ್ಯಾಶನ್ ಆಗಿದ್ದರೂ ಇದರ ಆಗತ್ಯವನ್ನು ಸಮರ್ಥವಾಗಿ ಕಂಡುಕೊಂಡ ಕಾರಂತರು ಧರ್ಮದಂತಹ ವ್ಯಾಪಕವಾದ ವಿಷಯಕ್ಕೆ ತಮ್ಮ ಕಾದಂಬರಿಗಳಲ್ಲಿ ತರುವ ಒಳನೋಟದ ಮೂಲಗಳಾವುವು ?

(ಈ) ಕಾರಂತರ ಕಾದಂಬರಿಗಳಿಂದಾಚೆಗೆ ಉಳಿಯುವ ಧರ್ಮದ ಕೆಲವು ಆಯಾಮಗಳಿಗೆ ಕಾರಂತರ ಕಾದಂಬರಿಗಳಲ್ಲೆ ಏನಾದರೂ ಸೂಚನೆ ಇದೆಯೆ ?

ಜಗತ್ತಿನ ಸೃಷ್ಟಿಯ ಬಗ್ಗೆ ಅದರ ವೈವಿಧ್ಯದ ಬಗ್ಗೆ ಕಾರಂತರಿಗೆ ವಿಸ್ಮಯವಿದ್ದರೂ ದೇವರು, ಧರ್ಮಗಳನ್ನು ಸೃಷ್ಟಿಸಿದವನು ಮನುಷ್ಯನೆ ಎಂಬುದರ ಬಗ್ಗೆ ಅವರಿಗೆ ಯಾವ ಅನುಮಾನವೂ ಇಲ್ಲ. ಕಾರಂತರಿಗೆ ದೇವರಿದ್ದಾನೆಯೊ ಇಲ್ಲವೊ ಅನ್ನುವುದಕ್ಕಿಂತ, ಅವನ ಅವತಾರಗಳು ಹತ್ತೊ ಅಥವಾ ಹನ್ನೊಂದೊ ಅನ್ನುವುದಕ್ಕಿಂತ, ಅದರ ಶುಷ್ಕ ಚರ್ಚೆಗಿಂತ, ದೈವತ್ವದ ಅಭೀಪ್ಸೆ ಮನುಷ್ಯನಿಗೆ ಸಹಜವಾದದ್ದು ಮತ್ತು ಆತನ ಮೂಲಭೂತ ಅಗತ್ಯಗಳಲ್ಲೊಂದು ಎಂಬುದರಲ್ಲಿಯೇ ಕಾರಂತರಿಗೆ ಹೆಚ್ಚು ಆಸಕ್ತಿ. ಈ ಅಭೀಪ್ಸೆ ಹತ್ತು ಹಲವು ರೀತಿಗಳಲ್ಲಿ ಮನುಷ್ಯನಿಗೆ ನೆರವಾಗುವುದನ್ನು ಕಾರಂತರು ಗಮನಿಸುತ್ತಾರೆ. ಇನ್ನೂ ಕಂಡುಕೊಳ್ಳಲಾಗದ ತನ್ನ ಎತ್ತರಗಳನ್ನು ಕಂಡುಕೊಳ್ಳಲು, ಬದುಕಿನ ಸಾರ್ಥಕತೆಯ ಅರ್ಥ ತಿಳಿಯಲು, ತಮ್ಮ ನಂಬಿಕೆಗಳಿಗೆ ಅನಂತತೆಯ ಮತ್ತು ಪಾವಿತ್ರ್ಯತೆಯ ಮುದ್ರೆ ಒತ್ತಲು, ಏನನ್ನಾದರೂ ಪೂಜಿಸಲು ಹುಡುಕುವ ಮನುಷ್ಯನ ಎಲ್ಲ ಕಾಲದ ಆಸೆ ಪೂರೈಸಲು, ತನ್ನ ಭಯವನ್ನು ವರ್ಗಾಯಿಸಲು, ಆಸರೆ ಪಡೆಯಲು ದೈವತ್ವದ ಅಭೀಪ್ಸೆ ಬೇಕು. ಈ ಎಲ್ಲ ಆಸೆ ಭಯ, ಅಭೀಪ್ಸೆಗಳಿಗೆ ಸಾಮಾಜಿಕ ಕಟ್ಟಳೆಗಳನ್ನು ಒದಗಿಸಲು ಧಾರ್ಮಿಕ ಕಟ್ಟಳೆಗಳು, ಧರ್ಮ ಬೇಕು. ತಮ್ಮ ವಿಚಾರ ಸಾಹಿತ್ಯದಲ್ಲಿ, ಭಾಷಣದಲ್ಲಿ, ದೇವದೂತರಂತಹ ವಿಡಂಬನಾತ್ಮಕ ಕಾದಂಬರಿಯಲ್ಲಿ ಭೀತಿಯೇ ದೇವರ ಕಲ್ಪನೆಯ ಮೂಲ ಎಂದು ಹೇಳುವ ಕಾರಂತರು ದೈವತ್ವದ ಅಭೀಪ್ಸೆಗಿರುವ ಸಂಕೀರ್ಣ ಆಯಾಮಗಳನ್ನು, ಅವುಗಳ ಮನುಷ್ಯನ ಒಳ ಮನಸ್ಸಿನ ಪದರುಗಳಲ್ಲಿ ಅಂತರ್ಗತವಾಗಿ ಸೇರಿಕೊಂಡು ವರ್ತಮಾನವನ್ನು ನಿಯಂತ್ರಿಸುವ ಕ್ರಮವನ್ನು ಕಾರಂತರು ನಮಗೆ 'ಮೂಕಜ್ಜಿಯ ಕನಸುಗಳು', 'ಚೋಮನದುಡಿ', ಇಂತಹ ಕಾದಂಬರಿಗಳಲ್ಲಿ ನೀಡುತ್ತಾರೆ. ಆದರೆ ಈ ರೀತಿಯ ವಿಚಾರವನ್ನು ತೋರಿಸುವ ಕಾರಂತರ ಕಾದಂಬರಿಯ ಕ್ರಮ-ಅವರ ವೈಚಾರಿಕ ಚೌಕಟ್ಟಿನ ಮೂಲಕವಲ್ಲ, ತಮ್ಮ ಜೀವನ ಧರ್ಮದ ಸತ್ಯಗಳ ಮೂಲಕ,

ಅವರ ಎಲ್ಲ ಉತ್ತಮ ಕಾದಂಬರಿಗಳು ಒಳಗೊಳ್ಳುವ ಸಂಸಾರಿಕ ಚೌಕಟ್ಟಿನ ಮೂಲಕವೆ. ಕಾರಂತರು ಎಷ್ಟೇ ವೈಚಾರಿಕರಾದರೂ ಕಾದಂಬರಿಕಾರ ಜೀವನದ ಸತ್ಯಗಳನ್ನು ಕಂಡುಕೊಳ್ಳಲು, ಮಂಡಿಸಲು ನೆಚ್ಚಬೇಕಾದ ದಿನನಿತ್ಯದ ಜೀವನಾನುಭವವನ್ನೆ ಉಪಯೋಗಿಸುತ್ತಾರೆ ಎಂಬುದನ್ನು ನಾವು ಗಮನಿಸಬೇಕು. ವ್ಯಕ್ತಿ-ವ್ಯಕ್ತಿ, ವ್ಯಕ್ತಿ-ಕುಟುಂಬ, ದೇವರು-ಮನುಷ್ಯ, ಸಂಸಾರಿ-ಮನುಷ್ಯ, ಈ ಕಲ್ಪನೆಗಳಿಗಿರುವ ಪರಸ್ಪರ ಸಂಬಂಧ ಮತ್ತು ಇರಬೇಕಾದ ಸಂಬಂಧದ ಪರಿಶೀಲನೆಯೆ ಕಾರಂತರ ಕಾದಂಬರಿಗಳ ಜಗತ್ತಿನ ಒಳತೋಟಿಯ ಮೂಲ. ಈ ಒಳತೋಟಿಯ ಹಿನ್ನೆಲೆಯಲ್ಲಿ ಕಾರಂತರ ಕಾದಂಬರಿಯಲ್ಲಿನ ಧರ್ಮದ ಪರಿಶೀಲನೆಕೂಡ ನಡೆಯಬೇಕು.

ವ್ಯಕ್ತಿ, ಕುಟುಂಬ, ಮನುಷ್ಯ, ದೇವರು, ಸಂಸಾರಿ, ಆಧ್ಯಾತ್ಮ-ಈ ಎಲ್ಲ ಕಲ್ಪನೆಗಳಲ್ಲಿ ಪರಸ್ಪರ ತಿಕ್ಕಾಟವಿದೆಯೆಂದು ಕಾರಂತರು ನಂಬುವುದೇ ಇಲ್ಲ. ತಿಕ್ಕಾಟ ಹುಟ್ಟುವುದು ಮನುಷ್ಯನ ತಿಳುವಳಿಕೆಯ ಅಭಾವದಿಂದ ಎಂಬುದು ಅವರ ಖಚಿತ ನಂಬಿಕೆ. ಈ ತಿಳುವಳಿಕೆಯ ಅಭಾವ ಹುಟ್ಟುವುದು ಈ ಎಲ್ಲ ಕಲ್ಪನೆಗಳನ್ನು ಅವುಗಳ ಭ್ರಷ್ಟ ಅರ್ಥದಲ್ಲಿ ಗ್ರಹಿಸಿದಾಗಲೇ, ತಾನುಂಟೋ ಮೂರು ಲೋಕವುಂಟೋ ಎಂದು ಭಾವಿಸ ಹೊರಟ ಕಾರಂತರ ಸನ್ಯಾಸಿಗಳು ಕಟ್ಟಿಕೊಳ್ಳುವುದು ತಮ್ಮ ಮೂಗಿನ ನೇರಕ್ಕೆ ಕಾಣುವ ಮೂರು ಲೋಕವನ್ನು ಮಾತ್ರವೇ. ವ್ಯಕ್ತಿಜೀವನ ಸಮಾಜಜೀವನ, ಧರ್ಮ, ಇವುಗಳೆಲ್ಲದರ ಭ್ರಷ್ಟ ಗ್ರಹಿಕೆಯಿಂದಲೇ ಹುಟ್ಟುವ ಇಂತಹ ವ್ಯಕ್ತಿತ್ವಗಳು ಭ್ರಷ್ಟಗೊಳಿಸುವುದು ಇಂತಹ ಕಲ್ಪನೆಗಳನ್ನೇ. ಕಾದಂಬರಿಯೊಂದರ ಸಹಾಯದಿಂದ ವಿವರವಾಗಿಯೇ ಹೇಳುವುದಾದರೆ ಸನ್ಯಾಸಿಯ ಬದುಕಿನ ಶಂಕರ ರಾಯನಿಗೆ ಜಗತ್ತಿನಲ್ಲೇ ಆಗಲಿ ಕುಟುಂಬದಲ್ಲೇ ಆಗಲಿ ತನ್ನ ಪಾತ್ರದ ಬಗ್ಗೆ ಇರುವ ತಪು ತಿಳುವಳಿಕೆ ತನ್ನ ಸಂಸಾರವನ್ನು ತ್ಯಜಿಸಿ ತಾನೆ ಸಂಸಾರವೆಂಬಂತೆ ಭಾವಿಸಲು ಕುಮ್ಮಕ್ಕು ಕೊಡುತ್ತದೆ. ಅವನ ಹುಡುಕಾಟದ ಮೂಲವೆ ಭ್ರಷ್ಟ ತಿಳುವಳಿಕೆಯಲ್ಲಿರುವುದರಿಂದ ಅವನು ತನ್ನ ಪ್ರಯಾಣದಲ್ಲಿ ಕೆಲ ಸಹಚರರಿಂದ ಪಡೆಯುವ ಬೌದ್ಧಿಕ ತಿಳುವಳಿಕೆಯನ್ನು ದಕ್ಕಿಸಿಕೊಳ್ಳುವ ಅಂತಃಸತ್ವ ಆತನ ವ್ಯಕ್ತಿತ್ವದಲ್ಲಿ ಇಲ್ಲದೆ ಇರುವುದರಿಂದ ತನ್ನ ಮೂಗಿನ ನೇರಕ್ಕೆ ನಡೆಯಲು ಅನುಕೂಲವಾಗುವ ಹಾಗೆ ಆಶ್ರಮವನ್ನು, ಒಂದಿಷ್ಟು ಜನರನ್ನು ಕಟ್ಟಿಕೊಳ್ಳುತ್ತಾನೆ. ಆತನ ಹೊಸ ಸಂಸಾರದಲ್ಲಿ ಹಳೆಯದರಲ್ಲಿ ಇಲ್ಲದ ಆಕರ್ಷಣೆಯೂ ಭ್ರಷ್ಟತೆಯೂ ಕೂಡಿವೆ. ಕಾರಂತರ ಸನ್ಯಾಸಿಗಳೆಲ್ಲರ ಪ್ರೇರಣೆ ಆಧ್ಯಾತ್ಮಿಕವಾದುದೇನಲ್ಲ. ತಮ್ಮ ವ್ಯಕ್ತಿತ್ವದ ಓರೆ ಕೋರೆಗಳು, ತಮ್ಮ ಬಗ್ಗೆಯೆ ತಮಗಿರುವ ದುರಾಸೆ-ಇವು ಅವರ ಹುಡುಕಾಟದ ಪ್ರೇರಣೆಗಳು. ಹಾಗೆ ನೋಡಿದರೆ ಆಧ್ಯಾತ್ಮವೆನ್ನಿಸುವಂತಹ ಪ್ರೇರಣೆಗಳು, ಹುಡುಕಾಟಗಳು ಅವುಗಳ ನಿಜವಾದ ಅರ್ಥದಲ್ಲಿ ಇರುವುದು ದೈನಿಕ ಜಂಜಾಟಗಳಿಗೆ ಸಿಕ್ಕಿಹಾಕಿಕೊಂಡ ದೈನಿಕಗಳ ಒಪ್ಪ್ಪ್ಪ್ಪ್ಪು ಓರಣಗಳಿಗೆ, ಜಂಜಾಟಗಳಿಗೆ, ಬದ್ಧರಾದ ಪಾತ್ರಗಳಿಗೆ

ಹಾದಿ ತಪ್ಪಿದ ತಮ್ಮ ಬಗ್ಗೆಯೆ ತಮಗಿರುವ ಅತಿರೇಕದ ಕಲ್ಪನೆಯಿಂದ ಸಮಾಜದಿಂದ ದೂರವಾದ ಅವರ ಎಷ್ಟೋ ಪಾತ್ರಗಳು ಪುನರುತ್ಥಾನ ಪಡೆಯುವುದು ಈ ರೀತಿಯ ಪ್ರೇರಣೆಗಳ ಮೂಲಕ ಜೀವನದ ಸಾರ್ಥಕತೆಯನ್ನು ಪಡೆಯುತ್ತಿರುವ ಪಾತ್ರಗಳ ಮೂಲಕವೆ. 'ಕನ್ನಡಿಯಲ್ಲಿ ಕಂಡಾತ'ದ ಪರಮೇಶಪ್ಪನ ಪುನರುತ್ಥಾನದ ಮೂಲ ಇರುವುದು ಮಲೆಮನೆ, ಆ ಮನೆಯ ಯಜಮಾನ, ಅಲ್ಲಿಯ ಮಕ್ಕಳು, ಆ ಮನೆಗೆ ಒದಗಿ ಬರುವ ದುರಂತಗಳಲ್ಲಿ. ಸನ್ಯಾಸಿಯ ಬದುಕಿನ ಶಂಕರರಾಯನಿಗೆ ಈ ರೀತಿಯ ಪುನರುತ್ಥಾನಕ್ಕೆ ಮೂಲ ಸಿಗದೆ ಆತ ಸನ್ಯಾಸಿಯ ಮುಖವಾಡದಲ್ಲಿ ಸಂಸಾರಿಯಾಗುತ್ತಾನೆ. ವ್ಯಕ್ತಿ ತನ್ನ ಅನನ್ಯತೆಯನ್ನು ಗುರುತಿಸಿಕೊಳ್ಳುತ್ತಲೇ ತನ್ನ ಸುತ್ತಮುತ್ತಲವರ ಜೊತೆ, ಆ ಮೂಲಕ ಸೃಷ್ಟಿಯ ಜೊತೆ ಸಾಮರಸ್ಯ ಸಾಧಿಸುತ್ತಾ ಹೋಗುವುದನ್ನೆ ತಾತ್ವಿಕರು Religious Experience ಎನ್ನುವುದು. ತನ್ನನ್ನು ತಾನೇ ಗುರುತಿಸಿಕೊಳ್ಳುವ, ಮೀರುವ, ಸೃಷ್ಟಿಯೊಡನೆ ಸಾಮರಸ್ಯವನ್ನು ಸಾಧಿಸುವ ಸಂಕೀರ್ಣ ಆಯಾಮಗಳನ್ನೊಳಗೊಂಡ Religious Experienceನ ಹತ್ತಿರಕ್ಕೆ ಬರುವ ಕಾರಂತರ ಅನೇಕ ಪಾತ್ರಗಳು ದಟ್ಟದರಿದ್ರರು, ದೈನಿಕ ಜಂಜಾಟಗಳಿಗೆ ಸಿಕ್ಕಿ ಹಾಕಿಕೊಂಡವರು, ಹಣ್ಣು ಹಣ್ಣು ಮುದುಕಿಯರು. ವ್ಯಕ್ತಿಯ ತನ್ನತನದ ಪ್ರಶ್ನೆ ಕಾರಂತರಿಗೆ ಮುಖ್ಯವಾದರೂ ಅದು ಅದರ ಸಂಕೀರ್ಣತೆಯಲ್ಲೇ ಅವರನ್ನು ಕಾಡುವುದರಿಂದ ಈ ಸಂಕೀರ್ಣತೆ ಪ್ರಕಟವಾಗುವ, ಸವಾಲಾಗುವ ದೈನಿಕಗಳೆ ಕಾರಂತರಿಗೆ ಮುಖ್ಯವಾಗುವುದು. ಜೀವನದ ಒಟ್ಟು ವಿನ್ಯಾಸದಲ್ಲಿ, ಸಣ್ಣಪುಟ್ಟ ದೈನಿಕಗಳಲ್ಲೆ, ಇಲ್ಲಿಯ ಸಂಭ್ರಮ, ರೋಗರುಜಿನ 'ಕಷ್ಟ ಕಾರ್ಪಣ್ಯಗಳಲ್ಲೆ' ಅವುಗಳಿಂದಾಗಿ ಮಾಡಿಕೊಳ್ಳಬೇಕಾದ ವ್ಯವಸ್ಥೆ ಮತ್ತು ಹೋರಾಟ ಇವುಗಳಿಂದಾಗಿಯೆ ವ್ಯಕ್ತಿಗೆ ತನ್ನನ್ನು ತಾನು ಮಾಗಿಸಿಕೊಳ್ಳುವ ಶಕ್ತಿ ಇರುವುದು ಎಂದು ನಂಬುವ ಕಾರಂತರಿಗೆ ಧೀರೋಧಾತ್ತ ನಾಯಕರ ಪಾತ್ರ ಸೃಷ್ಟಿಯ ಅಗತ್ಯವಾಗಲೀ, ನಾಟಕೀಯ ತಿರುವುಗಳನ್ನು ಹೊಂದುವ ಬದುಕಿನ ಕ್ರಮದ ಪಾತ್ರಗಳ ಅಗತ್ಯವಾಗಲೀ, ತೀರಾ ಢಾಳಾಗಿ ಕಾಣುವ ತಾತ್ವಿಕತೆಯ ಅಗತ್ಯವಾಗಲೀ ಬೀಳುವುದಿಲ್ಲ. ತೀರಾ ಸಾಧಾರಣರ ಸಾಧಾರಣ ಬದುಕಿನ ಕ್ರಮದಲ್ಲೆ ಜೀವಸೆಲೆಯನ್ನು ಜೀವನದ ಘನತೆಯನ್ನು ಎತ್ತಿ ತೋರಿಸುವ ಕ್ರಮ ಕಾರಂತರದು. 'ಲೋಕ ಸಂತಾಪ' - ಇದು ಕಾರಂತರು ಒಂದು ಕಾದಂಬರಿಯಲ್ಲಿ ಬಳಸುವ ಪದ. 'ಶನೀಶ್ವರನ ನೆರಳಿನಲ್ಲಿ'ನ ಅಜ್ಜಿಯ ಮಕ್ಕಳು, ಮೊಮ್ಮಕ್ಕಳು, ಏಕೆ ಪ್ರಬುದ್ಧರಾಗಲಿಲ್ಲ ಎಂಬುದಕ್ಕೆ ಕಾರಣಗಳನ್ನು ವಿವರಿಸುತ್ತಾ ಕಾರಂತರು ಜೀವನದಲ್ಲಿ ಅವರು ಮಾಗಲು 'ಲೋಕಸಂತಾಪ'ದ ಬಿಸಿ, ಅನುಭವ, ಅವರಿಗೆ ತಟ್ಟಲಿಲ್ಲ ಅನ್ನುತ್ತಾರೆ. ಕಾರಂತರು 'ಲೋಕ ಸಂತಾಪ'ದ ಕಾದಂಬರಿಕಾರರು 'ಲೋಕ ಸಂತಾಪ' ಹುಟ್ಟುವ ಮತ್ತು ಅದನ್ನು ವ್ಯಕ್ತಿಯೊಬ್ಬನು ಅನುಭವಿಸುವ ವಿಧಾನಗಳು ವೈವಿಧ್ಯಪೂರ್ಣವಾದ್ದರಿಂದ ಎಲ್ಲ ರೀತಿಯ ಬದುಕಿನ ಕ್ರಮಗಳೂ ಗೌರವಾರ್ಹವೆ—ಪ್ರಾಮಾಣಿಕತೆ ಮತ್ತು ಶ್ರದ್ಧೆಯಿದ್ದಲ್ಲಿ. ಬಹುಶಃ ಈ ಕಾರಣದಿಂದಲೇ ಕಾರಂತರು ತಮ್ಮ ಪಾತ್ರಗಳು ಮಾನಸಿಕ

ಲೋಕದ ವಿಶ್ಲೇಷಣೆಯಲ್ಲಿ, ಅವುಗಳು ತಮ್ಮ ಜೀವನ ಸಫಲತೆಯನ್ನು ಕಂಡುಕೊಳ್ಳು ಹಾದಿಯ ವಿಶ್ಲೇಷಣೆಯಲ್ಲಿ ನಮ್ಮ ಸಂಸ್ಕೃತಿಯಿಂದಲೇ ಆಯ್ದ ಪರಿಕರಗಳ ಸಹಾಯ ಪಡೆಯುವುದು. ಪಾಶ್ಚಾತ್ಯ ಜೀವನ ಕಲ್ಪನೆ, ಸಮಾಜ ಕಲ್ಪನೆ, ಇವುಗಳು ನಮ್ಮ ಸಾಹಿತ್ಯಿಕ ಸಾಂಸ್ಕೃತಿಕ ಆಲೋಚನೆಗಳನ್ನು ಬಹಳವಾಗಿ ಪ್ರಭಾವಗೊಳಿಸಿರುವುದರಿಂದ ಕಾರಂತರು ನಿರ್ದಿಷ್ಟ ಜೀವನ ದೃಷ್ಟಿಕೋನದಿಂದ ಬರೆಯುತ್ತಾರೆ ಎಂದು ಕೆಲವರಿಗೆ ಅನ್ನಿಸಿರಲಿಕ್ಕೆ ಸಾಕು. ಕಾರಂತರು ತಮ್ಮ ಪಾತ್ರಗಳಿಗೆ ಸ್ವಚ್ಛಂದತೆ ನೀಡುವುದಿಲ್ಲ ಎಂಬ ಆಪಾದನೆಯೂ ಈ ಹಿನ್ನಲೆಯದೆ. ಆದರೆ ಅನುಭೂತಿಯಿಂದ ಎಲ್ಲವನ್ನೂ ಒಡ ಮೂಡಿಸುತ್ತ, ಮಂಡಿಸುತ್ತ ಹೋಗಬೇಕಾದ ಕಾದಂಬರಿಯಂತಹ ಮಾಧ್ಯಮದಲ್ಲಿ ಇಂತಹ ಪ್ರಯತ್ನಗಳು ಸಾಧ್ಯವೇ? ಕಾರಂತರು ತಮ್ಮ ವೈಚಾರಿಕತೆ, ವೈಜ್ಞಾನಿಕತೆ ಗಳನ್ನು ಬದಿಗಿಟ್ಟು ಕೂಡ ಅವುಗಳನ್ನು ತಮ್ಮ ಜೀವನದ ತಳಹದಿಯನ್ನಾಗಿ ಒಪ್ಪದ ಪಾತ್ರಗಳನ್ನು ಕೂಡ ತಮ್ಮ ಯಶಸ್ವೀ ಕಾದಂಬರಿಗಳಲ್ಲಿ ಒಡಮೂಡಿಸಿರುವುದೇ ಮೇಲೆ ಹೇಳಿದ ಆಪಾದನೆ ತುಂಬಾ ತೆಳುವಾದದ್ದು ಎಂಬುದನ್ನು ಸೂಚಿಸುತ್ತದೆ. ಆದರೆ ವಿಪರ್ಯಾಸವೆಂದರೆ, ಕಾರಂತರು ಅಷ್ಟಾಗಿ ಯಶಸ್ಸು ಗಳಿಸದ ಕಾದಂಬರಿಗಳಲ್ಲಿ, ಅವರ ಅನುಭೂತಿಯನ್ನು ಪಡೆಯಲಾಗದ ಪಾತ್ರಗಳು, ಆಧುನಿಕ ಸಮಾಜದ ಪಾತ್ರಗಳು- ಯಶವಂತರಾಯ, ಜಗನ್ನಾಥ ಇಂತವರನ್ನು ಬಿಟ್ಟರೆ - ಇದೇಕೆ ಹೀಗೆ ?

ಬದುಕಿನ ಬಗ್ಗೆ ಇರುವ ಮತ್ತು ಹುಟ್ಟಿಕೊಳ್ಳುವ ಕಲ್ಪನೆಗಳಿಗಿಂತ ಬದುಕುವ ಕ್ರಮವೇ ಮುಖ್ಯವೆನ್ನುವ ಕಾರಂತರಿಗೆ ಅವರ ಪಾತ್ರಗಳು ಜೀವನವನ್ನು ಹೇಗೆ ಎದು ರಿಸುತ್ತವೆ? ಹೇಗೆ ಮಾಗುತ್ತವೆ? ಎಂಬುದು ಮುಖ್ಯವೇ ಹೊರತು, ಅವು ದೇವರನ್ನ, ನಂಬುತ್ತವೆಯೆ? ಅಥವಾ ಇಲ್ಲವೆ? ಅನ್ನುವುದಲ್ಲ. 'ಅಳಿದ ಮೇಲೆ'ಯ ಯಶವಂತರಾಯ ಮೂಕಜ್ಜಿ. 'ಧರ್ಮರಾಯನ ಸಂಸಾರ'ದ ಸರಸೋತಿ, 'ಮರಳಿ ಮಣ್ಣಿಗೆ'ಯ ರಾಮ, 'ಒಂಟಿದನಿ'ಯ ಜಗನ್ನಾಥ ಹೀಗೆ ಕಾರಂತರಲ್ಲಿ ಹಲವು ರೀತಿಯ ವ್ಯಕ್ತಿಗಳು—ಹಲವು ರೀತಿಯ ನಂಬಿಕೆಗಳು, ಅನೇಕ ರೀತಿಯಲ್ಲಿ ಬದುಕಿನ ಸಫಲತೆಯನ್ನು ಕಂಡುಕೊಳ್ಳುವ ಕ್ರಮ—ಇವು ನಮಗೆ ಕಾರಂತರಲ್ಲಿ ಸಿಗುತ್ತವೆ. ಇವು ಲೇಖಕರನ್ನು, ಜೀವನವನ್ನು ಒಂದು Model ಆಗಿ ನೋಡುವಂತೆ ಅಥವಾ ಬದುಕಿನಲ್ಲಿ ಒಂದು ಮಾದರಿಗಾಗಿ ಹುಡುಕು ವಂತೆ ಪ್ರೇರೇಪಿಸದೆ ಜೀವನದ ನಿರಂತರ ಸ್ವಚ್ಛಂದತೆಯನ್ನು ಗುರುತಿಸಲು ಆಹ್ವಾನ ನೀಡುತ್ತವೆ. ಕಾರಂತರು ಇದಕ್ಕೆ ಬದ್ಧರಾದವರು. ಆದ್ದರಿಂದ ಧರ್ಮ. ದೇವರಂತಹ ನಿರ್ದಿಷ್ಟ ಕಲ್ಪನೆ ಅವರ ಕಾದಂಬರಿಗಳಲ್ಲಿ ಕೆಲಸ ಮಾಡುತ್ತವೆ ಎಂಬುದು ನಾವು ಭಾವಿಸುವಷ್ಟು ಮುಖ್ಯವಾಗಲಾರದು.

'ಮೂಕಜ್ಜಿಯ ಕನಸುಗಳು', 'ಚೋಮನದುಡಿ'ಯಂತಹ ಕಾದಂಬರಿಗಳು ಮೇಲಿನ ನನ್ನ ಮಾತನ್ನು ಪುಷ್ಟೀಕರಿಸುತ್ತವೆ. ಗತಕಾಲ, ಮನುಷ್ಯ ಜೀವನ ಇವುಗಳ ಕಾಣ್ಕೆಗೆ ಬೆಲೆ ಬರುವುದು ಮೂಕಜ್ಜಿಯ ಕಾಣ್ಕೆಯಿಂದಲೇ ಅಲ್ಲ, ಅವಳ ಜೀವನ ಕ್ರಮದಿಂದ; ಅವಳ

ವ್ಯಕ್ತಿತ್ವದಿಂದ. ಆಕೆ ನೊಂದವಳು, ನೋವನ್ನು ನುಂಗಿಕೊಂಡು ಸಮಾಜಮುಖಿಯಾದವಳು.' ತನ್ನ ಕಾಣ್ಕೆಗಳ ಜೊತೆಗೆ ವರ್ತಮಾನದಲ್ಲಿ,' ಕೌಟುಂಬಿಕ ಜೀವನದಲ್ಲಿ, ಪಾಲ್ಗೊಳ್ಳುತ್ತಿರುವವಳು. ಇದು ಮೂಕಜ್ಜಿಯ, ಆ ಮೂಲಕ ಕಾದಂಬರಿಯ ಮೌಲ್ಯವನ್ನು ಹೆಚ್ಚಿಸುತ್ತದೆ. ಕಾದಂಬರಿಯ ಘಟನೆಗಳು ಮೂಕಜ್ಜಿಯ ಕಾಣ್ಕೆಗೆ ಪೂರಕವಾಗಿ ಬರುತ್ತವೆ. ಕಾರಂತರ ಎಲ್ಲ ಕಾದಂಬರಿಗಳಿಗಿರುವ ದೈನಿಕದ ಚೌಕಟ್ಟು, ಇತರ ಪಾತ್ರಗಳಂತೆಯೆ ಕಾಣುವ ಮೂಕಜ್ಜಿ ಈ ಕಾದಂಬರಿಯನ್ನು ವೈಚಾರಿಕ ರಂಜಕ ಕೃತಿಯಿಂದಾಚೆಗೂ ಒಂದು ಮುಖ್ಯವಾದ ಕಾದಂಬರಿಯನ್ನಾಗಿ ಮಾಡಿವೆ. ಕಾರಂತರ ವೈಚಾರಿಕತೆ ಪ್ರಕಟವಾಗುವ ಕ್ರಮವನ್ನು ಮೂಕಜ್ಜಿ ಸೂಚಿಸುತ್ತದೆ.

ಧರ್ಮ-ಸಮಾಜ—ವ್ಯಕ್ತಿ ಇವುಗಳಿಗಿರುವ ಸಂಕೀರ್ಣ ಸಂಬಂಧ ಕಾರಂತರ ಪ್ರಾರಂಭದ ಕಾದಂಬರಿಗಳಲ್ಲಿ ಒಂದಾದ 'ಚೋಮನದುಡಿ'ಯಲ್ಲಿ ಇನ್ನೂ ಚೆನ್ನಾಗಿ ವ್ಯಕ್ತವಾಗುತ್ತದೆ. ಮನುಷ್ಯನ ಕನಸುಗಳನ್ನಿರಲಿ ಆತನ ಅಗತ್ಯವನ್ನು ಕೂಡ ಅರ್ಥ ಮಾಡಿಕೊಳ್ಳಲಾಗದ ಗೊಡ್ಡು ಧಾರ್ಮಿಕತೆ, ಸಾಮಾಜಿಕ ಕಟ್ಟಳೆಗಳಿಂದ ತುಂಬಿದ ಹಿಂದೂ ಸಮಾಜ; ಮನುಷ್ಯನ ಅಗತ್ಯಗಳನ್ನು ಪೂರೈಸುವ ನೆಪದಲ್ಲಿ ಆತನ ಕಲಾತ್ಮಕತೆಯನ್ನು, ಕನವರಿಕೆಯನ್ನು, ಬದುಕಿನ ಬಗ್ಗೆ ಇರುವ ಸುಂದರ ಕಲ್ಪನೆಗಳನ್ನು ಕೊಂದುಹಾಕುವ ಕ್ರಿಶ್ಚಿಯಾನಿಟಿ, ಇವುಗಳ ಮಧ್ಯೆ ಸಂಗೀತವೊಂದಕ್ಕೆ ಮಾತ್ರ ತನ್ನ ತುಡಿತ ಗೊತ್ತಿದೆಯೆನ್ನುವ ಚೋಮ-ಇವೆಲ್ಲ ಒಂದು ಕಡೆಯಾದರೆ ಯೌವ್ವನದ ಆಸೆ, ತಂದೆಯ ಮೇಲಿನ ಪ್ರೀತಿ, ಸಮಾಜದ ನೈತಿಕತೆ – ಇವುಗಳ ನಡುವೆ ತೊಳಲಾಡುವ ಬೆಳ್ಳಿ, ಅಪ್ಪನ ಸಾವಯುವ ಜೀವನದ ಕುಟುಂಬದ ಕಲ್ಪನೆಗಳನ್ನು ಒಪ್ಪಿಕೊಳ್ಳಲಾಗದ ಮಕ್ಕಳು, ತನ್ನ ಮಾನವೀಯತೆಯನ್ನು ವ್ಯಕ್ತಗೊಳಿಸಲಾಗದ ಸಂಕಪ್ಪಯ್ಯ ಧರ್ಮ, ಮಾನವೀಯತೆಯ ಮುಖವಾಡದಲ್ಲಿ ತಲೆ ಎತ್ತುತ್ತಿರುವ ಹೊಸ ಆರ್ಥಿಕ ಶಕ್ತಿಗಳು—ಹೀಗೆ ಕಾದಂಬರಿ ತನ್ನ ಕಾಲದ ಎಲ್ಲ ಸಂಕೀರ್ಣತೆಯನ್ನು ತೆಕ್ಕೆಗೆ ಹಾಕಿಕೊಳ್ಳುತ್ತದೆ. ಧರ್ಮ, ಸಮಾಜ, ಲೈಂಗಿಕತೆ ಯಾವುದೇ ಕಲ್ಪನೆಗಳು ಕಾರಂತರ ಕಾದಂಬರಿಯ ಜಗತ್ತನ್ನು ತೆಳುವಾಗಿಸಲಾರವು. ಅವರ ಕಾದಂಬರಿಗಳು ಪ್ರಕಟಿಸುವ ಸಂಕೀರ್ಣತೆ ಅವರು ಹೇಳುವ ವಿಚಾರಗಳ ಸ್ಪಷ್ಟತೆ ಅಥವಾ ಗಹನತೆಗಿಂತ ಹೆಚ್ಚು ಮುಖ್ಯವಾದದ್ದು.

ಮೇಲೆ ಹೇಳಿದ ಸಂಕೀರ್ಣತೆಗೂ ನಾನು ಎತ್ತಿದ ಇನ್ನೊಂದು ಪ್ರಶ್ನೆಗೂ ಸಂಬಂಧವಿದೆ. ಕಾರಂತರ ಪ್ರತಿಪಾದನೆಗಳು ನಮ್ಮ ಸಮಾಜದ ಆಶಯಗಳಿಗೆ ಎಷ್ಟು ಹತ್ತಿರವಾದುವು? ಈ ಪ್ರಶ್ನೆಗೆ ಉತ್ತರ ಕೂಡ ಕೆಲವು ವಿರೋಧಾಭಾಸಗಳಿಂದ ಕೂಡಿರಬೇಕಾಗುತ್ತದೆ. ಧರ್ಮದ ಆಶಯಗಳೇನೇ ಇದ್ದರು ಅದು ನಿತ್ಯ ಜೀವನದಲ್ಲಿ ಪ್ರಕಟವಾಗುವಷ್ಟೇ ಸತ್ಯ ಮತ್ತು ಮುಖ್ಯ ಎನ್ನುವ ಕಾರಂತರು ರೂಢಿಯಲ್ಲಿರುವ ಧರ್ಮದ ವಿಸಂಗತಿಗಳನ್ನು ಟೀಕಿಸುತ್ತಾರೆ ಎಂಬುದು ಸರಳವಾದ ಮಾತಾಗುತ್ತದೆ. ಈ ವಿಸಂಗತಿಗಳು ಮತ್ತು ಮನುಷ್ಯನ ಜೀವನಕ್ಕಿರುವ ಸಂಬಂಧವನ್ನು ಅವರು

ಪರಿಶೀಲಿಸುತ್ತಾರೆ. ಇಂತಹ ವಿಸಂಗತಿಗಳು ಉಳಿದುಕೊಂಡಿರುವುದು ಮನುಷ್ಯನ ಅಪಕ್ವತೆಯಿಂದ ಎಂಬುದೇ ಅವರ ನಿಲುವು. ಏಕೆಂದರೆ ಕಾರಂತರಲ್ಲಿ ಪಕ್ವವಾದ ಪಾತ್ರಗಳೆಲ್ಲ ನಾನು ಮೊದಲೇ ಹೇಳಿದ ಹಾಗೆ Religious Experience ನ ಹತ್ತಿರಕ್ಕೆ ಬರುವಂಥವು. ಧರ್ಮ ರೂಢಿಯಲ್ಲೇ ಭ್ರಷ್ಟಗೊಂಡದ್ದು ಎಂಬ ಬಹುಮತದ ಜನಾಭಿಪ್ರಾಯಕ್ಕೆ ಕಾರಂತರು ಬಂದರೂ ಈ ಅಭಿಪ್ರಾಯಕ್ಕೆ ಪೂರಕವಾಗಿ ಬರುವ ನಿರಾಶಾದಾಯಕ ಧೋರಣೆ ಎಲ್ಲವೂ ಭ್ರಷ್ಟಗೊಂಡದ್ದು ಎನ್ನುವುದನ್ನು ಅವರು ನಿರಾಕರಿಸುತ್ತಾರೆ. ರೂಢಿಯಲ್ಲಿ ಭ್ರಷ್ಟಗೊಂಡಿರುವ ಧಾರ್ಮಿಕ ಚೌಕಟ್ಟಿನೊಳಗೂ ಇರುವ ಜೀವಸೆಲೆಯನ್ನು, ಸಫಲತೆಯ ಮಾರ್ಗವನ್ನು ಅವರು ಗುರುತಿಸುತ್ತಾರೆ. ಧರ್ಮದ ಆಶಯಗಳಿಗಿಂತ ಮನುಷ್ಯನ ಶಕ್ತಿಯಲ್ಲೇ ಅವರ ನಂಬಿಕೆ ಹೆಚ್ಚು. ತನ್ನ ಕಾಲದ ಒತ್ತಾಯಗಳನ್ನು, ಸ್ವಯಂ ನಿರ್ಮಿತ ಮಿತಿಗಳನ್ನು ಮೀರುವ ಮನುಷ್ಯನ ಅಂತಃಸತ್ವದ ಬಗ್ಗೆಯ ಕಾರಂತರಿಗೆ ಹೆಚ್ಚು ವಿಶ್ವಾಸ.

ನಮ್ಮ ಧಾರ್ಮಿಕ ಚಿಂತನೆ ಮನ್ನಣೆ ನೀಡಿರುವ ಅನೇಕ ಜೀವನ ಕಲ್ಪನೆಗಳ ಬಗ್ಗೆ ಕಾರಂತರ ನಿಲುವು ಎಂತಹುದು? ಒಟ್ಟಾರೆಯಾಗಿ ಸಾಮಾಜಿಕ ವ್ಯಕ್ತಿತ್ವಕ್ಕೆ ಹೆಚ್ಚು ಪ್ರಾಧಾನ್ಯತೆ ನೀಡುವ ನಮ್ಮ ಧಾರ್ಮಿಕ ಚಿಂತನೆ ವ್ಯಕ್ತಿಯ ಅನನ್ಯತೆಯನ್ನು ಅಷ್ಟು ಪ್ರಮುಖವಾಗಿ ತೆಗೆದುಕೊಳ್ಳುವುದಿಲ್ಲ. ಕಾರಂತರು ಕೂಡ ವ್ಯಕ್ತಿಯ ಸಾಮಾಜಿಕ ಹೊಣೆ, ಪ್ರಾಧಾನ್ಯತೆಗಳಿಗೆ ಹೆಚ್ಚು ಒತ್ತು ನೀಡುವಂತೆ ಕಂಡರೂ ಸಮಾಜ ಮತ್ತು ವ್ಯಕ್ತಿಗಳ ನಡುವೆ ದ್ವಂದ್ವವಿದೆಯೆಂದು ಅವರು ನಂಬುವುದಿಲ್ಲ. ವ್ಯಕ್ತಿ ತನ್ನ ಅನನ್ಯತೆಯನ್ನು ಕಂಡುಕೊಳ್ಳುತ್ತಲೇ ಸಮಾಜಕ್ಕೆ ತನ್ನ ಋಣ ಸಲ್ಲಿಸಬಲ್ಲ, ವ್ಯಕ್ತಿ ಮತ್ತು ಸಮಾಜದ ಕಲ್ಪನೆಗಳನ್ನು ಸರಿಯಾಗಿ ಗ್ರಹಿಸಿದ್ದಲ್ಲಿ—ಎಂಬುದನ್ನು ಅಳಿದ ಮೇಲೆಯ ಯಶವಂತರಾಯ ಸನ್ಯಾಸಿಯ ಬದುಕಿನ ರುಕ್ಮಾಯಿ ಹೇಳುವುದು.

ನಮ್ಮ ಧಾರ್ಮಿಕ ಚಿಂತನೆ ಪ್ರಕೃತ್ತಿದತ್ತವಾದದ್ದು ಸಹಜವಾದದ್ದು, ಸಂಸ್ಕೃತಿ ರೂಢಿಸಿಕೊಳ್ಳಬೇಕಾದದ್ದು, ಕಲಿಯಬೇಕಾದದ್ದು ಎಂದು ಹೇಳುತ್ತದೆ ಮತ್ತು ಈ ರೀತಿ ಕಲಿತದ್ದಕ್ಕೆ ಹೆಚ್ಚು ಒತ್ತು ನೀಡುತ್ತದೆ. ಸುಸಂಸ್ಕೃತ ಎನ್ನುವ ಪದದಲ್ಲಿ, ಸಂಸ್ಕೃತ-ಸಂಸ್ಕೃತಿ ಎನ್ನುವ ಪದದಲ್ಲಿ ಇಂತಹ ಅರ್ಥ ಕಂಡುಬರುತ್ತದೆ. ಪ್ರಕೃತಿ-ಸಂಸ್ಕೃತಿಗಿರುವ ಈ ದ್ವಂದ್ವವನ್ನು ಕಾರಂತರು ನಿರಾಕರಿಸುತ್ತಾರೆ. ಪ್ರಾಕೃತಿಕವಾದ ಸಹಜ ಸ್ವಭಾವಗಳನ್ನು ರೂಢಿಸಿಕೊಳ್ಳುತ್ತಾ ಅದನ್ನು ಆರೋಗ್ಯಪೂರ್ಣವಾಗಿ ಪೂರೈಸಿಕೊಳ್ಳುವುದೇ ಸಂಸ್ಕೃತಿ ಎಂದು ಕಾರಂತರು ಹೇಳುವುದು. ದೈನಿಕದಲ್ಲೆ ವ್ಯಕ್ತಿ ತನ್ನ ಸಫಲತೆಯನ್ನು ಕಂಡುಕೊಳ್ಳಬಲ್ಲ ಎಂದು ಹೇಳುತ್ತಲೆ ಕಾರಂತರು ಈ ಪ್ರಕೃತಿ-ಸಂಸ್ಕೃತಿ ದ್ವಂದ್ವವನ್ನು ನಿರಾಕರಿಸುತ್ತಾರೆ.

ಹೀಗೆ ಇನ್ನೊಂದು ಪರಿಕಲ್ಪನೆಯನ್ನು ಪರಿಶೀಲಿಸಬಹುದು. ಧರ್ಮ ರೂಢಿಯಲ್ಲಿ ಭ್ರಷ್ಟಗೊಂಡಿತು ಎಂದು ಭಾವಿಸುವ ನಮ್ಮ ಧಾರ್ಮಿಕ ಚಿಂತನೆ ಕಾಲವು ಕೂಡ

ಭ್ರಷ್ಟಗೊಳ್ಳುತ್ತಾ ಹೋಗುತ್ತದೆ ಎಂದು ನಂಬುತ್ತದೆ. ಯುಗದ ಕಲ್ಪನೆ, ದೈವದ ಪುನರಾವತಾರ ಈ ಕಲ್ಪನೆಗಳ ಹಿಂದೆ ಇರುವ ವಿಚಾರವೇ ಇದು. ಧರ್ಮ ರೂಢಿಯಲ್ಲಿ ಭ್ರಷ್ಟಗೊಂಡದ್ದು ಎನ್ನುವ ಕಾರಂತರು ಕಾಲದ ಬಗ್ಗೆ ಹಾಗೆ ಭಾವಿಸುವುದಿಲ್ಲ. ದೈನಿಕಕ್ಕೆ ಬದ್ಧವಾದ ಅಲ್ಲೆ ಜೀವನ ಸಫಲತೆಯಿದೆಯೆನ್ನುವ ಕಾರಂತರಿಗೆ ಕಾಲ ಭ್ರಷ್ಟಗೊಳ್ಳುತ್ತ ಹೋಗುತ್ತದೆ ಎನಿಸುವುದಿಲ್ಲ.

ನಮ್ಮ ಧಾರ್ಮಿಕ ಕಲ್ಪನೆಗಳಿಗೆ ಕಾರಂತರು ಹೇಗೆ ಪ್ರತಿಕ್ರಿಯಿಸುತ್ತಿದ್ದಾರೆ ಎಂದು ಪಟ್ಟಿ ಮಾಡುವುದು ನನ್ನ ಉದ್ದೇಶವಲ್ಲ. ಕಾದಂಬರಿಕಾರರಾಗಿ ಅವರಿಗಿರುವ ಜೀವನದೃಷ್ಟಿ, ಧಾರ್ಮಿಕ ಹಿನ್ನೆಲೆಯಿಂದ ಬಂದ ನಮ್ಮ ಅನೇಕ ಪರಿಕಲ್ಪನೆಗಳನ್ನು ಹೇಗೆ ಬದಲಾಯಿಸುತ್ತದೆ, ವಿಸ್ತರಿಸುತ್ತದೆ ಎಂದು ಸೂಚಿಸಲು ಈ ಮಾತುಗಳನ್ನು ಹೇಳಿದ್ದೇನೆ. ಸಮಾಜಶಾಸ್ತ್ರ, ಮಾನವಶಾಸ್ತ್ರ, ಜೀವವಿಜ್ಞಾನಗಳ ಆಳವಾದ ಪರಿಚಯ ವಿರುವ ಕಾರಂತರು, ಹೊಸ ಜೀವನ ಕಲ್ಪನೆಗಳನ್ನು, ಇರುವ ಜೀವನ ಕಲ್ಪನೆಗಳನ್ನು ವಿಸ್ತರಿಸಲು ಸಾಧ್ಯವಾಗಿರುವುದು ಕಾದಂಬರಿ ಮಾಧ್ಯಮದಿಂದಲೆ. ಆದ್ದರಿಂದ ಧರ್ಮ, ದೇವರು ಕುರಿತ ಅವರ ಅಭಿಪ್ರಾಯಗಳ ಮೂಲ ಯಾವುದು ಎನ್ನುವುದಕ್ಕಿಂತ ಇಂತಹವುಗಳನ್ನು ಕುರಿತು ಅವರ ಕಾದಂಬರಿಗಳು ಪರಿಶೀಲಿಸುವ ಕ್ರಮ, ಆ ಕಲ್ಪನೆ ಗಳು, ಕಾದಂಬರಿ ಮಾಧ್ಯಮದಿಂದಲೆ ಬದಲಾಗುವ ಕ್ರಮ ಇವು ಮುಖ್ಯ. ಕಾರಂತ ರಷ್ಟು ದೊಡ್ಡ ಕಾದಂಬರಿಕಾರರಾಗುವವರೆಗೆ ಜೀವನಾನುಭವದ ಹಿನ್ನೆಲೆಯಲ್ಲೆ, ಮೂಸೆಯಲ್ಲೆ ಮೂಡಿದ ಜೀವನ ಧರ್ಮವೊಂದಿರುತ್ತದೆ. ಅದು ಅವರ ಎಲ್ಲ ಬೌದ್ಧಿಕ ತಿಳುವಳಿಕೆಗಿಂತ ಮುಖ್ಯವಾದದ್ದು ಎಂಬುದು ಕೂಡ ಮೇಲಿನ ವಿಶ್ಲೇಷಣೆ ಯಿಂದ ತಿಳಿಯುತ್ತದೆ.

ಕಾರಂತರ ಕಾದಂಬರಿಗಳ ಸ್ವರೂಪ ಮತ್ತು ವಸ್ತು ವಿನ್ಯಾಸದ ಕ್ರಮದಲ್ಲೆ ನಾವು ಕಾರಂತರ ಕಾದಂಬರಿಗಳ ಮಿತಿಯನ್ನು ನೋಡಬಹುದು. ಧರ್ಮದ ಸಾಮಾಜಿಕ ಆಯಾಮ, ನೈತಿಕ ಪ್ರಶ್ನೆಗಳು ಕಾರಂತರನ್ನು ಕಾಡಿದಷ್ಟು Mysticism, ಸೃಷ್ಟಿ, ನಿಗೂಢತೆಯ ಸಮಸ್ಯೆಗಳು ಕಾರಂತರ ಕಾದಂಬರಿಗಳಿಂದ ಬಹಳ ದೂರ. ಕಾರಂತರ ಮಿತಿಗೆ ಅವರ ಕಾದಂಬರಿಗಳಲ್ಲೇ ಸೂಚನೆ ಇದೆ. ಅಥವಾ ಅವರ ಸಾಧನೆಯಲ್ಲೆ, ಒಬ್ಬ ಲೇಖಕನನ್ನು ಇನ್ನೊಬ್ಬ ಲೇಖಕನೊಡನೆ ಹೋಲಿಸಿ ಮಾತಾಡುವುದು ತಪ್ಪಾದರೂ ನಮ್ಮ ಸಮಾಜದ ಸ್ಥಿತಿಯಲ್ಲೆ ಬರೆಯುತ್ತಿದ್ದ ದಸ್ತೂವಸ್ಕಿ, ಟಾಲ್ ಸ್ಟಾಯಂತಹ ಬರಹಗಾರರು, ಧರ್ಮ, ಲೌಕಿಕತೆ, ಅಲೌಕಿಕತೆಯಂತಹ ವಿಷಯ ಗಳನ್ನು ಕುರಿತು ಒಳಗೊಳ್ಳುವ ವಿಭಿನ್ನ ಆಯಾಮಗಳನ್ನು ಕಾರಂತರು ಒಳಗೊಂಡಿಲ್ಲ. ಹೀಗೆಯೇ ಇನ್ನೊಂದು ಪ್ರಶ್ನೆ: ಬೇಂದ್ರೆಯವರ ಕಾವ್ಯವನ್ನು ಸಮಗ್ರವಾಗಿ, ಆಳವಾಗಿ ಅಭ್ಯಾಸ ಮಾಡದಿದ್ದರೂ, ಅಭ್ಯಾಸ ಮಾಡಿದ್ದಷ್ಟರಲ್ಲೆ ಒಂದು ಪ್ರಶ್ನೆ ಕೇಳಬಹುದೆನಿಸು ತ್ತದೆ. ಬದುಕಿನ ಎಲ್ಲ ಮುಖಗಳನ್ನು ಬೇಂದ್ರೆಯವರ ಕಾವ್ಯ ಒಳಗೊಂಡ ಹಾಗೆ

ಅಷ್ಟು ಸಮಗ್ರವಾಗಿ ಬರೆದ ಕಾದಂಬರಿಕಾರರು ನಮ್ಮಲ್ಲಿ ಯಾರಿದ್ದಾರೆ? ಬೇಂದ್ರೆ ಯವರಿಗೆ ಹೋಲಿಸಿದರೆ ಕಾರಂತರು ಕೂಡ ಹೆಚ್ಚು ನವ್ಯರಂತೆ ಒಂದು 'ಮಾದರಿ ಹಿಡಿದು ಬರೆದವರೇನೋ ಎಂದು ಅನ್ನಿಸಲು ಪ್ರಾರಂಭಿಸುತ್ತದೆ. ಕಾರಂತರ ಕಾದಂಬರಿ ಗಳಲ್ಲಿನ ಧರ್ಮ, ರಾಜಕೀಯ ಪ್ರಜ್ಞೆ ಮುಂತಾದ ವಿಷಯಗಳನ್ನು ಕುರಿತ ಚರ್ಚೆ, ಅಧ್ಯಯನಗಳು ಕಾರಂತರನ್ನು ಕುರಿತು ತಿಳುವಳಿಕೆ ನೀಡುವಂತೆ, ನಮ್ಮ ನಾಡಿನ ಸೃಜನಶೀಲ ಪ್ರಕ್ರಿಯೆಯ ಇತಿಹಾಸವನ್ನು, ಸಮಸ್ಯೆಯನ್ನು ತಿಳಿಯಲು ಕೂಡ ಸಹಾಯ ಮಾಡುತ್ತದೆ. ಕಾದಂಬರಿ ಮಾಧ್ಯಮದಲ್ಲಿ ಈ ಕೆಲಸಕ್ಕೆ ಕಾರಂತರಷ್ಟು ಬೇರೆ ಯಾರೂ ನೆರವಾಗುವುದಿಲ್ಲ.

# ಕಾರಂತರ ಕಾದಂಬರಿಗಳಲ್ಲಿ ನಿಸರ್ಗ–ಮಾನವ ಸಂಬಂಧಗಳು*

ಪೋಲಂಕಿ ರಾಮಮೂರ್ತಿ

'ನಿಸರ್ಗ' ನಮಗೆ ಹೊಸ ಪದ. ಅದನ್ನು ನಾವು nature ಎನ್ನುವ ಅರ್ಥದಲ್ಲಿ ಉಪಯೋಗಿಸುತ್ತೇವೆ. ನಿಸರ್ಗ ನೇಚರ್‌ನ ಹಾಗೆ ಸ್ವತಂತ್ರವಾದ ಏಕಪದವಲ್ಲ. 'ನಿ' ಮತ್ತು 'ಸರ್ಗ'—ಈ ಎರಡು ಶಬ್ದಗಳ ಸಂಯೋಜನೆಯಿಂದಾದ ವಿಶೇಷ ಪದ. ಇದಕ್ಕೆ ಕಾರಣ, ಭಾರತೀಯ ಸಂಸ್ಕೃತಿಯಲ್ಲಿ ನಿಸರ್ಗವನ್ನು, ನೇಚರನ್ನು, ಅದರದೇ ಆದ ಅಸ್ತಿತ್ವದಲ್ಲಿ, ಸೃಷ್ಟಿ ಸ್ವಾತಂತ್ರ್ಯದಲ್ಲಿ ಗ್ರಹಿಸುವ, ಆಸ್ವಾದಿಸುವ ಸಂವೇದನೆ ಮೂಡಿ ಬಂದಿಲ್ಲ.

ಭಾರತಕ್ಕೆ ವಲಸೆ ಬಂದ ಆರ್ಯರು ನಿಸರ್ಗಕ್ಕೆ ಹೆದರಿದ್ದಾರೆ. ಅರಣ್ಯ, ವನ ಕಡಲು-ಇವು ಅವರ ಪಾಲಿಗೆ ಪರಕೀಯ ಪ್ರಪಂಚ, ಭಯಾನಕ ಜಗತ್ತು. ಆದ ರಿಂದಲೇ 'ಅರಣ್ಯ', 'ವನ' ಎಂಬ ಶಬ್ದಗಳಿಗೆ ಋಗ್ವೇದದಲ್ಲಿ 'ಪರಕೀಯ ಪ್ರದೇಶ', 'ಅನ್ಯರಾಜ್ಯ', 'ದೂರದೇಶ' ಎಂಬ ಅರ್ಥಗಳಿವೆ, ಅರಣ್ಯ, ವನವೆಂದರೆ ರಾಕ್ಷಸರ ನೆಲೆ. ಕ್ರೂರ ಮೃಗಗಳ ಬೀಡು, ಕಂಗಾಲು ಪ್ರದೇಶ. ಅಂತಹ ಅರಣ್ಯಕ್ಕೆ, ವನಕ್ಕೆ ಜನರನ್ನು ಅಟ್ಟುವುದು ಪರಮದಂಡನೆ, ಹಿಂಸೆಯ ಪರಮಾವಧಿ. ಆದ್ದರಿಂದಲೇ ವನವಾಸ ವೆಂಬುದು ಭಾರತೀಯ ಸಂವೇದನೆಯಲ್ಲಿ ಅತ್ಯಂತ ಕಟುವಾದ ಕಷ್ಟಕಾರ್ಪಣ್ಯಗಳ, ಹಿಂಸೆ ದಂಡನೆಗಳ ರೂಪಕವೂ (Metaphor), ಆದಿರೂಪಕವೂ (archetype) ಆಗಿ, ಜನ ಸಾಮಾನ್ಯರ ಬಾಯಿ ಮಾತಾಗಿದೆ.—'ಅಯ್ಯೋ ಅವರು ಪಟ್ಟ ವನವಾಸ ವೇನು?', 'ಅವರು ಅನುಭವಿಸಿದ ಉಪವಾಸ 'ವನವಾಸಗಳೇನು?' 'ಸಾಕಪ್ಪ ಈ ವನವಾಸ'. 'ವನವಾಸ'ವೆನ್ನುವ ಈ ಸಂಸ್ಕೃತ ಪದ ಬಾಯಿಮಾತಾಗಿ ಜನಪದವಾದಾಗ ಅದರ ಸಂವೇದನಾ ಪ್ರಖರತೆ ಎಷ್ಟರ ಮಟ್ಟಿನದೆಂದು ಮನದಟ್ಟಾಗುತ್ತದೆ. ಅಷ್ಟೇ ಅಲ್ಲ, ಆ ಪದದ ಪ್ರಬಲತೆಯಲ್ಲಿ ಕನ್ನಡದ 'ಕಾಡು' ಎನ್ನುವ ಪದವೂ ಸಂಪೂರ್ಣ ಮಾರಕವಾದ ಅರ್ಥವುಳ್ಳ ಕೆಟ್ಟ ಪದವಾಗಿಬಿಟ್ಟಿದೆ. ಕಾಡಿಗಟ್ಟು, ಕಾಡು ಪಾಲಾಗು, ಕಾಡುಹರಟೆ, ಸುಡುಗಾಡು—ಇಂತಹ ಪದಗಳಲ್ಲಿ 'ಕಾಡು' ಶಬ್ದ ಒಂದೇ ಒಂದು ಹಿತವಾದ ಅರ್ಥವನ್ನು ಪಡೆದುಕೊಂಡಿಲ್ಲ.

---

* ಈ ವಿಷಯವನ್ನು 'ಬೆಟ್ಟದ ಜೀವ', 'ಕುಡಿಯರ ಕೂಸು', 'ಮರಳಿ ಮಣ್ಣಿಗೆ' ಕಾದಂಬರಿಗಳನ್ನು ಕೇಂದ್ರದಲ್ಲಿರಿಸಿಕೊಂಡು ಪರಿಶೀಲಿಸಲಾಗಿದೆ.

ಆದರೆ ಈ ಕಷ್ಟದ, ಬವಣೆಯ ವನವಾಸದಲ್ಲೇ ದೇವರ ಸಾಕ್ಷಾತ್ಕಾರ, ಆಧ್ಯಾತ್ಮ ಸಿದ್ಧಿಗಳಾಗುತ್ತವೆ. ಕಾಡಿನಲ್ಲಿ ಋಷ್ಯಾಶ್ರಮಗಳಿವೆ, ಗುರುಕುಲಗಳಿವೆ, ತಪೋಭೂಮಿಗಳಿವೆ. ಕಾಡಿನಲ್ಲಿ ದೇವಕನ್ಯೆಯರು, ಅಪ್ಸರೆಯರು ವಿಹರಿಸುತ್ತಾರೆ, ನರರನ್ನು ಕೂಡುತ್ತಾರೆ. ಇಲ್ಲಿ ಶಕುಂತಲೆ ಹುಟ್ಟಿ ಬೆಳೆಯುತ್ತಾಳೆ ; ಪಾರ್ವತಿ ಶಿವನನ್ನು ಒಲಿಸಿಕೊಳ್ಳುತ್ತಾಳೆ. ಹೀಗೆ ಕಾಡು ಹಿತವಾಗಬೇಕಾದರೆ, ಅದು ಆಶ್ರಮವಾಗಿ, ಉದ್ಯಾನವಾಗಿ, ವಿಹಾರಸ್ಥಳವಾಗಿ ಮಾರ್ಪಾಡಾಗಬೇಕು ; ಋಷಿಗಳ, ತಪಸ್ವಿಗಳ ಬಲದಿಂದ ಪಳಗಿ ಸೌಮ್ಯವಾಗಬೇಕು. ಕಾಡು ಕಾಡಾಗಿಯೇ ನಿಂತಲ್ಲಿ ಅದು ಭಯಾನಕ, ದುಸ್ತರ, ದುಸ್ಸಾಧ್ಯ.

ವಿಚಿತ್ರವೇನೆಂದರೆ, ಭಾರತದಲ್ಲಿರುವ ಕಾಡಿನ ಸಂಪತ್ತು, ವೈವಿಧ್ಯತೆ ಬೇರೆಲ್ಲೂ ಈ ಪ್ರಮಾಣದಲ್ಲಿ ಇಲ್ಲ. ಆದರೂ ಇಲ್ಲಿನ ಜನ ಕಾಡಿನ ತನ್ನದೇ ಆದ ಅಸಿತ್ವ, ವ್ಯಕ್ತಿತ್ವ, ಪ್ರಜ್ಞಾಪ್ರಪಂಚ, ಜೈವಿಕ ವಿಭಿನ್ನತೆ-ವಿಶಿಷ್ಟತೆಗಳ ಬಗ್ಗೆ ಸಂವೇದನೆ ಮೂಡಿಸಿಕೊಂಡಂತೆ ಅದರ ಜೈವಿಕಾನುಭವವನ್ನು ಪಡೆದುಕೊಂಡಂತೆ ಕಂಡುಬರುವುದಿಲ್ಲ. ನಮ್ಮ ಸಾಹಿತ್ಯ ದಲ್ಲಿ ವರ್ಡ್ಸ್‌ವರ್ತ್, ಹಾರ್ಡಿಯವರಂಥ ನಿಸರ್ಗವನ್ನು ಒಳಹೊಕ್ಕು, ಅದರ ವಿಸ್ಮಯ-ಭಯ-ಆನಂದಗಳನ್ನು ಗ್ರಹಿಸುವ, ಆ ಮೂಲಕ ಅದರ ಅಸ್ತಿತ್ವ, ಸಾರ್ವಭೌಮತೆ ಗಳನ್ನು ಗುರುತಿಸುವ ಅನುಭಾವಿಕ ಬರಹಗಾರರು ಈ ಹಿಂದೆ ಬಂದಂತಿಲ್ಲ. ಆದ್ದ ರಿಂದಲೇ 'ನಿಸರ್ಗ' ಎಂಬ ಪದ ನಮಗೆ ಪಾಶ್ಚಾತ್ಯರಿಂದ ಎರವಲು ಪಡೆದುಕೊಂಡ 'ನೇಚರ್' ಎನ್ನುವ ಅರ್ಥವನ್ನು ಹೊಳೆಸುವ ಹೊಸ ಪದ.

ಈಗ ಈ ನಿಸರ್ಗದ ಅನ್ವೇಷಣೆ, ಆವಿಷ್ಕಾರ ಅನುಭವ–ಬರಹಗಾರರಾದ ಕಾರಂತರ ಕಾದಂಬರಿಗಳಲ್ಲಿ, ಮುಖ್ಯವಾಗಿ ಬೆಟ್ಟದ ಜೀವ, ಕುಡಿಯರ ಕೂಸು, ಮರಳಿ ಮಣ್ಣಿಗೆ–ಈ ಮೂರು ನಿಸರ್ಗವನ್ನು ಪ್ರಧಾನಿಸುವ ಅಥವಾ ನಿಸರ್ಗಕ್ಕೆ ಸಾಕಷ್ಟು ಪ್ರಾಧಾನ್ಯತೆ ಕೊಡುವ ಕಾದಂಬರಿಗಳಲ್ಲಿ—ಹೇಗೆ ನಡೆದಿದೆ ಮತ್ತು ಅದರ ಹಾಗೂ ಮಾನವನ ಸಂಬಂಧಗಳೇನು ಎಂಬುದು ಈ ಲೇಖನದ ವಸ್ತು.

ಕಾರಂತರ ಕಾದಂಬರಿಗಳು ಕಾಡು-ಕಡಲಿನ ಬಗ್ಗೆ ದೀರ್ಘವಾಗಿ ಬರೆದ ಮತ್ತು ಅವನ್ನೇ ಕೇಂದ್ರವಾಗಿಟ್ಟುಕೊಂಡು ಅನ್ವೇಷಿಸುವ ನೀಳ್ಗತೆಗಳು. ಬೆಟ್ಟದ ಜೀವ ಕಾದಂಬರಿಯ ಶೀರ್ಷಿಕೆಯೇ ಸೂಚಿಸುವಂತೆ, ಬೆಟ್ಟದ ಜೀವವೂ ಬೆಟ್ಟದ ಜೀವಿಯ ಜೀವವೂ ಆಗಿ ಒಂದು ಮಹತ್ವಾಕಾಂಕ್ಷೆಯ ಬರವಣಿಗೆಯಾಗಿದೆ. ಈ ಕಾದಂಬರಿಯ ಮುಕ್ತಾಯದ ಪುಟಗಳಲ್ಲಿ ನಿರೂಪಕನಾದ ಶಿವರಾಮಯ್ಯನಿಗೆ ಬೀಳುವ ದುಃಸ್ವಪ್ನ ಹೀಗಿದೆ :

> ಕರ್ಪಿನಲ್ಲಿ ಹುಲಿ ಬಿದ್ದುದನ್ನು ನಾನು ನೋಡಹೋಗಿದ್ದೆನೆಂದೂ, ಹುಲಿಯು ಕರ್ಪನ್ನು ಹಾರಿತೆಂದೂ, ನಾನು ಬಿದ್ದು, ಎದ್ದು ಆ ಗುಡ್ಡ

> ಗಾಡಿನಲ್ಲೆಲ್ಲ ಓಡಿದೆನೆಂದೂ, ಆ ಹುಲಿಯ ಹಿಂದೆಯೇ ಕುಮಾರ ಪರ್ವತದ ಯಾವತ್ತೂ ಪ್ರಾಣಿಗಳು ನನ್ನನ್ನು ಅಟ್ಟಿಬಂದವೆಂದೂ ಕನಸುಕಂಡೆ. ನನ್ನ ಓಟ, ಎಡಹುವಿಕೆ, ಹೆದರಿಕೆ, ಕಳವಳ ನಾನೊಂದು ನದಿಗೆ ಧುಮುಕುತ್ತಲೇ ಮುಗಿದುವು. ಆ ತಂಡಿ ನೀರಿಗೆ ಅಂಜಿ, ಅವು ಈಚೆಯ ದಡದಲ್ಲಿ ಉಳಿದುಬಿಟ್ಟವು. ನಾನು 'ಅಯ್ಯಪ್ಪ' ಎಂದು ಕಣ್ದೆರೆದು ಸಮನಾಗಿ ಎಚ್ಚರಗೊಳ್ಳುತ್ತಲೇ ನಗೆ ಬಂತು. (ಪು. 201)

ಇದು ನಿರೂಪಕನು ಬೆಟ್ಟದ ಜೀವವನ್ನು ಕಣ್ಣಾರೆ ಕಂಡುಂಡು ಅದಕ್ಕೆ ಮಾರುಹೋಗಿ ಪಟ್ಟಣಕ್ಕೆ–ಬಯಲಿಗೆ ಹಿಂದಿರುಗುವ ದಿನ ಕಂಡ ಭೀಕರ ಕನಸು. ಅಂದರೆ ಬೆಟ್ಟದ ಜೀವ ತನ್ನ ವಿವಿಧಾವತಾರಗಳ ವಿಸ್ಮಯಗಳಲ್ಲಿ ನಿರೂಪಕನ ಮನಸ್ಸಿನ ಮೇಲೆ ಯಾವ ಪ್ರಭಾವ ಬೀರಿದೆ, ಅದು ಅವನ ಪ್ರಜ್ಞೆಯ ಯಾವ ಅಂತರಾಳಕ್ಕೆ ಹೊಕ್ಕಿದೆ ಎನ್ನುವ ಸತ್ಯ ವನ್ನು ಹೊರಗೆಡುಹುತ್ತದೆ. ಕಾಡು ಇಲ್ಲಿ ದುಃಸ್ವಪ್ನ – night mare ಆಗಿ – ರಾಮಾಯಣ ಮಹಾಭಾರತಗಳ ನೆನಪನ್ನು ತರುತ್ತದೆ. ಕಾಡಿನ ಈ ಪರಿಕಲ್ಪನೆ ಒಂದು ವಿಶಿಷ್ಟ ರೀತಿಯಲ್ಲಿ ಭಾರತೀಯ ಸಂವೇದನೆಯ ಸ್ಥಾಯಿಯಾಗಿದೆ. ಬೆಟ್ಟದ ಜೀವದ ಕಥೆಯಲ್ಲಿ ಕಾಡನ್ನು ಹೇಗೆ ಗ್ರಹಿಸಲಾಗಿದೆ, ಅದರ ಅನುಭವವೇನು, ಅದರ ಪರಿಣಾಮ ಮಾನವನ ಮೇಲೆ ಎಂಥದು—ಈ ಪ್ರಶ್ನೆಗಳಿಗೆ ಉತ್ತರವನ್ನು ಕಾಣುತ್ತಾ ಹೋಗ ಬಹುದು. ಈ ಕಾಡನ್ನು ಪ್ರವೇಶಿಸುವಲ್ಲಿ ನಿರೂಪಕ 'ಚತುಷ್ಪಾದಿ'ಯಾಗುವುದು, 'ಮಂಗ'ನಾಗುವುದು, 'ಬೆಕ್ಕಾ'ಗುವುದು ಬಹಳ ಸಾಂಕೇತಿಕವಾಗಿದೆ:

> 'ಅಯ್ಯೊ ಜಾಗ್ರತೆ' ಎಂದ ದೇರಣ್ಣ ಜಮುಕು ಜಮುಕು ಕುಣಿಯುವ ಆ ಅಡಿಕೆ ಮರದ ಸೇತುವೆಯ ಮೇಲೆ ಜಿಗಿದು ಸರಿದ. ನಾನು ಜೀವ ಹಿಡಿದು ನಿಂತೆ ; ಕುಳಿತೆ ; ಕೊನೆಗೆ ಚತುಷ್ಪಾದ ಪ್ರಾಣಿಯಂತೆ ಅತೀವ ಸಾಹಸದಿಂದ ಆ ನಾಲ್ಕು ಗಜ ದೂರವನ್ನು ದಾಟಿ, ತಿರುಗಿ ಮನುಷ್ಯ ನಾದೆ. (ಪು. 6).

> ನನಗೆ ಕೆಳಗಡೆ ಪಾತಾಳ ಲೋಕವೇ ಕಾಣಿಸಿತು. ಅವರಿಬ್ಬರೂ ಆಚೀಚಿನ ದರ್ಭೆ ಹುಲ್ಲನ್ನು ಹಿಡಿದು, ಮರ ಇಳಿಯುವಂತೆ ಇಳಿದರು. ನಾನು ನೆಲಕ್ಕೆ ಮುಖ ಮಾಡಿ ಮಂಗನಂತೆ ಇಳಿಯಬೇಕೇ ಅವರಂತೆ ಆ ಪಾತಾಳ ಕಾಣುತ್ತಾ ಇಳಿಯಬೇಕೇ ಎಂದು ಹೊಳೆಯದೆ, ಕೇವಲ ಪೇಟೆಯ ಗೌರವ ಕಾಯುವ ಸಲುವಾಗಿ ಅವರಂತೆ ಕೆಳಕ್ಕಿಳಿದೆ. (ಪು. 52).

> ನಾನು ಮೈಯನ್ನು ಮುರುಟಿಸಿ, ಬೆಕ್ಕಿನ ಮರಿಗಿಂತಲೂ ಸಣ್ಣದಾಗಿ ಮಲಗಿದೆ. (ಪು. 162).

ಕಾಡು ದುರ್ಗಮವಾದುದು ; ದುಸ್ಸಾಧ್ಯವಾದುದು. ಬಟ್ಯ ಹೇಳುವಂತೆ ಕಾಡಿನಲ್ಲಿ 'ಕತ್ತಿ ಇದ್ದರೆ ದಾರಿ' (ಪು. 94) ; ಗೋಪಾಲಯ್ಯನ ಹೆಂಡತಿ ಹೇಳುತ್ತಾಳೆ—'ಅವರು ಗಂಡಸರು ಅವರಿಗೇನು—ಸೊಂಟಕ್ಕೆ ಕತ್ತಿಯನ್ನು ಸಿಕ್ಕಿಸಿಕೊಂಡು ತೋಟಕ್ಕೆ ನಡೆದಾರು' (ಪು. 16) ಕಾಡು ಆನೆ, ಹುಲಿ, ಚಿರತೆ, ಹಂದಿ, ಕಡವೆ—ಈ ಎಲ್ಲ ಪ್ರಾಣಿಗಳಿಂದ ಭಯಾನಕವಾಗಿದೆ. ಗೋಪಾಲಯ್ಯನ ದನ ಲಕ್ಷ್ಮಿಯನ್ನು ಹುಲಿ ಹಿಡಿಯುತ್ತದೆ. ಶಂಕರಿ ಹೇಳುತ್ತಾಳೆ—'ವರ್ಷಕ್ಕೆ ಎಷ್ಟು ಹಸುಗಳನ್ನು ಹುಲಿಯ ಬಾಯಿಗೆ ಬಲಿಕೊಡಬೇಕು ಹೇಳಿ? ಹೋದ ವರ್ಷವೇ ಕಳ್ಳುಂದದಿಂದ ತಂದ ಹೊಸ ಎತ್ತು ಹೋಯಿತು (ಪು.21) ; ಇಲ್ಲಿ ಆನೆಗಳ ಲೂಟಿ (ಪು. 22)ಯಿಂದ, ಕಡವೆಗಳ ಹಿಂಡಿ (ಪು. 23)ನಿಂದ ಅಡಕೆ, ಬತ್ತ, ನೆಲಸಮ' (22), ಬೆಟ್ಟದ ಜೀವಿಯ ಮಾತಿನಲ್ಲೇ 'ವರ್ಷ ವರ್ಷ ಸುರಿಸಿದ ಬೆವರು ನಿಮಿಷದಲ್ಲಿ ದಂಡ' (ಪು. 18). ಇದು 'ಕಗ್ಗಾಡು' (ಪು. 16) ; ಇಲ್ಲಿ ಹರಿದಾರಿ ಗೊಂದು ಒಕ್ಕಲು ವಾಸವಿಲ್ಲ' (ಪು. 16) ಇಲ್ಲಿ ಆಳು ಸಿಕ್ಕುವುದಿಲ್ಲ; ಹೊಲೆಯರನ್ನು ಬೇರೆ ಊರುಗಳಿಂದ ಪುಸಲಾಯಿಸಿ ಕರೆತರಬೇಕು. ಇರುವ ಕೆಲವು ಒಕ್ಕಲು ಜನ ನಿಲ್ಲುವುದಿಲ್ಲ. ಈ 'ದರಿದ್ರ ಕಾಡಿ' (ಪು. 58)ನಲ್ಲಿ ಮಾನೆಗೌಡನ 'ಹಲ್ಲು ಮುರಿ' (ಪು. 197)ದಿದೆ ; ಬಟ್ಯನಿಗೆ ಜ್ವರದ ಗಡ್ಡೆಯಾಗಿ ಹೊಟ್ಟೆ ಉಬ್ಬಿದೆ ; ಈ 'ಜ್ವರದ ಕೊಂಪೆ' (ಪು. 15)ಗೆ 'ಅಪ್ಪಿತಪ್ಪಿ ಬರ' (ಪು. 15) ಲೊಲ್ಲರು. ಹೆಂಗಸರ ಹುಳು ಒಂದೇ ಒಂದು ಸುಳಿಯುವ ಹಾಗಿಲ್ಲ' (ಪು. 15), ಈ ಕಾಡಿಗೆ ಬಂದು ನೆಲೆಸಿದ ನಾರಾಯಣ ಹೀಗಿದ್ದಾನೆ :

> ನಾರಾಯಣ ವಯಸ್ಸಿನಿಂದಲೂ ಚಿಕ್ಕವ. ಶರೀರದಿಂದಲೂ ಹಾಗೆ ಸಣ್ಣ ಆಳು ; ತೆಳ್ಳಗಿನ ಶರೀರ...ಅವನಲ್ಲಿ ಒಡೆದು ಕಾಣಿಸುವ ಎರಡೇ ಎರಡು ವೈಶಿಷ್ಟ್ಯಗಳೆಂದರೆ, ವಯಸ್ಸಿಗಿಂತಲೂ ಅಧಿಕವಾಗಿ ನರೆತ ಕೂದಲು, ಜ್ವರಗಡ್ಡೆಯಿಂದ ಹೊಳಪೇರಿದ ಹೊಟ್ಟೆ (ಪು. 52).

ಕಾಡು ಮುಪ್ಪನ್ನು ಹತ್ತಿರ ತರುವ, ರೋಗದಿಂದ ಕಾಡುವ, ಕಾಡುಮೃಗಗಳಾಗಿ ಕೊಲ್ಲುವ ಮಾರಕ ಪ್ರಪಂಚ. ಇದರಲ್ಲಿ ಜೀವಿಸುವುದೆಂದರೆ, ನಿರೂಪಕನು ಹೇಳುವಂತೆ 'ಹುಲಿಯ ದವಡೆಯಲ್ಲೇ ಬಿಡಾರ ಮಾಡಿ ಬಿಟ್ಟಂತೆ' (ಪು. 22).

ಆದರೆ ಈ ಹುಲಿಯ ದವಡೆಯಲ್ಲಿ ಬಿಡಾರ ಮಾಡಿರುವ ಸಾಹಸಿ ಗೋಪಾಲಯ್ಯ ನಿರೂಪಕನಿಗಿಂತಲೂ 'ಇಮ್ಮಡಿ ಪ್ರಾಯದ' ವ್ಯಕ್ತಿ ; ಇನ್ನೂ ಅರಣ್ಯದೊಡನೆ ಕಾದಾಡುತ್ತಿರುವ ಯೋಧ. ಕತ್ತಿಯನ್ನು ಸೊಂಟದಲ್ಲಿ ಸಿಕ್ಕಿಸಿಕೊಂಡು ಕಾಡಿನಲ್ಲಿ ದಾರಿ ಮಾಡಿದ ಮಾರ್ಗದರ್ಶಕ ; ಕಾಡನ್ನು ತೋಟ ಮಾಡಿದ ಒಕ್ಕಲು ವೀರ. ಈ ಕಗ್ಗಾಡಿನಲ್ಲಿ ತನ್ನ ಸ್ವಾಮ್ಯವನ್ನು ಸ್ಥಾಪಿಸಿ ತನ್ನ ರಾಜ್ಯಭಾರ ನಡೆಸುವ ರಾಜ. ಗೋಪಾಲಯ್ಯನೇ ಹೇಳುವಂತೆ 'ಆನೆಗಳ ಹೆದರಿಕೆಯೊಂದಿಲ್ಲವಾದರೆ ಈ ಊರಿಗೆ ನಾನೇ ಮೈಸೂರು ರಾಜ' (ಪು. 55).

ಬೆಟ್ಟದ ಜೀವಿಯಾದ ಗೋಪಾಲಯ್ಯ ಮತ್ತು ಬೆಟ್ಟದ ಸಂಬಂಧ ಪರಸ್ಪರ ಸಂಗ್ರಾಮವೇ. ಕಾಡು ಮೃಗವಾಗಿ, ಜ್ವರವಾಗಿ ಮಾನವನನ್ನು ಕೊಲ್ಲುತ್ತದೆ. ಮಾನವನು ಕೋವಿಯಾಗಿ, ಕತ್ತಿಯಾಗಿ, ಗುದ್ದಲಿಯಾಗಿ, ಬೆಂಕಿಯಾಗಿ ಕಾಡನ್ನು ಕೊಲ್ಲುತ್ತಾನೆ. ಕಾಡು ಮತ್ತು ಮಾನವ ಒಂದನ್ನೊಂದು ಇಲ್ಲವಾಗಿಸುವುದರಲ್ಲೇ ಜೀವನ. ಗೋಪಾಲಯ್ಯ ಕಾಡನ್ನು ಕಡಿದು, ಸುಟ್ಟು, ಅಗೆದು ತೋಟ ಮಾಡುತ್ತಾನೆ, ಗದ್ದೆ ಮಾಡುತ್ತಾನೆ. ಆಗ ಬೆಟ್ಟ ಸರಿಯುತ್ತದೆ, ಹಿಮ್ಮೆಟ್ಟುತ್ತದೆ—ಅದರ ಸ್ಥಾನದಲ್ಲಿ ಬೇಸಾಯವಾಗುತ್ತದೆ.—'ಮಾವ, ನೀವು ಹೊಳೆಗೆ ಕಟ್ಟನ್ನು ಹಾಕಿ ಬಾಣಬೆಟ್ಟವನ್ನು ಸಾಗುವಳಿ ಮಾಡಿದ್ದು ಯಾವಾಗ' (ಪು. 110). ಆದರಿಂದಲೇ ಕಾಡು ಮತ್ತು ಕಾಡನ್ನು ಬೆಳೆಸುವ, ಸಂರಕ್ಷಿಸುವ ಸರ್ಕಾರ ಗೋಪಾಲಯ್ಯನಿಗೆ ಶತ್ರುಗಳಾಗುತ್ತಾರೆ. ಕಾಡು ಪ್ರಬಲವಾದ ಶತ್ರು. ಅದರೆದುರು ಮಾನವ ಕುಬ್ಜ. ಮಾನವ ತಾನೆಷ್ಟೇ ಪ್ರಬಲನಾಗಿ ಕಾಡನ್ನು ತರಿದರೂ ಅವನು ತನ್ನ ಸಣ್ಣತನವನ್ನು ಮರೆಯಲಾರ ;

> ಭಟ್ಟರೆ, ಈ ದೆವ್ವನ ಹಾಗಿರುವ ಮರಗಳು, ಅವುಗಳನ್ನು ನುಂಗುವಂತೆ ಕಾಣುವ ಬೆಟ್ಟಗಳು-ಇವೆಲ್ಲ ನೋಡಿದರೆ ಮನುಷ್ಯ ಎಷ್ಟು ಸಣ್ಣ ಪ್ರಾಣಿಯಾಗಿ ಕಾಣುತ್ತಾನೆ ಅಲ್ಲವೆ? ಬೆಟ್ಟದ ಮೇಲೆ ಓಡಾಡುವ ಆನೆ ಸಹ ಇರುವೆಯೇ ಅಲ್ಲವೆ! ನನಗೆ ಈ ಸುತ್ತಲೂ ನೋಡಿ ನನ್ನ ಕಿರಿತನದ ನೆನಪು ಬರುತ್ತದೆ. ಇಲ್ಲೇ ಹೀಗಿದ್ದರೆ ಇನ್ನು ಹಿಮಾಲಯ ಹೇಗಿರಬೇಡ! ನಿಮ್ಮ ಕುಮಾರಪರ್ವತ ಐದುಸಾವಿರ ಅಡಿ ಎತ್ತರ ಇದೆಯೆಂದು ಕಾಣುತ್ತದೆ. ಅದು ಐದು ಸಾವಿರ ಅಡಿಯೆಂದರೆ ನಾವು ಐದಡಿ ಚಿಲ್ಲರೆ! ಹಿಮಾಲಯ ಇರುವುದು ಇಪ್ಪತ್ತೊಂಬತ್ತು ಸಾವಿರ. ಆದರೆದುರು ಮಾನವನಿಗೆ ಇರುವೆಯ ಸ್ಥಾನವೂ ಸಿಗಲಾರದು! (ಪು. 130).

ಈ ಪೆಡಂಭೂತ ಕಾಡಿನೆದುರು, ಬೆಟ್ಟದೆದುರು, ಮಾನವ 'ಸಣ್ಣ'ವ, 'ಕಿರಿಯ', 'ಇರುವೆ'. ಇದರೊಡನೆ ವ್ಯವಹರಿಸಬೇಕಾದರೆ ಮಾನವ ತನ್ನ ಅಸ್ತಿತ್ವವನ್ನು, ವ್ಯಕ್ತಿ ಪ್ರತಿಷ್ಠೆಯನ್ನು ಕಳೆದುಕೊಂಡು 'ಚತುಷ್ಪಾದಿ' (ಪು. 6) 'ಮಂಗ'ನಾಗಬೇಕು (ಪು. 52), 'ಬೆಕ್ಕಾ' (162)ಗ ಬೇಕು. ಕಾಡು ಮಾನವನ ಆತ್ಮಗೌರವವನ್ನು, ಸೃಷ್ಟಿ ವಿಭಿನ್ನತೆಯ ಪ್ರತಿಷ್ಠೆಯನ್ನು, ವ್ಯಕ್ತಿ ಪ್ರತ್ಯಯವನ್ನು ಉಳಿಸಿಕೊಡುವುದಿಲ್ಲ. ಅದರೆದುರು ಮಾನವನು ತಗ್ಗಬೇಕು, ಬಗ್ಗಬೇಕು. ಇದಕ್ಕೆ ಮಾನವನ ಪ್ರತೀಕಾರ ಕಾಡನ್ನು ತಗ್ಗಿಸುವುದು, ಬಗ್ಗಿಸುವುದು; ಅದರ ಗಂಭೀರತೆ ಗೌರವಗಳನ್ನು ಅಲ್ಲಗಳೆದು, ಸೆರೆಹಿಡಿದು ಕೊಲ್ಲುವುದು. ಕಾಡಿನ ರಾಜನಾದ ಹುಲಿಯನ್ನು ನಾಯಿಯ ಮಾಂಸದ ಪ್ರಲೋಭಕ್ಕೆ

ತುತ್ತುಮಾಡಿ, ಅದನ್ನು ಬೋನಿನಲ್ಲಿ ಹಿಡಿದು, ನಿಸ್ಸಹಾಯಕ ಸೆರೆಯಲ್ಲಿ ಗುಂಡಿಕ್ಕಿ ಕೊಲ್ಲುವುದು :

> ಹುಲಿಯು ತನ್ನ ಹೋರಾಟದಿಂದ ಸೆದೆಗಳನ್ನು ಕುಲುಕಿತ್ತು. ಒಂದು ಗೂಡಿಗೆ ಒಂದು ಜೀವ ಎಂಬತ್ತಿತ್ತು ಅದರ ಆಕೃತಿ. ದೂರದಿಂದ ಕೆಂಪು ಕಪ್ಪು ಗುರುತೂ, ಕಿವಿಯೊಡೆಯುವ ಆರ್ಭಟೆಯೂ ಅಲ್ಲದೆ ಬೇರೇನೂ ಸ್ಪಷ್ಟವಾಗಲಿಲ್ಲ.
>
> ಆಗ ಒಂದೇ ಬಾರಿಗೆ ಮೂರು ಕೋವಿಗಳು ಈಡನ್ನು ಹಾರಿಸಿದವು. ಢಂ, ಢಂ ಎಂಬ ಧ್ವನಿಗಳೂ ಅಸಾಧ್ಯವಾದೊಂದು ಚೀರಾಟವೂ ಕೂಡಿದ ಸದ್ದಾಯಿತು (ಪು. 202).

ಹುಲಿ ಬೋನಿಗೆ ಬಿದ್ದು ಸತ್ತಮೇಲೆ ಶಿವರಾಮಯ್ಯ 'ಅಯ್ಯೋ, ಇಂಥ ಗಂಭೀರ ಚೆಲುವಿನ ಜೀವಿ, ಈಗ ಹೀಗಾಯಿತೇ' (ಪು. 203) ಎಂದು ಮರುಗುತ್ತಾನೆ; ಅದರ 'ಮೀಸೆಯ ಕೂದಲನ್ನು ಕೀಳು' (ಪು. 203)ತ್ತಾನೆ. ಗೋಪಾಲಯ್ಯ 'ಇವರಿಗೆ ಅದರ ಚರ್ಮವನ್ನು ಕೊಡುವ' (ಪು. 204) ಎಂದು ತೀರ್ಮಾನಿಸುತ್ತಾನೆ. ಹೀಗೆ ಕ್ಷಾತ್ರದಲ್ಲಿ ಬೇಟೆಯಾಡುವ ಹುಲಿ ಬೋನಿನ ಇಲಿಯಾಗಿ, ಮೀಸೆ ಚರ್ಮಗಳನ್ನು ಕಳಕೊಂಡು, ತೇಜೋವಧೆಗೆ, ಹೀನಾಯಕ್ಕೆ ತುತ್ತಾಗುತ್ತದೆ. ಇದು ಅವಮಾನಿತ ಮಾನವನು ಕಾಡಿಗೆ ಮಾಡುವ ಅವಮಾನದ ಪ್ರತೀಕಾರ.

ಈ ಸಂದರ್ಭದಲ್ಲಿ ಕಾಡು ಹೇಗೆ ಅಲ್ಪವಾಗಿಸದೆ ಅವನನ್ನು ಬೆಳೆಸಿ ಬೃಹತ್ತು ಗೊಳಿಸುತ್ತದೆ, ಬ್ರಹ್ಮನನ್ನಾಗಿ ಮಾಡುತ್ತದೆ (ಬ್ರಹ್ಮ ಎಂದರೆ ಬೆಳೆಯುವುದು, ದೊಡ್ಡದಾಗುವುದು ಎಂದರ್ಥ) ಎಂಬುದನ್ನು ಕುವೆಂಪು ಅವರ 'ಶ್ರೀರಾಮಾಯಣ ದರ್ಶನಂ' ಕಾವ್ಯದಲ್ಲಿ ನೋಡಬಹುದು :

> ...ನೋಡುತಿರೆ, ತಾನೆ ಹೊಳೆಯಾದಂತೆ,
> ತಾನಡವಿಯಾದಂತೆ, ತಾನೆ ಗಿರಿಯಾದಂತೆ,
> ತಾನೆ ಬಾನಾದಂತೆ, ತಾನೆಲ್ಲಮಾದಂತೆ,
> ಮೇಣೆಲ್ಲಮುಂ ತನ್ನೊಳಧ್ಯಾತ್ಮಮಾದಂತೆ
> ಭೂಮಾನುಭೂತಿಯಿಂ ಮೈಮರೆದನಾ ರಸಸಿದ್ಧಿ...(ಪು. 163)

ಇಲ್ಲಿ ಕಾಡು-ಅವನು ಅದನ್ನು ನೋಡುತ್ತಿರುವ ಅನುಭವದಲ್ಲೇ 'ನೋಡುತಿರೆ' ಅವನನ್ನು ವಿಸ್ತರಿಸಿ 'ಹೊಳೆಯಾದಂತೆ' ಬೆಳೆಸುತ್ತಾ 'ಅಡವಿಯಾದಂತೆ' ಭೂಮಿಯಿಂದ ಅತ್ಯಂತ ಸಹಜವಾಗಿ ಆನುಷಂಗಿಕವಾಗಿ 'ಬಾನಿ'ಗೆ ಬೆಳಗಿ, ಮಾನವನನ್ನು ವಿರಾಟ ಗೊಳಿಸುತ್ತದೆ. ಇಲ್ಲಿ ನಿಸರ್ಗ ಪೂರಕವಾಗುವುದಷ್ಟೇ ಅಲ್ಲ, ಮಾನವನನ್ನು ಭೂಮ ಗೊಳಿಸಿ ಅವನನ್ನು ವಿರಾಟ್‌ದರ್ಶನದ (cosmic vision) ಅನುಭವಕ್ಕೇರಿಸು

ತ್ತದೆ. ಇದರ ಜೊತೆಗೆ ಕುವೆಂಪು ಅವರ ಹಸಿರು ಕವನವನ್ನು ಕೂಡ ನೆನೆಯಬೇಕು.

ಇದೇ ರೀತಿ, ತೇಜಸ್ವಿಯವರ ಕಾರ್ವಾಲೋ ಕಾದಂಬರಿಯಲ್ಲಿ ನಿರೂಪಕ ಮಿಂಚುಳ್ಳಿಯನ್ನು ವರ್ಣಿಸುವಲ್ಲಿ, ಅದು ಹೇಗೆ ಮಧ್ಯಾಕಾಶದಲ್ಲಿ ರೆಕ್ಕೆಗಳನ್ನು ಪಟಪಟನೆ ಬಡಿಯುತ್ತಾ ಕಪ್ಪುಕೊಳದ ಪಾತಾಳಕ್ಕೆ ಜಿಗಿದು ಬೆಳ್ಳಿ ಮೀನನ್ನು ಕಚ್ಚಿಕೊಂಡು ಆಕಾಶಕ್ಕೆ ಹಾರುವಲ್ಲಿ, ಬೆಳ್ಳಿ ಮೀನಿನ ಬೆಳಕು ಕೊಳದ ಪಾತಾಳಗರ್ಭ ದಿಂದ ಆಕಾಶಕ್ಕೆ ನೆಗೆಯುವ ಜ್ವಾಲೆಯಾಗಿ ಭೂಮ್ಯಾಕಾಶಗಳನ್ನು ಒಂದಾಗಿಸುವ ವಿರಾಟ್‌ದರ್ಶನವೇ ಆಗುತ್ತದೆ ಎಂಬುದನ್ನು ತಿಳಿಯಬಹುದು. (ನೋಡಿ : ಕರ್ವಾಲೋ ಕಥೆ-ರುಜುವಾತು, ಸಂಚಿಕೆ 1).

ಕುಡಿಯರ ಕೂಸು ಕಾದಂಬರಿ ಕಾಡು ಮತ್ತು ಮಾನವನ ಇನ್ನೊಂದು ರೀತಿಯ ಸಂಬಂಧವನ್ನು ಪರಿಶೋಧಿಸುತ್ತದೆ. ಕುಡಿಯರ ಕೂಸು ಕಾದಂಬರಿಯಲ್ಲಿನ ನಿಸರ್ಗ ಚೇತನ ಗೋಪಾಲಯ್ಯನವರಂಥ ನಾಗರಿಕ ಮಾನವನೊಡನೆ ವ್ಯವಹರಿಸುವುದಿಲ್ಲ ; ಆದಿ ಮಾನವರಾದ ಮಲೆ ಕುಡಿಯರೊಡನೆ, ಕಾಡುಮಾನವರೊಡನೆ ವರ್ತಿಸುತ್ತದೆ. ಕುಡಿಯರ ಕೂಸಿನ ಮಾನವ ಕಾಡಿಗೆ ಶರಣು ಹೋದವನು ; ಕಾಡನ್ನು ಕಲ್ಕುಡನಾಗಿ ಮಲೆದೇವರಾಗಿ, ಸುಬ್ರಮಣ್ಯನಾಗಿ ಮರೆ ಹೊಕ್ಕವನು. ಅವನ ಮತ್ತು ಕಾಡಿನ ವ್ಯವಹಾರ ಮಾಧ್ಯಮ-ಭಕ್ತಿ ಮತ್ತು ಪ್ರೇಮ. ಕುಡಿಯರ ಗುರಿಗಾರನಾದ ಕೆಂಚ ಕತೆಯ ಪ್ರಾರಂಭದಲ್ಲೇ ಕಲ್ಕುಡ, ಮಲೆದೇವರು, ಸುಬ್ರಮಣ್ಯ ಇವರಿಗೆ ತನ್ನ ಪೂಜೆಯ ಸೇವೆಯನ್ನು, ಹರಕೆಗಳ ಒಡಂಬಡಿಕೆಗಳನ್ನು ಸಲ್ಲಿಸುತ್ತಾ ತನ್ನ ಮೊಮ್ಮಗ ನಾದ ಕರಿಯ ಮತ್ತು ಕಾಡಿನ ಸಂಬಂಧದ ಬೆಸುಗೆಯನ್ನು ಹಾಕುತ್ತಾನೆ.

ಕುಡಿಯರ ಕೂಸು ಕಾದಂಬರಿಯಲ್ಲಿ 'ನಿಸರ್ಗ' ಪದದ ಯಥೇಚ್ಛವಾದ ಉಪ ಯೋಗವಿದೆ. ಉದ್ದಕ್ಕೂ ನಿಸರ್ಗದ ಕರುಣೆ, ಪ್ರೇಮ ಕೊಡುಗೆಗಳ ವಿವರಣೆ ಇದೆ. 'ನಿಸರ್ಗ ಅವರ ಪಾಲಿಗೆ ಉದಾರವಾಗಿದೆ' (ಪು. 300), ನಿಸರ್ಗ ಚೇತನವಾದದ್ದು ; ಮಾನವನಂತೆ ಆತ್ಮವುಳ್ಳದ್ದು :

> ಮಲೆಗೂ ಒಂದು ಆತ್ಮ; ಬೆಟ್ಟಕ್ಕೂ ಒಂದು ಆತ್ಮ; ಬೆಟ್ಟದ ಒಂದು ಕೋಡಿಗೂ ಒಂದು ಆತ್ಮ; ಗಾತ್ರವಾದ ಮರಕ್ಕೂ ಒಂದು ಆತ್ಮ- ಹೀಗೆಲ್ಲ ಜಡವಸ್ತುಗಳಿಗೆ ಚೈತನ್ಯ ಪ್ರೇರಿಸಿ ಊಹಿಸುವ ಮನೋವೃತ್ತಿ ಯುಳ್ಳ ಈ ಜನಕ್ಕೆ, ತಮ್ಮ ಸುತ್ತಲಿನ ನಿಸರ್ಗಕ್ಕೆ ಆಳಾಗಿ ನಡೆದುಕೊಳ್ಳ ಬೇಕೆಂಬ ನಿತ್ಯಮನೋವೃತ್ತಿ ಉಂಟಾಗುತ್ತದೆ. ಏನಿದ್ದರೂ—ಅವರ ಆ ಕೆಚ್ಚು ಆ ರಂಗದಲ್ಲಿ ನಲಿದಾಡುವ ಪಶುಪ್ರಾಣಿಗಳ ಮೇಲಷ್ಟೆ (ಪು. 202).

ಕಾಡು ಮರವಾಗಿ, ಕಂದರವಾಗಿ, ಕರಡಿ ಹುಲಿಗಳಾಗಿ ಕೆಂಚನ ಮಗ ತಿಪ್ಪ, ತಿಪ್ಪನ ಹೆಂಡತಿ ಚೆನ್ನಿ, ಮಾದನ ತಾಯಿ–ಇವರನ್ನು ತಿನ್ನುತ್ತದೆ. ಕುಡಿಯರು ಕಾಡನ್ನು ಬೇಟೆಯಾಡುತ್ತಾರೆ : ತುಕ್ರ ಕರಡಿಯ ಜೊತೆಯಲ್ಲಿ ಹೋರಾಡುತ್ತಾನೆ ; ಕರಿಯ ಚಿರತೆ ಮತ್ತು ಹುಲಿಯ ಬೇಟೆಯಲ್ಲಿ ಮೈಕೈ ಗಾಯಮಾಡಿಕೊಳ್ಳುತ್ತಾನೆ. ಆದರೆ ಮುಖ್ಯವಾಗಿ ಕುಡಿಯರು ಕಾಡನ್ನು ಅನುಸರಿಸಿ ನಡೆಯುವವರು. ಕಾಡು ಅವರಿಗೆ ಜೇನು, ಏಡಿ, ಸೀಗಡಿ, ಮೀನುಗಳನ್ನು, ಬೇಟೆಯ ಮೃಗಗಳನ್ನು ಕೊಟ್ಟು ಸಲಹುತ್ತದೆ. ಅವರ ಮತ್ತು ಕಾಡಿನ ಮಾಧ್ಯಮ ಪ್ರಮುಖವಾಗಿ-ಒಲವು ಮತ್ತು ಭಕ್ತಿ. ಕರಿಯ ಮತ್ತು ಕಾಡಿನ ಸಂಬಂಧ ಸ್ನೇಹ : 'ಅದರ (ಕರಿಯ ಮಗುವಿನ) ಪ್ರಪಂಚದಲ್ಲಿ ಅಳಿಲು, ಹಕ್ಕಿ, ಕೋತಿ-ಇಂಥ ಚಿಕ್ಕ ಗೆಳೆಯ'ರು (ಪು. 18). ಕರಿಯ ಜಿಂಕೆ ಮರಿಯನ್ನು ಬಲೆಯಿಂದ ಬಿಡಿಸಿ ಸಾಕುತ್ತಾನೆ. ಆಮೇಲೆ ತಾನೇ ಸಂಪಾದಿಸಿದ ಬರ್ಕನ ಮರಿಯನ್ನು ಸಲಹುತ್ತಾನೆ. ಕಡೆಗೆ ಆನೆಯ ಮರಿಯನ್ನು ಪ್ರೇಮದಿಂದಲೇ ಪಳಗಿಸಿ ಅದನ್ನು ಸವಾರಿ ಮಾಡುತ್ತಾನೆ. ತಾನು ಪಳಗಿಸಿದ ಆನೆಯನ್ನು ಸುಬ್ರಮಣ್ಯಕ್ಕೆ ಸವಾರಿಮಾಡಿ, ದೇವರಿಗೆ ಪ್ರದಕ್ಷಿಣೆ ಹಾಕಿಸಿ, ಅದನ್ನು ದೇವರಿಗೆ ಒಪ್ಪಿಸುವ ಸಂಕಲ್ಪ ಮಾಡುತ್ತಾನೆ :

> ಮಲೆಯಲ್ಲಿ ಸಿಕ್ಕಿದ ಆನೆ. ನನ್ನದೆಂದರೇನು ? ಸುಬ್ರಮಣ್ಯ ದೇವರದ್ದು. ಅವನೇ ಕೊಟ್ಟಿದ್ದು. ಇರಿಸಿಕೊಳ್ಳುವಷ್ಟು ದಿನ ಇರಿಸಿಕೊಳ್ಳುತ್ತೇನೆ. ಮತ್ತೆ ಇಲ್ಲಿಗೆ ತಂದು ಬಿಡುತ್ತೇನೆ (ಪು. 375).

ಪುಸ್ತಕದ ಕೊನೆಯಲ್ಲಿ ಕರಿಯ 'ದೈವದ ಕೃಪೆಯಿಲ್ಲದೆ ನಾನು ಆ ದಿನ ಹುಲಿಯನ್ನು ಕೊಲ್ಲುವುದಕ್ಕಿತ್ತೇ' (ಪು. 376) ಎನ್ನುವಲ್ಲಿ, ತಾನು ಸರ್ವಾನುಮತದಿಂದ ಗುರಿಕಾರನಾಗಿ ನಿಲ್ಲುವಲ್ಲಿ ನಿಸರ್ಗದ ದೈವೀಕರಣ ಸಂಪೂರ್ಣಗೊಳ್ಳುತ್ತದೆ.

ನಿಸರ್ಗ ಹೇಗೆ ಕರಿಯನ ಸಂವೇದನೆಯ ಮುಖಾಂತರ ಮಾನವೀಯವಾಗಿ ಆಮೇಲೆ ದೈವತ್ವಕ್ಕೇರುತ್ತದೆ ಎಂಬುದನ್ನು ಗಮನಿಸಬೇಕು :

> ಸ್ಥಳ ಬಂತೆಂದು ಇಬ್ಬರೂ (ಕೆಂಚ ಮತ್ತು ಕರಿಯ) ಗುಹೆಯ ನೆಲದಲ್ಲಿ, ವಿಸ್ಮಯದಿಂದ ನಿಂತರು, ಮಾತನಾಡಿದರು. ಆಡಿದ ಮಾತು 'ಗುಯಿಂ ಗುಯಿಂ' ಎಂದು ಮರುಕಳಿಸತೊಡಗಿತು. ಅವರ ಧ್ವನಿಗೆ ಗುಹೆಯಲ್ಲಿ ಬಿಡಾರ ಮಾಡಿಕೊಂಡಿದ್ದ ಹಲವಾರು ಬಾವಲಿಗಳು ಹಾರಿಹೋದವು. ಕರಿಯ ವಿಸ್ಮಯದಿಂದ ಆ ವಿಶಾಲವಾದ ಗುಹೆಯನ್ನು ನೋಡುತ್ತ ನಿಂತ. 'ಎಷ್ಟು ಚಂದದ ಮನೆ ಇದು ! ಕಂಬ ಬೇಡ; ಕಿಟಕಿ ಬೇಡ. ಇಲ್ಲೇ ಇದ್ದರೆ ಎಷ್ಟು ಚೆಂದ' ಎಂದುಕೊಂಡ (ಪು. 16)...
>
> ಗವಿಯ ಮುಂಭಾಗದ ಒಂದು ಗೋಡೆಯಲ್ಲಿ ಕೊರೆದ ಕಲ್ಲಿನ ಒಂದು ಅರೆಯಿತ್ತು. ಅರೆಯ ಮೈಯಲ್ಲೇ ಉಬ್ಬಿ ಕಾಣಿಸುವ ಬೆಣಚುಗಲ್ಲಿನ

> ಒಂದು ಪದರು ಬೆಳಕಿಗೆ ಹೊಳೆಯುತ್ತಿತ್ತು. ಹೊಳೆದು ಮಿನುಗುವ ಆ ಪದರಿಗೆ ರೂಪರೇಶೆ ಇಲ್ಲದಿದ್ದರೂ ಬೆಳಕಿನಿಂದ ಥಳಿಸುವಾಗ ಅದ ಕ್ಕೊಂದು ರೂಪು ಆಕಾರ ಇರುವಂತೆ ಕಾಣುತ್ತಿತ್ತು. ಅದೇ ಅವನು; ಅವನೇ ಮಲೆರಾಯ! ಮುದುಕ ಮಲೆರಾಯನ ಮುಂದೆ ಸಾಷ್ಟಾಂಗ ವೆರಗಿದ. ಮೊಮ್ಮಗನಿಗೂ ಅಡ್ಡಬೀಳಲು ಹೇಳಿದ. ಅನಂತರ ಕಲ್ಲರೆಗೆ ತುಸು ದೂರದಲ್ಲಿ ಒಂದು ದೀಪ ಉರಿಸಿದ. ಯಾವುದೋ ಕಾಯಿಯು ಕೊಬ್ಬು ನಾರುಗಳನ್ನು ಗುದ್ದಿ ಮಾಡಿದ ಮೊಂಬತ್ತಿಯನ್ನು ನಟ್ಟು, ಕಡ್ಡಿ ಉರಿಸಿ, ಬೆಳಗಿಸಿದ (ಪು. 17).

ಗುಹೆಗಳು 'ನಿಸರ್ಗದ ಮನೆಗಳು', 'ಮಾನವ ಯುಗ ಬರುವ ಮುನ್ನವೇ ನಿಸರ್ಗ ನಿರ್ಮಿಸಿಕೊಟ್ಟ ಅರಮನೆಗಳು' (ಪು. 16), ಬೆಟ್ಟದ ಬೇತಾಳಬಂಡೆಗಳು ಇಲ್ಲಿ 'ಬೆಟ್ಟದ ಗೋಡೆಗಳು', 'ಆಚೀಚೆ ಅವಳ (ಸ್ನಾನ ಮಾಡುವ ಕೆಂಪಿಯ) ಬಚ್ಚಲು ಮನೆಯ ಗೋಡೆಗಳೆಂದು ಅನಿಸುತ್ತದೆ' (ಪು. 165). ಬೆಟ್ಟ, ಕಣಿವೆ, ಅಬ್ಬಿ-ಇವೆಲ್ಲವೂ 'ಗೋಡೆ', 'ಮನೆ', ಬಟ್ಟೆಗಳಾಗಿಬಿಡುತ್ತವೆ :

> ಹಾವಸೆಯಂಟಿಕೊಂಡ ಕಡಿದಾದ ಬಂಡೆಗಳ ಮೈಕಪ್ಪು ಹಸುರು. ಇಂಥ ಗೋಡೆಯ ಸೆರಗಿನಲ್ಲಿ ಅಲ್ಲಲ್ಲಿ ಧುಮುಕುವ ಅಬ್ಬಿಗಳೆಷ್ಟೋ! ಬಿಸಿಲು ಬಿತ್ತೆಂದರೆ-ಯಾರೋ ತೊಯ್ದ ಬಟ್ಟೆಗಳನ್ನು ಬಿಸಿಲಿಗೆ ಒಣಗಿಸಲು ತೂಗಿರುವಂತೆ ಒಮ್ಮೆ ಕಾಣಿಸುತ್ತವೆ (ಪು. 88).

ಹೀಗೆ ನಿಸರ್ಗ ಮಾನವನ ಪರಿಕಲ್ಪನೆಯಲ್ಲಿ ತನ್ನ ಸೃಷ್ಟಿ ವಿಶೇಷತೆಯನ್ನು, ವಿಭಿನ್ನತೆ ಯನ್ನು, ತಾನೆ ತಾನಾಗಿರುವ ಕೇವಲತೆಯನ್ನು ಕಳೆದುಕೊಂಡು ಮಾನವೀಯ ಪ್ರಜ್ಞೆಯ ಸಂಕುಚಿತತೆಯಲ್ಲಿ ಪತನಗೊಂಡು ಸಾಂಸಾರಿಕ (domesticate) ವಾಗುತ್ತದೆ. ನಿಗೂಢ ನೀರವ ಗುಹೆಗಳು ಕಂಬ, ಕಿಟಕಿ ಇಲ್ಲದ 'ಮನೆ'ಗಳಾದಾಗ, ಅನಾದಿಕಾಲದ ಹೆಬ್ಬಂಡೆಗಳು ಬಚ್ಚಲು ಮನೆಯ ಗೋಡೆಗಳಾದಾಗ, ಧುಮುಕುವ ಜಲಪಾತಗಳು ಬಿಸಿಲಿಗೆ ಒಣಹಾಕಿದ 'ಬಟ್ಟೆ'ಗಳಾದಾಗ ನಿಸರ್ಗ ತನ್ನ ಕೇವಲತೆಯನ್ನು ಕಳೆದುಕೊಂಡು ಕುಬ್ಜವಾಗುತ್ತದೆ.

ಕಾರಂತರ ಕಾದಂಬರಿಗಳಲ್ಲಿ ನಿಸರ್ಗ ಈ ರೀತಿಯಾಗಿ ಮಾನವ ಪ್ರಜ್ಞೆಯ ಪರಿಧಿಗೇ ಕಟ್ಟುಬಿದ್ದ, ಮಾನವ ಪರಿಕಲ್ಪನೆಯ ಹ್ರಸ್ವಕ್ಕೆ ಕುಬ್ಜವಾದ ಒಂದು ರೀತಿಯು ಅಸಂಬದ್ಧವೂ ಹಾಸ್ಯಾಸ್ಪದವೂ ಆದ ವಸ್ತುವಿಶೇಷವಾಗುತ್ತದೆ. ಇಲ್ಲಿಯ ಚಿತ್ರವನ್ನು ಗಮನಿಸಿ :

> ಪಡುವಣ ಬೆಟ್ಟದ ಗೋಡೆಯ ಮೇಲೆ ಬಿಸಿಲಿನ ಹೊಂಬಣ್ಣ ಕೆಂಬಣ್ಣ ಗಳು ಬೀಳುವ ಚೆಲುವನ್ನು ನೋಡಿ ಕರಿಯ ಮುಗ್ಧನಾಗಿರುವಾಗ,

> ಅವನ ಗೆಳೆಯ ಕಾಳ 'ಕರಿಯ, ಅಲ್ಲಿ ನೋಡು, ಸೊರೆ ಹೆಂಡದ ಸಮುದ್ರ' ಎನ್ನುತ್ತಾನೆ, ಕೆಳಗಿನ ಕಣಿವೆಯನ್ನು ತೋರಿಸಿ. ಮಂಜು ತುಂಬಿದ ಕೆಳಗಿನ ಕಣಿವೆ, ಇವರ ಪಾಲಿಗೆ-ಮಜ್ಜಿಗೆ, ಹಾಲು, ಮೊಸರು ಗಳ ಸಮುದ್ರವಲ್ಲ, ಬದಲು ಬಯನಿ ಹೆಂಡದ ಶರಧಿ. ಆ ಹೆಂಡದ ಪಾತ್ರೆಯಾದರೂ ಎಷ್ಟು ದೊಡ್ಡದು...ಮಂಜು ಏರುತ್ತದೆ; ವಿಸ್ತರಿಸು ತ್ತದೆ; ಕದಡುತ್ತದೆ; ಕೊಡೆತ ಮೊಸರಿನಂತೆ ಹೆಪ್ಪು ಕಟ್ಟುತ್ತದೆ. (ಪು.91-2)

ಬಯನಿ ಹೆಂಡವಾಗಲಿ, ಮಜ್ಜಿಗೆ ಹಾಲು ಮೊಸರುಗಳಾಗಲಿ, ನಿಸರ್ಗ ಕಾರಂತರ ಸಂವೇದನೆಯಲ್ಲಿ ಖಾದ್ಯವಾಗಿ ಇಂದ್ರಿಯಗ್ರಾಹ್ಯವಾಗುತ್ತದೆ. ಇದು ನೋಟದ ರಮ್ಯತೆ, ಭವ್ಯತೆಗಳು ರುಚಿಯ ಮಾಧ್ಯಮದಿಂದ ಆಪ್ಯಾಯಮಾನವಾಗುವ ಒಂದು ವಿಶೇಷ ಪ್ರಕ್ರಿಯೆ. ಇದನ್ನು ಕೀಟ್ಸ್‌ನ ಕೆಲವು ಕವನಗಳಲ್ಲಿ ಕಾಣುತ್ತೇವೆ. ಒಂದು ರೀತಿಯಲ್ಲಿ ಇದು ಅಡಾಲಸೆಂಟಾದ (adolescent) ರೊಮ್ಯಾಂಟಿಕ್ ಪರಿಕಲ್ಪನೆ.

ಈ ರೊಮ್ಯಾಂಟಿಕ್ ಪರಿಕಲ್ಪನೆ ಎಷ್ಟರಮಟ್ಟಿಗೆ ಕಾರಂತರ ಸಂವೇದನೆಯಲ್ಲಿ ಬೇರುಬಿಟ್ಟಿದೆಯೆಂದರೆ ಅತ್ಯಂತ ಭವ್ಯವೂ, ಭೂಮವೂ, ನಿಗೂಢವೂ, ರೌದ್ರವೂ ಆಗಿರಬಹುದಾದ ನಿಸರ್ಗ ಸನ್ನಿವೇಶಗಳು ಅವರ ಪಾಲಿಗೆ ಒಂದು ಲಾಲಿತ್ಯವಾಗಿಯೇ, ಆಹ್ಲಾದಕಾರಿಯಾಗಿಯೇ ಅನುಭಾವ್ಯವಾಗುತ್ತದೆ. ಬೆಟ್ಟದ ಜೀವ, ಕುಡಿಯರ ಕೂಸು ಗಳಲ್ಲಿ ಈ ಆಹ್ಲಾದಕಾರಿ ಮನೋವೃತ್ತಿ 'ನಗು'ವಿನ ಸಂವೇದನೆಯ ಮೂಲಕ ಉದ್ದಕ್ಕೂ ವ್ಯಂಜಿತವಾಗುವುದನ್ನು ಗಮನಿಸಬಹುದು :

1. ಕೆಳಗಣ ಕಣಿವೆಯಲ್ಲಿ ಹರಿಯುತ್ತಿದ್ದ ಹಳ್ಳದ ನೀರಿನ ನಗುವು ನಮಗೆ ಕೇಳಿಸಿತು (ಬೆ.ಜೀ. ಪು. 32).
2. ಪ್ರತಿಯೊಂದು ಹೊಳೆಯೂ, ಹಳ್ಳವೂ, ಕೈಗೆ ಸಿಕ್ಕದೆ ಓಡುವ ಚೆಲುವಿನ ಮಿಂಚು ಬಳ್ಳಿಯಾಗಿತ್ತು. ತಿಳಿಯಾಗಿ ನಕ್ಕು ಹರಿಯುವ ಅವುಗಳ ನೀರು, ಎಂಥ ಗಂಡು ಶಿಲೆಯನ್ನೂ ಕೊರೆದು, ಕಟೆದು ಉರುಟು ಮಾಡುವ ಶಕ್ತಿಯುಳ್ಳದ್ದಾಗಿತ್ತು. (ಬೆ.ಜೀ. ಪು. 47).
3. ನದಿಯ ಇತ್ತಡಿಗಳಲ್ಲಿ ದೆವ್ವದಂಥ ಮರಗಳು ನೀರಲ್ಲಿ ತಮ್ಮ ಬಿಂಬ ಗಳನ್ನು ತಾವೇ ಕಂಡು ನಗುವಂತಿತ್ತು (ಬೆ.ಜೀ. ಪು. 94).
4. ಈ ತೊರೆಯು ಕಿಲಕಿಲನೆ ನಗುತ್ತ ಬಂಡೆಗಳನ್ನು ಸುತ್ತಿ ಸುಳಿದು ಅಲ್ಲಲ್ಲಿ ತಾಗಿ, ವಿರಮಿಸಿ, ಮುಂದಕ್ಕೆ ಹರಿದು, ಕೊರಕಲು ಧುಮುಕುತ್ತಲೋ, ಇಳಕಲುಗಳಲ್ಲಿ ಮೆಲುದನಿಯಿಂದ ಜಾರುತ್ತಲೋ ನೂರಾರು ಬಗೆಯಿಂದ ನಕ್ಕು ನಲಿದು, ಮೂಲೆ ಗುಂಪಿನ ಹಾದಿಯಾಗಿ ನೇತ್ರಾವತಿ ನದಿಯನ್ನು ಸೇರುತ್ತದೆ (ಕು.ಕೂ. ಪು. 163).

5. ಎದುರಿಗೆ ಕಾಲುಬುಡದಲ್ಲಿ ನಗುವ ಮೋಡಗಳನ್ನು ಬಿಂಬಿಸುತ್ತಿದ್ದ ವಿಶಾಲವಾದ ನೀರಿನ ಹಾಳೆಯೊಂದಿತ್ತು...ಮುಂದೆ ರೌದ್ರವಾಗಿ ಹುಚ್ಚೆದ್ದು ನಗುತ್ತಿರುವ ಅಲೆಗಳು (ಮ. ಮ. ಪು. 562).

ನಿಸರ್ಗ ಗಂಭೀರವೂ ಗಭೀರವೂ ಆಗಿರಲೇಬೇಕಾದ ಸನ್ನಿವೇಶಗಳಲ್ಲೂ, ಈ ಸಂವೇದನಾ ಲಾಲಿತ್ಯ, ಮನೋಹರತೆ ಬರಹಗಾರರನ್ನು ಬಿಟ್ಟುಕೊಡುವುದಿಲ್ಲ.

ಈ ಮಾನವೀಕರಣದ ಸೌಲಭ್ಯದಿಂದ ದೈವೀಕರಣಕ್ಕೆ ಏರುವುದು ಅಷ್ಟೇ ಸಲೀಸಾದ ಸಂವೇದನೆಯೂ ಕೂಡ. ಬೆಟ್ಟದ ಜೀವದಲ್ಲಿ 'ನಂದನವನ' .(ಪು. 54) 'ಕೈಲಾಸ' (ಪು. 30), 'ದೇವಲೋಕ', 'ಸ್ವರ್ಗ', ಈ ಪದಗಳ ವಿಪರೀತ ಬಳಕೆಯಿದೆ. ಹಾಗೆಯೇ ಕುಡಿಯರ ಕೂಸಿನಲ್ಲಿ 'ನಂದನವನ' (ಪು. 32), 'ಸ್ವರ್ಗ' (ಪು. 56), 'ಶಿವನ ಗಂಗೆ' (ಪು. 88) 'ನೈಸರ್ಗಿಕ ದೇಗುಲ' (88) 'ಮುಗಿಲ ಮೋಹಿನಿ' (ಪು. 89), 'ಇಂದ್ರನ ವಜ್ರಾಯುಧ' (ಪು. 316) 'ದೈವದ ಕೃಪೆ' (ಪು. 376)— ಈ 'ದೈವೀ'ಶಬ್ದಗಳು ಹೇರಳವಾಗಿ ಉಪಯೋಗಿಸಲ್ಪಟ್ಟಿವೆ. ಈ ಸಂದರ್ಭದಲ್ಲಿ ನಾವು ಗಮನಿಸಬೇಕಾದ ಸೂಕ್ಷ್ಮವೇನೆಂದರೆ ಬೆಟ್ಟದ ಜೀವದ ಶಿವರಾಮಯ್ಯ, ಗೋಪಾಲಯ್ಯ ನಾಗರಿಕರು. ಅವರ ದೃಷ್ಟಿಯಲ್ಲಿ ನಿಸರ್ಗ ನಾಗರಿಕ ಪ್ರಜ್ಞೆಯ ಪ್ರತ್ಯಯಗಳಲ್ಲಿ ಗ್ರಾಹ್ಯವಾಗುವುದು ಸಹಜವಾದದ್ದಾದರೂ, ಮಲೆಯ ಮಕ್ಕಳಾದ ಮಲೆ ಕುಡಿಯರು-ಕಾಡು ಜನರು ಕೂಡ ಕಾಡನ್ನು ನಾಗರಿಕ ಭಾಷೆ—ಪ್ರಜ್ಞೆ-ಸಂವೇದನೆಗಳಲ್ಲೇ ಕಾಣುವುದು ಅನುಭವದ ಸಂಕುಚಿತತೆಯನ್ನು ಎತ್ತಿ ತೋರಿಸುತ್ತದೆ. ಕಗ್ಗಾಡಿನಲ್ಲಿ ಹುಟ್ಟಿ ಬೆಳೆದು, ಹುಲಿ, ಕರಡಿಗಳೊಂದಿಗೆ ಹೊಡೆದಾಡಿ, ಮೀನು, ಏಡಿ, ಸೀಗಡಿ, ಮಿಕ, ಜಿಂಕೆಯನ್ನು ಬೇಟೆಯಾಡಿ ತಿಂದು, ಬಯನಿದಿಂಡು ಹೆಂಡ ಕುಡಿದು ಜೀವಿಸಿರಲಿ—ಅವರ ಪ್ರಜ್ಞೆ ಮಾತ್ರ ನಾಗರೀಕವಾದದ್ದು. 'ಮಾಂಟಿ ಬೆಕ್ಕು' 'ಸರ್ಪವೂ' ಆದ ಕೆಂಪಿ ತನ್ನ ಬೆಡಗು ಬಿನ್ನಾಣದಿಂದ ಗಂಡಸರನ್ನು ಮರಳು ಮಾಡಿದ್ದರೂ, ತಿರುಮಲಭಟ್ಟ ಅವಳನ್ನು ಹಿಡಿದಾಗ 'ಅಯ್ಯೋ ನಾನು ಹೊರಗೇ' (ಪು. 145) ಎಂದು ಮಡಿಮುಟ್ಟು ತೋರುವ ನಾಗರಿಕಳು. ಕುಡಿಯರು ಕತ್ತಿ ಹಿಡಿದು ಕುಣಿದು 'ಖಡ್ಗವೀರ' (ಪು. 70) ರಾದರೂ ತಿರುಮಲಭಟ್ಟನ ಒಕ್ಕಲಾಗಿ, 'ನಾಯಿ' ಎನಿಸಿಕೊಂಡು ಗೇಯುವ, ಕೂಲಿ ಪಡೆಯುವ, ಕಾಡಿನ ಕೆಚ್ಚು ರೊಚ್ಚು ವೀರತನಗಳನ್ನು ಕಳೆದುಕೊಂಡ 'ನಾಗರಿಕ'ರು. ಕರಡಿಯನ್ನು ಕಾದಾಡಿ ಕೊಂದ ಕರಡಿವೀರ ತುಕ್ರ ತಿರುಮಲ ಭಟ್ಟನಿಗೆ 'ಹೆಂಗಸರನ್ನು ಒದಗಿಸುವ ಜನ' ಎಂಬ ಅಪವಾದಕ್ಕೆ ಗುರಿಯಾದವನು. ಕಥಾನಾಯಕನಾದ ಕರಿಯನೋ ತಿರುಮಲಭಟ್ಟನ ದೌರ್ಜನ್ಯದ ಕಾಡನ್ನು ತೊರೆದು, ಬೇರೆ ಕಾಡನಲ್ಲಿ ಜೀವಿಸಿ, ಒಕ್ಕಲು ಮಾಡಿ, ಚಿರತೆ ಹುಲಿ ಬೇಟೆಯಾಡಿ, ಆನೆಯನ್ನು ಪಳಗಿಸಿ ಸವಾರಿಮಾಡಿ, ತಿರುಮಲಭಟ್ಟ ಸತ್ತಮೇಲೆ ಮಲೆಗೆ

ಬಂದು, ಸಂಭಾವಿತ ರಾಮಚಂದ್ರ-ತಿರುಮಲಭಟ್ಟನ ಮಗ-ನ ಸ್ವಾಮ್ಯವನ್ನು ಒಪ್ಪಿಕೊಂಡು ಗುರಿಕಾರನಾಗಿ ನಿಲ್ಲುತ್ತಾನೆ. ಹೀಗೆ ಕುಡಿಯರ ಕೂಸು ಕಾಡನ್ನು ನಾಗರೀಕರಿಸುತ್ತದೆ.

ಇನ್ನು ಮರಳಿ ಮಣ್ಣಿಗೆಯಲ್ಲಿ ಕಡಲು, ಬೆಟ್ಟದ ಜೀವ, ಕುಡಿಯರ ಕೂಸು ಕಾದಂಬರಿಗಳ ಮಲೆ, ಕಾಡುಗಳಂತೆ ನಿಸರ್ಗದ ಸಂಕೇತವಾಗುತ್ತದೆ. ಇಲ್ಲಿ ಬೆಟ್ಟದ ಜೀವದ ಗೋಪಾಲಯ್ಯನು ಬೆಟ್ಟದೊಂದಿಗೆ, ಕಾಡಿನೊಂದಿಗೆ ಹೋರಾಡುತ್ತಾ 'ಹುಲಿಯ ದವಡೆ'ಯಲ್ಲೇ ಬಾಳ್ವೆ ಮಾಡುವಂತೆ, ವೈದಿಕರಾದ ರಾಮೈತಾಳರು ಕಡಲಿನ 'ಸಾವಿನ ದವಡೆ' ಯಲ್ಲೇ ಜೀವಿಸುತ್ತಾರೆ. ಅವರು ಕಡಲಿನೊಡನೆ ಮಾಡುವ ಹೋರಾಟ ಗೋಪಾಲಯ್ಯ ಬೋನಿಗೆ ಸಿಕ್ಕಿಬಿದ್ದ ಹುಲಿಯನ್ನು ಗುಂಡಿನಿಂದ ಕೊಲ್ಲುವಂಥ ಸುಲಭ ಕ್ಷಾತ್ರವಲ್ಲ; ಅವರು ಈಜಿ ಸಾವು-ಬದುಕುಗಳ ಸಂದಿಗ್ಧತೆಯಲ್ಲಿ ಕಡಲಿನ ಒಡಲಿನ ಗೆಲ್ಲುಗಳನ್ನು ಬಗೆದು ಹೊರತಂದು, ಹೊಳೆಯನ್ನು ಈಸಿ ವೈದಿಕ್ಯ ಮಾಡಿಕೊಂಡು ಬದುಕುವವರು :

> ಐತಾಳರು ಎಲ್ಲಿಲ್ಲದ ಧೈರ್ಯಮಾಡಿಕೊಂಡು 'ಹೊಳೆ ಇಳಿಯುತ್ತೇನೆ' ಎಂದರು. ತಮ್ಮ ಧಾವಳಿ, ಪಂಚಪಾತ್ರೆಗಳನ್ನು ತಲೆಗೇರಿಸಿ ಪಾಣಿ ಪಂಚೆಯಿಂದ ರುಮಾಲೆ ಬಿಗಿದರು. ದೇವರ ಉತ್ಸವ ಮೂರ್ತಿಯ ಮೇಲೆ ಬೆಳ್ಳಿಯ ಕೊಡೆ ಹಿಡಿಯುವ ಹಾಗೆ, ತನ್ನ ಕಾಲುಶ್ಶಿ ಕೊಡೆ ತಲೆಯ ಮೇಲೆ ಹಿಡಕೊಂಡು, ನಿತ್ಯದಾಟುವ ಕಡುವಿನಿಂದ ಇಳಿದರು. ಗಂಡನು ನದಿ ದಾಟುವ ದೃಶ್ಯ ನೋಡಿ ಪಾರ್ವತಮ್ಮನ ಕೊರಳ ತಾಳಿ ನಡಗುತ್ತಿದ್ದಿರಬೇಕು—ಹೆದರಿಕೆಯಿಂದ. ಅವರು ನೀರಿನಲ್ಲಿ ನೂರು ಮಾರು ದಾಟುವ ತನಕ ಮೊಣಕಾಲು ನೀರಿತ್ತು. ಅದರ ಮುಂದೆ ಚುಂಗಿ ಮುಳ್ಳಿನ ಹಳು. 'ಆ ಮುಳ್ಳಿನ ಬಲೆಯಲ್ಲಿ ದಾರಿಕಾಣದೆ ಹೋದೀತೆ?' ಎಂಬ ಹೆದರಿಕೆ ಪಾರೋತಿಗೆ. ಐತಾಳರು ಚುಂಗಿ ಗಿಡಗಳ ಕುಡಿಯನ್ನು ಮಿಣಿ ಮಿಟಿ ನೋಡುತ್ತಾ ಹಾದಿ ನಡೆದರು. ಅವುಗಳಲ್ಲಿ ಎಡೆಬಿಟ್ಟ ಸ್ಥಳವೇ ನದಿ ದಾಟುವ ಸ್ಥಳ. ಆ ಸ್ಥಳಕ್ಕೆ ಮೊದಲಿನ ಕಾಲು ಇರಿಸುವಾಗಲೇ ಆರಾರು ಬಾರಿ ಯೋಚಿಸಿ ನೋಡಿದರು. 'ಕೊನೆಗೆ ಸಾಲಿಗ್ರಾಮ ನರಸಿಂಹದೇವರು ಮಾಡಿದ್ದಾಗಲಿ' ಎಂದು ಮುಂದು ವರಿಸಿಯೇ ಬಿಟ್ಟರು. ನದಿಯ ನೀರು ನಡು, ಎದೆ, ಕುತ್ತಿಗೆಗಳತನಕ ಕ್ರಮವಾಗಿ ಬಂದಿತು. ನದಿಯ ನೀರಿನ ಸಾಲಿನಲ್ಲಿ ಬಾಯಿ ಮೂಗುಗಳಿಗೂ ನೀರು ಏರಿತು. ಸುಮ್ಮನೆ ಅಂದಾಜಿನಲ್ಲಿ ನಿಂತು ಈಸುವವರಂತೆ ನಾಲ್ಕು ಕ್ಷಣ ನೀರು ತಳ್ಳಿದರು. ಅವರ ಕೊಡೆಯೇ ಹಾಯಿಯಂತೆ ಅವರನ್ನು ಆಳುವೆಗೆ ಸಾಗಿಸುವ ಬದಲು ನದಿಯ ಮೇಲಕ್ಕೆ ಒಯ್ದಿರ

ಬೇಕು. ಕಾಲು ಕೆಳಗೆ ಒಯ್ಪುರೆ ಹಂಗಾರ ಕಟ್ಟೆ, ಬಂದರಕ್ಕೋ, ಅಳುವೆ ದಾಟಿ ತೋನ್ಸೆ ಪಾರಿಗೋ ಸೇರಬೇಕಿತ್ತು. 'ವರುಣ ದೇವನ ಮುಂದೆ ಮನುಷ್ಯನ ಆಟವೇ' ಎಂದೆನಿಸಿತು ಅವರಿಗೆ.

ಐತಾಳರು ಅಂಥ ಹೆಡ್ಡಾಳಲ್ಲ, ಈಜಬಲ್ಲರು. ಆದರೆ ಈಜಿದರೆ ಮೂರು ರೂಪಾಯಿ ಕೊಟ್ಟು ಆ ವರ್ಷವೇ ಕೊಂಡ ಧಾವಳಿ ಉಪ್ಪು ನೀರಿಗೆ ಬಿದ್ದು ಹಾಳಾದರೆ ಅದನ್ನು ನಾಗಪ್ಪ ಹೊಳ್ಳರ ಕುಟುಂಬದವರು ಕೊಡು ತ್ತಾರೆಯೇ? ಅಂತು ಇಂತು ನಿಂತು, ಈಜಿ ಕಾಲು ನೆಲಕ್ಕೆ ತಡೆಯಿತು. ನದಿಯ ಸಾಲು ತಪ್ಪಿ ಈಚೆ ದಂಡೆಗೆ ಬಂದರು. ಆದರೆ ದಾಟುವ ಕಡುವಿನ ಸಂದು ಕಾಣಿಸದು. ಎದುರಿಗೆ ಎಲ್ಲೆಲ್ಲೂ ಚುಂಗಿ ಮುಳ್ಳಿನ ಹಳು. ಆ ಮುಳ್ಳುಗಳಿಗೆ ಮೈ ಸವರಿಕೊಂಡು, ತಾನು ನದಿಯಲ್ಲಿ ನಾಲ್ಕು ಮಾರಾದರೂ ಕೆಳಕ್ಕೆ ಬಂದಿರಬೇಕೆಂಬ ಅಂದಾಜಿನ ಮೇಲೆ, ಉತ್ತರಕ್ಕೆ ನಡೆದು-ನಿತ್ಯದ ದಾರಿ ಕಂಡುಕೊಂಡರು. ಅಷ್ಟಾಯಿತೋ- 'ಥುತ್, ಇಂಥ ಹೊಳೆ ಸಾವಿರ ದಾಟಿಯೇನು' ಎಂದು ಹಿಗ್ಗಿ ನಡೆದರು. 'ಆದರೆ ಸಂಜೆಗೂ ಹೀಗೆ ನೀರಿದ್ದರೆ ಮನೆಗೆ ಈ ರಾತ್ರಿ ಬರುವುದಿಲ್ಲ' ಎಂದೂ ನಿಶ್ಚಯ ಮಾಡಿಕೊಂಡರು.

ನದಿಯುನ್ನು ಕಳೆದು ಅವರು ಎದುರಿನ ಗದ್ದೆಯನ್ನು ಸೇರುವತನಕ ಈಚೆ ದಂಡೆಯಲ್ಲಿ ಕಾದಿದ್ದ ಅತ್ತಿಗೆ-ನಾದಿನಿಯರು ಎವೆ ಬಡಿಯದೆ ನೋಡುತ್ತಿದ್ದರು. ಆ ಬಳಿಕ 'ನೀರು ಹೀಗೆಯೇ ಇದ್ದರೆ, ಅಲ್ಲೇ ಇರಿ' ಎಂದು ಕೂಗಿ ಹೇಳಿದರು. ಆದರೆ ಆ ಗಾಳಿ ಹನಿಗಳಿಗೆ ಇವರ ಕೂಗು ಯಾರಿಗೆ ಕೇಳಿಸಬೇಕು? ಐತಾಳರೇನಾದರೂ ಹಿಂದಕ್ಕೆ ತಿರುಗಿ ನೋಡಿದ್ದಾರೆಯೆ? (ಪು. 13–14).

ಒಂದು ದಿವಸ ಬಲು ಸ್ವಾರಸ್ಯದ ಕಥೆ ನಡೆಯಿತು. ಮೂವರೂ ಮುಂಜಾನೆ ಎದ್ದು ಕಡಲ ದಡವನ್ನು ಸೇರಿದರು. ಇವರಂತೆ ಬೆಳಗು ಹರಿವಾಗಲೇ ಹತ್ತೈವತ್ತು ಮಂದಿ ಅಲ್ಲಿ ಕಾದಿದ್ದರು. ಆಗಷ್ಟೆ ಹೊಳೆ ಗಳಲ್ಲಿ ನೆರೆ ತುಂಬಿ ಬಂದ ಸಮಯ. ನೆರೆಯ ಕಾಲದಲ್ಲಿ ಮರಗಳು ಬರುವುದು ಜಾಸ್ತಿ. ಆದರೆ-ಗಾಳಿ ಬಡಿತ, ಮಳೆಯ ಹೊಡೆತ- ಅವೂ ಜಾಸ್ತಿಯೇ, ಅದರಲ್ಲಿ ಕಡಲಿಗೆ ಇಳಿದರು. ಮೊಣಗಂಟಿನಷ್ಟು ನೀರಿನಲ್ಲಿ ನಿಂತು, ಗಿಡುಗನ ಕಣ್ಣುಹಾಕಿ ಎದುರು ನೋಡುತ್ತಿದ್ದರು. ನೂರು ಗಜಕ್ಕೆ ಮುಂದೆ ಕಟ್ಟಿಗೆಯಂತೆ ಕಪ್ಪಾದ ಒಂದು ತುಂಡು ತೇಲಿ ಬರುತ್ತಿತ್ತು. ಐತಾಳರು ತೆರೆಗಳನ್ನು ಹಾದು, ಈಸಿ ಹೋಗಿ ಕೈಹಾಕಿ

> ಹೊರಟರು, ಅರ್ಧಗಳಿಗೆ ಸಾಹಸ ಮಾಡಿ, ದಂಡೆಗೆ ಸಮೀಪಿಸಿದರು—ಕೈ ಬಿಟ್ಟರು. ಕೊನೆಯ ತೆರೆಯೊಂದು ಇವರು ತಂದ ಮರವನ್ನು ಮರಳಿನ ದಿಣ್ಣೆಗೆ ಉರುಳಿಸಿತು. ಅದರ ಭಾರದ ಮೇಲಿಂದ—ಏನಾದರೂ ಐವತ್ತು ಹೊರೆಯಾಗುವಷ್ಟು ಕಟ್ಟಿಗೆ ಒಂದೇ ದಿಮ್ಮಿಗೆ ಬಂದೀತೆಂದು ಊಹಿಸಿದ್ದರು. ಈಗ ನೋಡುತ್ತಾರೆ! ಎಳೆದು ತಂದದ್ದು ಮರವನ್ನಲ್ಲ, ಸತ್ತು ತೇಲುತ್ತಿದ್ದ ಒಂದು ಕೋಣದ ಹೆಣವನ್ನು ಇವರು ಕೈಹಾಕಿದ್ದು ಮರದ ರೆಂಬೆಗಲ್ಲ, ಬದಲು ಅದರ ಕೊಂಬಿಗೆ. ಸುತ್ತಲಿದ್ದವರು ನಕ್ಕುಬಿಟ್ಟರು. ಅದರ ಜೊತೆಗೆ ಪಾರೋತಿಗೂ ಹಿಡಿಸದ ನಗುಬಂದಿತು. ಐತಾಳರು ಚಕಾರ ತೆಗೆಯಲಿಲ್ಲ. ಮನೆಗೆ ಬಂದ ಮೇಲೆ ತಮ್ಮ ಅವತಾರವನ್ನೆಲ್ಲ ಬಿಡಿಸಿಬಿಟ್ಟರು. ಮೂರು ತಿಂಗಳ ತನಕ ಪಾರೋತಿ ಅದನ್ನು ನೆನೆದು ನೆನೆದು, ಕಣ್ಣೀರಿನಿಂದ ಜಗುಲಿಯನ್ನು ತೊಯ್ದುದುಂಟು (ಪು. 8).

ಈ ಎರಡು ಸನ್ನಿವೇಶಗಳಲ್ಲಿ ಕಡಲಿನೊಂದಿನ ಹೋರಾಟ ಕಾನ್ರಾಡ್, ಮೆಲ್ವಿಲ್‌ರ ಮಾನವ-ಕಡಲು ಸಂಗ್ರಾಮಗಳ ಸಾಧ್ಯತೆಯತ್ತ ಒಲವನ್ನು ತೋರುವಂತಿದ್ದರೂ ಅದನ್ನು ಬೇಧಿಸಿಕೊಂಡು ಬರುವ ಹಾಸ್ಯ ಅದರ ಗಂಭೀರತೆಯನ್ನು, ಭೂಮತೆಯನ್ನು ಹಾಳುಮಾಡುತ್ತದೆ. ಐತಾಳರ ಕಡಲ ಹೋರಾಟ ಸಾವು-ಬದುಕಿನ ಹೋರಾಟ; ಅವರ ಕಾಲು ತಪ್ಪಿದರೆ ಅವರ ಹೆಣ ಹಂಗಾರು ಕಟ್ಟೆ ಬಂದರು ಅಥವಾ ತೋನ್ಸೆ ಕಾಣಬೇಕು. ಆದರೆ ಐತಾಳರ ಸಂಗ್ರಾಮ ಮೂರು ರೂಪಾಯಿಯ 'ಧಾವಳಿ' ಒದ್ದೆಯಾಗುವ ನೆನಕೆಯಲ್ಲಿ ತನ್ನ ತೀವ್ರತೆಯನ್ನು, ಸಂಗ್ರಾಮಭೂಮತೆಯ ಗಂಭೀರತೆಯನ್ನು, ವಿರಾಟತೆಯನ್ನು ಕಳೆದುಕೊಳ್ಳುತ್ತದೆ; ಹಾಸ್ಯವಾಗುತ್ತದೆ. ಹಾಗೆಯೇ ಗೆಲ್ಲಿನ ರೆಂಬೆ ಸತ್ತ ಕೋಣದ ಕೊಂಬಾಗಿ ಹಾಸ್ಯಕ್ಕೆ ಎಡೆಕೊಟ್ಟು, ಪಾರ್ವತಿಯ ರೋದನಕ್ಕೆ ಕಾರಣವಾಗುತ್ತದೆ.

ಕಡಲು ಮಾನವನ ಹೋರಾಟದ-ಸಾವು ಬದುಕುಗಳ-ಪರಿಣಾಮ ಪಾರ್ವತಿಯ ಮೇಲಾಗುತ್ತದೆ. 'ಅವಳ ಕೊರಳ ತಾಳಿ ನಡುಗುತ್ತದೆ'. ಹಾಗೆಯೇ ಕಡಲಿನ ಪ್ರಭಾವ ಮಳೆಗಾಳಿಗಳ ಸಿಡಿಲಾಗಿ ಅವರನ್ನು ಕಂಪಿಸುತ್ತದೆ :

> ಅವರಿಗೆ ನೂರು ಗಜ ದೂರದಲ್ಲಿ ಸಿಡಿಲೊಂದು ಎರಗಿತು. ಇವರು ಒಮ್ಮೆಗೆ ಮೈ ಜುಮ್ಮೆನಿಸಿ ಮರಗಟ್ಟಿದರು. ಕೈಯ ಕತ್ತಿ ಕಳಚಿತು. ಚೇತನ ಬರುವಾಗ ಬೆದರಿಕೆಯಿಂದ ಬಾಯಲ್ಲಿ ಸರಸೋತಿಯು 'ಧನಂಜಯ ಧನಂಜಯ' ಎನ್ನುತ್ತಿದ್ದಳು. ಆಕೆ 'ಧನಂಜಯ ಎನ್ನು, ಅವನೇ ಕಾಯಬೇಕು' ಎಂದಳು. ಪಾರೋತಿ ಅವಳನ್ನು ಅನುಕರಿಸಿದಳು. ಅವರು ತಿರುಗಿ

> ನೋಡುತ್ತಾರೆ—ಆರಾಲಿನಲ್ಲಿ ಆರೇಳು ಹನೆ ಮರಗಳು ಕೆಂಡವಾಗಿವೆ. ಮರುಕ್ಷಣವೇ ಇಬ್ಬರೂ ಗದ್ದೆಯನ್ನು ಬಿಟ್ಟು ಮನೆಗೆ ಓಡತೊಡಗಿದರು. ಆ ದಿನ ಗದ್ದೆಯಲ್ಲಿ ನಿಲ್ಲಲು ಯಾರೊಬ್ಬರಿಗೂ ಧೈರ್ಯ ಸಾಲದು. ಮನೆಗೆ ಹೋದರೆ ಒಂದು ರಕ್ಷಣೆಯೇ ! ಅಂತು ಹೋಗಿ, ಹಾರೆ ಕೊಡಲಿಗಳನ್ನು ಅಂಗಳಕ್ಕೆಸೆದು 'ಧನಂಜಯ' ಜಪಕ್ಕೆ ತೊಡಗಿದರು. (ಪು. 37–38).

ಕಡಲು ಕನಲಿ ಆರ್ಭಟಿಸಿ ಮಾನವನನ್ನು ಭೀತಗೊಳಿಸುತ್ತದೆ; ಅವನನ್ನು ಪಲಾಯನಗೊಳಿಸುತ್ತದೆ. ಕಡಲು, ಕಡಲ ಹೋರಾಟಗಾರ ಐತಾಳರಿಗಾಗಲಿ, ಕಡಲ ಪ್ರೇಕ್ಷಕರಾದ ಪಾರೋತಿ, ಸರಸೋತಿಯರಿಗಾಗಲೀ ತನ್ನ ಸ್ವರೂಪದ ಗಾಂಭೀರ್ಯತೆಯನ್ನಾಗಲೀ ಶಕ್ತಿಯ ಭೂಮತೆ, ರೌದ್ರತೆಯನ್ನಾಗಲಿ ಅಭಿವ್ಯಕ್ತಿಸುವುದಿಲ್ಲ. ಅದೊಂದು ಮಾರಕ ಶಕ್ತಿಯಾಗಿ ಕೊಲ್ಲುವ, ಭೀತಗೊಳಿಸುವ ಸಾಧನವಾಗುತ್ತದೆ. ಕಡಲು ನಿಸರ್ಗದ ಚೇತನವಾಗಿ ಗಂಭೀರವಾಗುವುದಿಲ್ಲ, ಭೂಮವಾಗುವುದಿಲ್ಲ. ಕಡಲ ದೈತ್ಯನನ್ನು ಸಂಹರಿಸಲು ಪಾರೋತಿ-ಸರಸೋತಿಯರು ಹಾರೆ ಕೊಡಲಿಗಳನ್ನು ಅಂಗಳಕ್ಕೆಸೆಯುವಲ್ಲಿ, 'ಧನಂಜಯ' ಜಪ ಮಾಡುವಲ್ಲಿ ಕಡಲು ತನ್ನ ನೈಸರ್ಗಿಕ ಘನತೆಯನ್ನು ಸತ್ವದ ವಿರಾಟತೆಯನ್ನು ಕಳೆದುಕೊಂಡು, ಒಂದು ಭೂತವಾಗಿಬಿಡುತ್ತದೆ.

ಮರಳಿ ಮಣ್ಣಿಗೆ ಕಥೆಯ ಆರಂಭವೇ ಕಡಲಿನ ಕನಲಿನಲ್ಲಿ. ಐತಾಳರ ವಿಜೃಂಭಣೆಯ ಮದುವೆಯನ್ನು ಕಡಲು ನೀರುಪಾಲು ಮಾಡುತ್ತದೆ. ಹಾಗೆಯೇ ಐತಾಳರ ಎರಡನೆಯ ಮದುವೆ, ಲಚ್ಚನ ಮದುವೆ ಮಳೆಯ ವಾತಾವರಣದಲ್ಲಿ ನಡೆಯುತ್ತವೆ. 'ದರಿದ್ರಮಳೆ'ಯಿಂದಾಗಿ ಐತಾಳರ ಮದುವೆ ಒಂದು ದಾರಿದ್ರ್ಯದ ದಾರುಣತೆಯ ಜೀವನದಲ್ಲಿ ಕೊನೆಗೊಳ್ಳುತ್ತದೆ. ಕಡಲು ಮರಳಿ ಮಣ್ಣಿಗೆಯಲ್ಲಿ ಹೀಗೆ ಒಂದು ಭೀಕರವಾದ ಮಾರಕದ ಸಂಕೇತವಾಗಿ ಸಾವನ್ನು ಬೀರುತ್ತಾ ಸಾಗುತ್ತದೆ.

ಆದರೆ ರಾಮನು ಐತಾಳರ ಹಾಗೆ ಕಡಲನ್ನು ಹೋರಾಟದ ಎದುರಾಳಿಯನ್ನಾಗಿ ಮಾಡಿಕೊಳ್ಳದೆ, ಸ್ನೇಹದ ಒಡನಾಟಗಾರನನ್ನಾಗಿ ಮಾಡಿಕೊಳ್ಳುತ್ತಾನೆ. ಹುಟ್ಟಿನಿಂದಲೇ ರಾಮನು ಕಡಲ ಎಳೆತಕ್ಕೆ ಮಾರು ಹೋಗುತ್ತಾನೆ. ಕಡಲ ಮೊರೆತಕ್ಕೆ ಬಾಗಿ-'ಅಮ್ಮಾ ಯಾರು ಕೂಗುವುದು ?...ಯಾಕೆ ಕೂಗುತ್ತದೆ ?...ಅದಕ್ಕೇನು ಬೇಕಂತೆ ? (ಪು. 342) ಎಂದು ತಾಯಿಯನ್ನು ಕೇಳುತ್ತಾನೆ. ಸಾವಿನ ಸಂಕೇತವಾದ ಕಡಲು ರಾಮನಲ್ಲಿ ಒಂದು ವಿಚಿತ್ರ ರೀತಿಯ ಆದಮ್ಯ ಸಾವಿನ ಅಪೇಕ್ಷೆ (death wish)ಯಾಗಿ ಪರಿಣಮಿಸುತ್ತದೆ. ರಾಮನ ಆಟ ಕೊಂಡಾಟಗಳೆಲ್ಲಾ ಕಡಲನ್ನು ಅನುಸರಿಸುತ್ತವೆ.

> 'ಅಮ್ಮಾ ಸಮುದ್ರಕ್ಕೆ ಹೋಗುವ' ಎಂದನು.
> 'ಮಗೂ, ಮುಸ್ಸಂಜೆಯಾಯಿತಲ್ಲ...'
> 'ಇಲ್ಲ, ಈಗಲೇ ಹೋಗುವ, ನನಗೆ ಇಲ್ಲಿ ಬೇಸರವಾಗುತ್ತದೆ. ನೀನು ನನ್ನ

ಹತ್ತಿರ ಮಾತನಾಡುವುದಿಲ್ಲ' ಎಂದನು.

'ಸಮುದ್ರದಲ್ಲಿ ಯಾರು ನಿನ್ನ ಹತ್ತಿರ ಮಾತನಾಡುವವರು?'

'ಸಮುದ್ರ'

'ಅದು ಮಾತನಾಡುತ್ತಿದೆಯೇ ಅಣ್ಣ, ನನ್ನ ಹತ್ತಿರ?

'ಹೌದು, ಅದಕ್ಕೂ ನನಗೂ ಪ್ರೀತಿ. ಅದಕ್ಕೆ ನನ್ನ ಹತ್ತಿರ ತುಂಬ ಕೊಂಡಾಟ. ಬಾ, ಅಮ್ಮ ಹೋಗುವ' (ಪು. 371).

ರಾಮನಿಗೆ ಸಾವಿನ ಅನುಭವ ಸಮುದ್ರದ ರೂಪಕದಿಂದಲೇ ಆಗುತ್ತದೆ. ತಾಯಿ-ಮಗು ಸೂರ್ಯಾಸ್ತದ ಸಮುದ್ರವನ್ನು ನೋಡುತ್ತಾ, ತಲ್ಲೀನರಾಗುತ್ತಾರೆ. ತಾಯಿ-ಮಗು ಸೂರ್ಯಾಸ್ತದ ಸಮುದ್ರ ಮಾಧ್ಯಮದಲ್ಲಿ ಕೂಡುತ್ತಾರೆ. ಗಂಡನಿದ್ದೂ ವಿಧವೆಯಾದ (ಇದು ಸರಸೋತಿಯ ಮಾತು)—ಹಿಂದೊಮ್ಮೆ ಸಮುದ್ರದಲ್ಲಿ ಸತ್ತು ಬದುಕಿದ ನಾಗವೇಣಿ—ಈಗ ಈ ಸಮುದ್ರದ ಸೂರ್ಯಾಸ್ತದ ಮಾಧ್ಯಮದಲ್ಲಿ ರಾಮನನ್ನು ಪಡೆಯುತ್ತಾಳೆ; ತನ್ನ ಬಾಳಿಗೆ ಒಡನಾಡಿಯನ್ನು ಕಂಡು ಕೊಳ್ಳುತ್ತಾಳೆ :

> ಇಬ್ಬರೂ ಕಡಲಿನ ದಂಡೆಯ ಬಳಿ ಕುಳಿತರು. ಮಗು ತನ್ನ ಕಪೋಲಗಳನ್ನು ತಾಯಿಯ ಕೈಗೊರಗಿಸಿಕೊಂಡು, ಕಡಲನ್ನು ಇಳಿಯುತ್ತಿದ್ದ ಸೂರ್ಯನನ್ನು ಕಾಣುತ್ತಿತ್ತು. ಆ ಗೊಂಬೆಯು ಮಗುವಿನ ಕಾಲುಬುಡದಿಂದ ದಿಗಂತದ ಅಂಚಿನ ತನಕ ಒಂದು ಸುವರ್ಣ ಸ್ಥಂಭವನ್ನು ನಟ್ಟಿತು. ನಾಗವೇಣಿಯು ಸೂರ್ಯದೇವನನ್ನು ಕಾಣುತ್ತಾ ಕಣ್ಮುಚ್ಚಿದಳು. ಅವಳ ಕೈಗಳು ಭಕ್ತಿಯಿಂದ ಅವನ ಕಡೆಗೆ ಒಡ್ಡಿದ್ದುವು. ಮಗುವು ಇನ್ನೊಮ್ಮೆ 'ಅಮ್ಮಾ, ಸೂರ್ಯ ಎಲ್ಲಿಗೆ ಹೋದ?' ಎಂದು ಕೇಳಿತು.
>
> 'ಸಮುದ್ರದ ಒಳ್ಳಕ್ಕೆ ಹೋದನೋ ಏನೋ?"
>
> 'ಇನ್ನು ಬರುವುದಿಲ್ಲವೇ ಹಿಂದೆ?'
>
> 'ಬರುತ್ತಾನಪ್ಪ, ನಾಳೆ. ನಾಳೆ ಮೂಡುಗಟ್ಟಿನಿಂದ ಬರುತ್ತಾನೆ. ರಾತ್ರಿಯೆಲ್ಲ ಅವನಿಗೆ ತಿರುಗಾಟ'
>
> 'ಅಮ್ಮಾ, ದೊಡ್ಡಜ್ಜಿ-ಸಣ್ಣಜ್ಜಿಯೆಲ್ಲ ಹಾಗೆ ತಿರುಗಾಡಿಕೊಂಡು ತಿರುಗಿ ಬರಲಿಕ್ಕಿಲ್ಲವೆ? ನೀ ಬೇಸರ ಮಾಡಬೇಡಮ್ಮಾ, ಅವರು ಬರುತ್ತಾರೆ, ನನಗೆ ಗೊತ್ತು; (ಪು. 372).

ಇದೊಂದು ದರ್ಶನ ಮಟ್ಟದ ಐಂದ್ರಿಕಾನುಭವ, ನಿಸರ್ಗ ಮಾಧ್ಯಮದಲ್ಲಿ ತಾಯಿ-ಮಗನ ಅಪೂರ್ವ ಸಮಾಗಮದ ಸಾಂಕೇತಿಕ ಅಭಿವ್ಯಕ್ತಿ. (ಡಿ. ಎಚ್. ಲಾರೆನ್ಸಿನ 'ಸನ್ಸ್ ಅಂಡ್ ಲವರ್ಸ್' ಕಾದಂಬರಿಯಲ್ಲಿ ತಾಯಿ ತನ್ನ ಮಗನನ್ನು ಎತ್ತಿ ಹಿಡಿದು

ಸೂರ್ಯನಿಗೆ ಒಡ್ಡುತ್ತಾಳೆ; ಆವನಿಗೆ 'ಪಾಲ್' ಎಂದು ತನಗರಿಯದೇ ನಾಮಕರಣ ಮಾಡುತ್ತಾಳೆ. ಹಾಗಾಗಿ ಮಗನನ್ನು ಸೂರ್ಯಪುರುಷನನ್ನಾಗಿ ಕಂಡುಕೊಳ್ಳುತ್ತಾಳೆ; ತನ್ನವನನ್ನಾಗಿಸಿಕೊಳ್ಳುತ್ತಾಳೆ. ಒಂದು ವಿಚಿತ್ರ ದೈವೀಸಮಾಗಮದಲ್ಲಿ ಅವನನ್ನು ತನ್ನ ಸಂಗಾತಿಯನ್ನಾಗಿ, ಒಡನಾಡಿಯಾಗಿ ಮಾಡಿಕೊಳ್ಳುತ್ತಾಳೆ; ಗಂಡನನ್ನು ಬಿಟ್ಟು 'ಗಂಡ'ನನ್ನು ಪಡೆದುಕೊಳ್ಳುತ್ತಾಳೆ.

ಮರಳಿ ಮಣ್ಣಿಗೆ ಮತ್ತು ಸನ್ಸ್ ಅಂಡ್ ಲವರ್ಸ್‌ನಲ್ಲಿ ಸೂರ್ಯ ಹೇಗೆ ಲೈಂಗಿಕ ಸಂಕೇತವಾಗಿದೆಯೆಂಬುದನ್ನು ಗಮನಿಸಬೇಕು. ಅಲ್ಲದೆ ಕುಂತಿ ಸೂರ್ಯನಿಂದ ಕರ್ಣನನ್ನು ಪಡೆಯುವಲ್ಲಿ ಸೂರ್ಯ ಹೇಗೆ ಲೈಂಗಿಕ ಸಂಕೇತವೆನ್ನುವುದನ್ನು ನೆನೆಯಬೇಕು.

ಇಲ್ಲಿಯ 'ತನ್ನ ಕಪೋಲಗಳನ್ನು ತಾಯಿಯ ಕೈಗೆ ಒರಗಿಸಿಕೊಂಡು', 'ಕಾಲು ಬುಡದಿಂದ ದಿಗಂತದ ಅಂಚಿನವರೆಗೆ', 'ಸುವರ್ಣಸ್ಥಂಭ', 'ನಟ್ಟಿತು', 'ಸೂರ್ಯ ದೇವನನ್ನು ಕಾಣುತ್ತಾ, ಕಣ್ಮುಚ್ಚು', 'ಸಮುದ್ರದ ಒಳಕ್ಕೆ ಹೋದ'—ಈ ಪದಪುಂಜ ಗಳು ಸಮಾಗಮದ ಆತ್ಮೀಯತೆಯನ್ನು ಲೈಂಗಿಕ ಸಂಕೇತಗಳಲ್ಲಿ ಅಭಿವ್ಯಕ್ತಿಗೊಳಿಸು ವುದನ್ನು ಗಮನಿಸಬೇಕು. ಈ ಆತ್ಮೀಯ ಸಮಾಗಮವೇ ಮುಂದಿನ ರಾಮು ಮತ್ತು ನಾಗವೇಣಿಯರ ಅನ್ಯೋನ್ಯತೆಗೆ, ಒಡನಾಟಕ್ಕೆ, 'ದಾಂಪತ್ಯಕ್ಕೆ' ನಾಂದಿಯಾಗುತ್ತದೆ. ರಾಮು ಮತ್ತು ನಾಗವೇಣಿಯರು ಕಡಲಿನ ಸಂಗೀತಕ್ಕೆ ಶ್ರುತಿಯಾಗಿ ಹಾಡುತ್ತಾರೆ, ಪಿಟೀಲು ನುಡಿಸುತ್ತಾರೆ. ರಾಮು ತಾಯಿಗೆ ತನ್ನ ದುಡಿಮೆಯಿಂದ ಪಿಟೀಲಿನ ತಂತಿ ತಂದು ಕೊಡುತ್ತಾನೆ, ಅವಳಿಗೆ ಸೀರೆಯನ್ನು ಕೊಂಡು ತರುತ್ತಾನೆ. ಅವಳ ಪಾಲಿಗೆ 'ಗಂಡ'ನಾಗುತ್ತಾನೆ.

ಆದರೆ ರಾಮು-ನಾಗವೇಣಿಯರ ದಾಂಪತ್ಯ-ಕಡಲಿನ ಮಾಧ್ಯಮದ ದಾಂಪತ್ಯ, ಕಡಲ 'ಮರುಳಿನ', 'ಹುಚ್ಚು'ತನದ ದಾಂಪತ್ಯ. (ಈ 'ಮರುಳು', 'ಹುಚ್ಚು' ಶಬ್ದಗಳು ರಾಮು—ನಾಗವೇಣಿಯರನ್ನುದ್ದೇಶಿಸಿಯೇ ಪದೇ ಪದೇ ಬರುವ ಉಪಯೋಗಗಳು) ಅಂದರೆ 'ಸಫಲ'ವಾಗಲಾರದ ಬಂಜೆದಾಂಪತ್ಯ, ಮಾರಕ ದಾಂಪತ್ಯ. ಹೀಗಾಗಿ ರಾಮನು ರಾಮೈತಾಳರಾಗಿ ಕಡಲನ್ನು ತಬ್ಬಿದರೆ, ನಾಗವೇಣಿ ಪಾರೋತಿ—ಸರಸೋತಿಯರಾಗಿ, ವಿಧವೆ-ಬಂಜೆಯಾಗಿ ಕಡಲಿನತ್ತ ವಾಲುತ್ತಾಳೆ. ಕಡಲಿನ ಮಾಧ್ಯಮದಲ್ಲಿ ರಾಮುನನ್ನು ಕೂಡುತ್ತಾಳೆ.

ರಾಮೈತಾಳರ ಕಾಲದಲ್ಲಿ ಜೀವನ ಮಾಧ್ಯಮವಾಗಿದ್ದ ಕಡಲು, ಮೊಮ್ಮಗನಾದ ರಾಮನ ಸಮಯಕ್ಕೆ ಪ್ರೇಮದ ಮಾಧ್ಯಮವಾಗಿಬಿಡುತ್ತದೆ. ಆದರೆ ಈ ಎರಡೂ ಪ್ರಬಲ ಮಾಧ್ಯಮಗಳಲ್ಲೂ ಕಡಲು ಸಾವಿನ ಸ್ಥಾಯಿಯಾಗಿಯೇ ಉದ್ದಕ್ಕೂ ಹರಿದು ಬರುತ್ತದೆ. ರಾಮು ಕಡಲಿನ 'ಸಾವ'ನು ತನ್ನ ಕುಂಚದಲ್ಲಿ ಸೆರೆಹಿಡಿಯುತ್ತಾನೆ:

> ದೆವ್ವದಂತಹ ನಾಲ್ಕು ಹನೆಮರಗಳು ನೆಲದಿಂದ ಬಾನನ್ನು ಸೀಳಿದ್ದುವು. ಎದುರಿಗೆ ಕಾಲು ಬುಡದಲ್ಲಿ ನಗುವ ಮೋಡಗಳನ್ನು ಬಿಂಬಿಸುತ್ತಿದ್ದ ವಿಶಾಲವಾದ ನೀರಿನ ಹಾಳೆಯೊಂದಿತ್ತು. ಆದರಿಂದಾಚೆಗೆ ಕಡಲದಿನ್ನೆ. ಮುಂದೆ ರೌದ್ರವಾಗಿ ಹುಚ್ಚೆದ್ದು ನಗುತ್ತಿರುವ ಅಲೆಗಳು, ಅದರ ತೀರ ತೀರ ಹಿಂಗಡೆಯಲ್ಲಿ ಬಾನನ್ನು ಹೊಂಬೆಳಕಿನ ಆಗರವನ್ನಾಗಿ ಮಾಡಿದ ಸೂರ್ಯನ ಲೀಲೆ. ಊಟಕ್ಕೆ ತಾಯಿ ಕರೆಯುವತನಕವೂ ಅವನ ಕುಚ್ಚಿನ ಆಟ ಸಾಗಿತ್ತು. ನಾಗವೇಣಿ ಮಗನ ಕೈವಾಡವನ್ನು ನೋಡಿ ಮರುಳಾಗಿ ನಿಂತಿದ್ದಳು. (ಪು. 562).

ಹೀಗೆ ತಾಯಿ-ಮಗ ಕಡಲಿನಲ್ಲಿ 'ಮರುಳಾ'ಗಿ ಕೂಡುತ್ತಾರೆ; ಒಂದಾಗುತ್ತಾರೆ. ಕಡಲು ತಾಯಿ-ಮಗನ ಒಡನಾಟದ, ಬಾಳಿನ ಮಾಧ್ಯಮವಾಗಿಬಿಡುತ್ತದೆ.

ಕಡಲು ರಾಮನು ಚಿಕ್ಕವನಿದ್ದಾಗ ಮರಳ ಮೇಲೆ ಗೀಚಿದ ಬರವಣಿಗೆ-ಚಿತ್ರಗಳನ್ನು ಅಳಿಸುವ ತೆರೆಗಳ ಪರಂಪರೆಯಂತೆ ಲಯದ ಸಂಕೇತ. ತಾಯಿ ನಾಗವೇಣಿಯಾದರೋ ಒಮ್ಮೆ ಕಡಲಿಗೆ ಬಿದ್ದು 'ಲಯ'ವಾಗಿ ಬದುಕಿದವಳು. ರಾಮ ಮತ್ತು ತಾಯಿ ನಾಗವೇಣಿಯರು ನಿತ್ಯವೂ ಮಾರುಹೋಗುತ್ತಿದ್ದ ಕಡಲು-ರಾತ್ರಿಯ ಬೆಳದಿಂಗಳ ಕಡಲು - ಲಯವನ್ನು ಅಭಿವ್ಯಕ್ತಿಗೊಳಿಸುವ ಕಡಲು. ಕೊನೆಯಲ್ಲಿ ರಾಮನು ತನ್ನ ಕುಂಚದಲ್ಲಿ ಬಿಡಿಸಿದ ಕಡಲು 'ನೆಲದಿಂದ ಬಾನನ್ನು ಸೀಳಿ'ದ ದೆವ್ವದಂತಹ ಹನೆಮರಗಳ, 'ರೌದ್ರವಾಗಿ ಹುಚ್ಚೆದ್ದು ನಗುತ್ತಿರುವ' ಅಲೆಗಳ, ಸೂರ್ಯಾಸ್ತದ ಹೊಂಬೆಳಕಿನ ಲಯದ ಕಡಲು. ಕಡಲಿನ ಈ ಲಯದ ಪರಂಪರೆ ಅಜ್ಜ ರಾಮೈತಾಳರಿಂದ ಬಂದದ್ದು. ರಾಮೈತಾಳರ ವೈದಿಕ ವೃತ್ತಿಯೇ ಸಾವನ್ನವಲಂಬಿಸಿದ್ದು; ಸಾವನ್ನು ಸಂಕೇತಿಸುವ ಕಡಲನ್ನು ಅವಲಂಬಿಸಿದ್ದು. ಕಡಲೀಜಿ ಶ್ರಾದ್ಧಕ್ಕೆ ಹೋಗಬೇಕು; ಕಡಲಿನ ದವಡೆಯಿಂದ ಗೆಲ್ಲನ್ನು ಸೆಳೆದು ತರಬೇಕು. ಹೀಗಾಗಿ ಸಾವಿನ ಮಾಧ್ಯಮದಲ್ಲೇ, ಕಡಲಿನ ನೆಲೆಯಲ್ಲೇ ಐತಾಳ ವಂಶದ ಜೀವನ ಪರಂಪರೆ. ಮೊಮ್ಮಗ ರಾಮ ರಾಮೈತಾಳರಾಗಿ ಕಡಲನ್ನು ತಬ್ಬುತ್ತಾನೆ; ಸೊಸೆ ನಾಗವೇಣಿ ಸರಸೋತಿ-ಪಾರೋತಿಯರಾಗಿ 'ವಿಧವೆ-ಬಂಜೆ'ಯಾಗಿ ಕಡಲಿಗೆ ವಾಲುತ್ತಾಳೆ. ಇಬ್ಬರೂ ತಮ್ಮ ಕಲೆಗಳಾದ ಸಂಗೀತ, ಚಿತ್ರಕಲೆಗಳಲ್ಲಿ ಕಡಲಿಗೆ ಶ್ರುತಿ ಹಿಡಿದ ಜೀವಗಳಾಗುತ್ತಾರೆ; ಕಡಲಿನ ಮಾಧ್ಯಮದಲ್ಲಿ ಕೂಡುತ್ತಾರೆ. ಈ ಕೂಡುವಿಕೆ ಸಫಲವಾಗದ, ದಾಂಪತ್ಯವಾಗಿ ಮಕ್ಕಳನ್ನು ಹೆತ್ತು ಸಂಸಾರವಾಗಲಾರದ ತಾಯಿ-ಮಕ್ಕಳ ಕೂಡುವಿಕೆ. ರಾಮ ಹೆಣ್ಣನ್ನು ನೋಡಲು ಹೊರಟಾಗ, ಅವಳ ಹೆಸರು ಸರಸೋತಿ ಎಂದು ತಿಳಿದಾಗ ಅವನಿಗೆ ಸಮಾಧಾನವಾಗುತ್ತದೆ. ಏಕೆಂದರೆ 'ಅವಳು' ವಿಧವೆಯಾಗಿದ್ದ ಅಜ್ಜಿಯಂತೆ ದುಡಿಯುವ ಗಾಣದೆತ್ತಾಗುತ್ತಾಳೆ. ಆದ್ದರಿಂದ ರಾಮ-ನಾಗವೇಣಿಯರ 'ದಾಂಪತ್ಯ'ಕ್ಕೆ ಯಾವ ವಿಧದಲ್ಲೂ ಆಕೆ ಪೈಪೋಟಿಯಾಗಲಾರಳು. ಆದರೆ ಇದರ ದಾರುಣತೆಯೇನೆಂದರೆ, ರಾಮ ತನ್ನ

ಹೆಂಡತಿಯನ್ನು ಗೌಣಗೊಳಿಸಿದಾಗ್ಯು ತಾನು ಮತ್ತು ತಾಯಿ ಕೂಡಲಾಗದ ಕೂಡಿಕೆಯಲ್ಲಿ, ಸಫಲವಾಗದ ದಾಂಪತ್ಯದಲ್ಲಿ, ಅಂದರೆ ಒಂದು ಬಗೆಯ ಮೋಹಕವಾದ ಸಾವಿನಲ್ಲಿ ಸಿಕ್ಕಿ ಬೀಳುತ್ತಾರೆ. ರಾಮು ಹೀಗೆ ಕೂಡುವಲ್ಲಿ ಮತ್ತೆ ತಾಯಿಯ ಗರ್ಭವನ್ನೇ (return to the womb) ಸೇರುತ್ತಾನೆ. ಕಡಲು ಈ ತಾಯಿಗರ್ಭಕ್ಕೆ ಸಂಕೇತವಾಗಿ ನಿಲ್ಲುತ್ತದೆ, ತಾಯಿ ಮಕ್ಕಳನ್ನು ಕೂಡಿಸುತ್ತದೆ.

ಹೀಗೆ ಈ ಮೂರು ಕಾದಂಬರಿಗಳಲ್ಲಿನ ಕಾಡು-ಕಡಲಿನ ನಿಸರ್ಗ ಬರಹಗಾರನ ಪಾಲಿಗೆ ಭಾರತದ ಸಾಂಪ್ರದಾಯಿಕ ಸಂವೇದನೆಯ ವನವಾಸವೇ ಆಗಿದೆ. ಬೆಟ್ಟದ ಜೀವ, ಕುಡಿಯರ ಕೂಸುಗಳಲ್ಲಿನ ನಿಸರ್ಗವಾದ ಕಾಡನ್ನು ಮಾನವ ಕೊಲ್ಲುತ್ತಾನೆ; ಹಿಮ್ಮೆಟ್ಟಿಸಿ ಸವಾರಿ ಮಾಡುತ್ತಾನೆ. ಮರಳಿಮಣ್ಣಿಗೆ ಯಲ್ಲಿನ ನಿಸರ್ಗವಾದ ಕಡಲು ಮಾನವನನ್ನು ಹಿಮ್ಮೆಟ್ಟಿಸುತ್ತದೆ, ಸವಾರಿಮಾಡುತ್ತದೆ, ಕೊಲ್ಲುತ್ತದೆ. ನಿಸರ್ಗ ವಿಶಿಷ್ಟ ಜೀವಿಯಾಗಿಯಾಗಲಿ, ಮಾನವ ಜೀವನಕ್ಕೆ ಪೂರಕವಾದ ಜೀವವಿಶೇಷವಾಗಿಯಾಗಲಿ ಬಾರದೆ ಮಾನವ ಜೀವನಕ್ಕೆ ಮಾರಕವಾದ ವೈರಿಯಾಗಿ ಕಂಡು ಬರುತ್ತದೆ.

ಹಾರ್ಡಿ, ಕಾನ್ರಾಡ್ ಮೆಲ್ವಿಲ್-ಈ ಕಾದಂಬರಿಕಾರರಲ್ಲಿ ಕಾಡು-ಕಡಲು ತನ್ನದೇ ಆದ ಜೀವ ವಿಶೇಷದ ಸಾರ್ವಭೌಮಿಕ ಕೇವಲ ಶಕ್ತಿ : ಅದು ರುದ್ರಸುಂದರ, ಗಂಭೀರ ಗಭೀರ. ಅದು ತನ್ನನ್ನರಿತು ತನ್ನ ಲಯಕ್ಕೆ ಸ್ಪಂದಿಸುವ ಮಾನವನಿಗೆ ಸ್ನೇಹಪರ, ಸಂರಕ್ಷಕ. ತನ್ನನ್ನು ಉಲ್ಲಂಘಿಸುವ ಮಾನವನಿಗೆ ಜೈವಿಕ ಸವಾಲು, ಉದಾತ್ತ ಇದಿರಾಳು ; ವೈರದಲ್ಲೂ ವಿರೋಧ ಪ್ರೇಮದ ಬಾಂಧವ್ಯದಲ್ಲಿ ಮಾನವನನ್ನು ಎದುರುಗೊಳ್ಳುವ ಸೃಷ್ಟಿವಿಶೇಷ.

ಕಾರಂತರು ನೀರಿಗಿಳಿಯುವುದಿಲ್ಲ. ಬೆಟ್ಟದ ಜೀವಿಯಾದ ಗೋಪಾಲಯ್ಯ, ಹರಿವ ಹೊಳೆಗೆ ಹರಿಬಿದ್ದು ಈಜುವುದಿಲ್ಲ; ಸೊಂಟದುದ್ದ ನೀರಿನಲ್ಲಿ 'ಓಂ ಶಂಕರ ಶಂಕರ' ಎಂದು 'ಮೂಗು ಹಿಡಿದು' ಮುಳುಗುಹಾಕುತ್ತಾನೆ. ನಿರೂಪಕ ಶಿವರಾಮಯ್ಯ ಛಳಿಗಂಜಿ, ಮೀನಿಗಂಜಿ ದಡದಲ್ಲೇ ಕಾಕಸ್ನಾನ ಮಾಡುತ್ತಾನೆ.*

---

*ಇಲ್ಲಿ, ಮರಳಿ ಮಣ್ಣಿಗೆ ಯ ಕಥಾನಾಯಕ ರಾಮ, ಕಥಾ ಪ್ರಧಾನವಾದ ಕಡಲಿನಿಂದ ಸಂಪೂರ್ಣ ಪ್ರಭಾವಿತನಾಗಿ, ಕಡಲಿನ ಒಡನಾಟವೇ ಜೀವನದ ಧಾಟಿಯನ್ನಾಗಿ ಮಾಡಿಕೊಂಡಿದ್ದಾಗ್ಯೂ, ಅವನು ಕಡಲನ್ನು ಒಂದೇ ಒಂದು ಸಂದರ್ಭದಲ್ಲಿಯಾದರೂ ಮುಟ್ಟುವುದಿಲ್ಲ—ಅಂದರೆ ಅದರ ನೀರಿನೊಂದಿಗೆ ಚೆಲ್ಲಾಟವನ್ನಾಗಲೀ, ಅದರ ತೆರೆಗಳಿಗೆ ಕಾಲೊಡ್ಡಿ ಆಟವಾಡುವುದಾಗಲೀ, ಮೀಯುವುದಾಗಲೀ, ಈಜುವುದಾಗಲೀ, ಅಥವಾ ಅದನ್ನು ದೋಣಿಯಲ್ಲಿ ಹಾಯುವುದಾಗಲೀ, ಸವಾರಿ ಮಾಡುವುದಾಗಲೀ-ಈ ಯಾವ ವಿಧವಾದ ಸ್ಪರ್ಶ ಸಂಬಂಧವೊಂದನ್ನೂ ಅನುಭವಿಸುವುದಿಲ್ಲ. ಅಜ್ಜ ರಾಮೈತಾಳ ಕಡಲು ಹಾಯ್ದು, ಈಜಿ, ವೈದಿಕ ಮಾಡುತ್ತಾನೆ : ತಾಯಿ ನಾಗವೇಣಿ ಕಡಲಿಗೆ ಬಿದ್ದು ಸತ್ತು ಬದುಕುತ್ತಾಳೆ ; ಆದರೆ ಕಡಲ ಕನಸುಗಾರ, ಕಡಲೊಡನಾಡಿ, ಕಡಲ ದಾರ್ಶನಿಯಾಗಿಯೇ ತನ್ನ ವ್ಯಕ್ತಿತ್ವದ ಅಸ್ತಿತ್ವವನ್ನು ಗಳಿಸಿಕೊಳ್ಳುವ ರಾಮ ನೀರಿಗಿಳಿಯುವುದಿಲ್ಲ. ಅಂದಾಗ ಕಡಲು ಹೇಗೆ ಒಂದು idea ಅಥವಾ ಪರಿಕಲ್ಪನೆಯಾಗಿಯೇ ವ್ಯಂಜಿತವಾಗುತ್ತದೆಯಾಗಲಿ, ಅನುಭವ ನಿಜವಾಗುವುದಿಲ್ಲ, ಸ್ಪರ್ಶದಿವ್ಯದಲ್ಲಿ ಸಾರ್ಥಕವಾಗುವುದಿಲ್ಲವೆನ್ನುವುದು ಗಮನಾರ್ಹ. ಇಲ್ಲ, ಕಾರಂತರು ನೀರಿಗಿಳಿಯುವುದಿಲ್ಲ: ಏಕೆಂದರೆ ನೀರಿಗಿಳಿದರೆ ಸಾವು, ನಾಗವೇಣಿಗಾದಂತೆ, ಅಥವಾ ಸಾವಿನ ಬಾಳು, ರಾಮೈತಾಳನ ವೈದಿಕ್ಯ : (ಶ್ರಾದ್ಧ ಜೀವನ) ದಂತೆ.

ಹೀಗೆ ಮೈ ಛಳಿ ಬಿಡದ ಬೆಟ್ಟದಜೀವ ಔತಣ-ಅಭ್ಯಂಜನಗಳ-ಸುಮಾರು ಪ್ರತಿ ಇಪ್ಪತ್ತು ಪುಟಗಳಿಗೊಂದರಂತೆ ಊಟ ಕಾಫಿ ತಿಂಡಿಗಳ ಸಂತರ್ಪಣೆ ಕಾದಂಬರಿ ಯುದ್ದಕ್ಕೂ ನಡೆಯುತ್ತದೆ—ಒಂದು ವನಭೋಜನ, ವನವಿಹಾರ ವಿಶೇಷ (picnic) ವಾಗಿ ಕಂಡು ಬರುತ್ತದೆಯಲ್ಲದೆ, ಕಾಡಿನ, ಬೆಟ್ಟದ ಅನ್ವೇಷಣೆ, ಅನುಭವ ಯಾತ್ರೆ ಯಾಗಿ ಫಲಿಸುವುದಿಲ್ಲ. ಕುಡಿಯರ ಕೂಸಿನ ಕಾಡು ಇನ್ನೊಂದು ರೀತಿಯಲ್ಲಿ ನಾಗರೀಕರಣಗೊಂಡು ಮಾನವನ ವಸಾಹತುವಾಗಿಬಿಡುತ್ತದೆ. ಇನ್ನು, ಮರಳಿಮಣ್ಣಿಗೆ ಯಲ್ಲಿ ಕಡಲು ಮಾನವನನ್ನು ನುಂಗುತ್ತಾ ಹೋಗುತ್ತದೆ. ಅವನನ್ನು 'ಬಂಜೆ'ಗೊಳಿಸಿ ನಿಧಾನವಾಗಿ ಲಯಗೊಳಿಸುತ್ತದೆ; ರಾಮೈತಾಳನ ವಂಶ ನಶಿಸುತ್ತಾ ನಾಗವೇಣಿಯ ಗರ್ಭಪಾತಗಳ 'ಬಂಜೆತನ-ವೈಧವ್ಯ'ದ ಹೊತ್ತಿಗೆ ಅವಳನ್ನೊಮ್ಮೆ ನುಂಗಿಬಿಡುತ್ತದೆ. ಕೊನೆಗೆ 'ಬಂಜೆತನದ ದಾಂಪತ್ಯದ' ತಾಯಿ ಮಕ್ಕಳಿಬ್ಬರನ್ನು ನುಂಗುತ್ತಾ ಬರುತ್ತದೆ. ಇಷ್ಟು ಹೊತ್ತಿಗೆ ಈ ವಂಶದ ಕನಿಷ್ಠರಿಬ್ಬರು ತಮ್ಮನ್ನು ತಾವೇ ಕಡಲಿನ ನುಂಗುವಿಕೆಗೆ ಒಡ್ಡಿಕೊಳ್ಳುತ್ತಾರೆ. ಹೀಗೆ ಕಡಲಿನ ಕಬಳಿಸುವ ಅನುಭವವನ್ನು ಒಂದು ವಿಶಿಷ್ಟರೀತಿ ಯಲ್ಲಿ ಆಸ್ವಾದಿಸುತ್ತಾ ಒಂದು ವಿಲಕ್ಷಣವಾದ ಮರಣಾನಂದವನ್ನು ಅನುಭವಿಸು ವುದರಲ್ಲಿ ಮರಳಿ ಮಣ್ಣಿಗೆ ಸಾರ್ಥಕಗೊಳ್ಳುತ್ತದೆ.

# ಕಾರಂತರ ಕಾದಂಬರಿಗಳಲ್ಲಿ ಗಂಡು-ಹೆಣ್ಣಿನ ಸಂಬಂಧ

ಟಿ. ಪಿ. ಅಶೋಕ

ಯಾವುದೇ ಲೇಖಕನ ಧೋರಣೆ, ದೃಷ್ಟಿಕೋನ, ಜೀವನದರ್ಶನಗಳನ್ನು ತಿಳಿಯಲು ಅವನ ಗಂಡು-ಹೆಣ್ಣಿನ ಸಂಬಂಧಗಳ ನಿರ್ವಹಣೆಯ ಅಧ್ಯಯನ ತುಂಬ ಮೂಲಭೂತವಾದ ಸೂಚನೆಗಳನ್ನು ಕೊಡಬಲ್ಲದು. ಏಕೆಂದರೆ ಗಂಡು-ಹೆಣ್ಣಿನ ಸಂಬಂಧ ಒಟ್ಟೊಟ್ಟಿಗೇ ವೈಯಕ್ತಿಕವೂ ಹೌದು; ಸಾಮಾಜಿಕವೂ ಹೌದು; ಇದು ಮನುಷ್ಯನ ಅತ್ಯಂತ ಮೂಲಭೂತವಾದ ಸಂಬಂಧಗಳಲ್ಲಿ ಒಂದು. 'ಮನುಷ್ಯ ಸಮಾಜ' ಎಂಬ ಕಲ್ಪನೆ ಇಲ್ಲದಿದ್ದ ಕಾಲದಲ್ಲೂ ಗಂಡು-ಹೆಣ್ಣಿನ ಸಂಬಂಧ ಇದ್ದೇ ಇತ್ತು. ಇತರ ಜೀವಿಗಳಲ್ಲಿ ಕಂಡುಬರುವ ಯಾವತ್ತೂ ಸಹಜ ಲೈಂಗಿಕ ಸಂಬಂಧಗಳ ನಿರ್ದೇಶಕ ಸೂತ್ರಗಳೇ ಮನುಷ್ಯ ಕುಲದ ಲೈಂಗಿಕ ಸಂಬಂಧಗಳಿಗೂ ಅನ್ವಯಿಸುತ್ತಿದ್ದವು. ಈಗಲೂ ಕೂಡ ಈ ನಿರ್ದೇಶಕ ಸೂತ್ರಗಳಲ್ಲಿ ಯಾವ ಮೂಲಭೂತ ಬದಲಾವಣೆಯೂ—ಅದರ ಜೈವಿಕ ಅಂಶಕ್ಕೆ ಸಂಬಂಧಪಟ್ಟಂತೆ—ಕಂಡುಬರುವುದಿಲ್ಲ. ಏಕೆಂದರೆ ಕಾಮವು ಹಸಿವು, ನೀರಡಿಕೆಗಳಂತೆ ಒಂದು ಮೂಲಭೂತ, ಸಹಜ, ಜೈವಿಕ ಪ್ರವೃತ್ತಿ. ಈ ಪ್ರವೃತ್ತಿಯಿಂದ ಯಾವ ಆರೋಗ್ಯಕರ ಜೀವಿಯೂ ತಪ್ಪಿಸಿಕೊಳ್ಳುವಂತಿಲ್ಲ. ಆದರೆ ಮನುಷ್ಯ ಸಮಾಜ ಉದಯಗೊಂಡು ವಿಕಾಸವಾಗುತ್ತಿದ್ದಂತೆ ಈ ಸಹಜ ಸಂಬಂಧಗಳು ಹೆಚ್ಚು ಹೆಚ್ಚು ಕೃತಕವೂ, ಸಂಕೀರ್ಣವೂ ಆಗತೊಡಗಿದವು. ಭೌತಿಕವಾದ ಲೈಂಗಿಕ ಕ್ರಿಯೆ ಸಹಜ ಜೈವಿಕ ಅಂಶಗಳನ್ನು ಉಳಿಸಿಕೊಂಡರೂ ಅದನ್ನು ಒಂದು ಕೃತಕ ಸಾಮಾಜಿಕ ಇಲ್ಲವೆ ಸಾಂಸ್ಕೃತಿಕ ಚೌಕಟ್ಟಿನೊಳಗೆ ಬಂಧಿಸಿಡುವ ಕಾರ್ಯ ಪ್ರಾರಂಭವಾಯಿತು. ಧರ್ಮ, ಸಂಸ್ಕೃತಿ, ಸಮಾಜ, ಸರಕಾರಗಳು ತಮ್ಮ ಮೂಲ ಸ್ವರೂಪಗಳನ್ನು ಕಳೆದುಕೊಂಡು ಕೇವಲ ನಿರ್ದೇಶಕ ಸಂಸ್ಥೆಗಳಾಗಿ ಮಾರ್ಪಾಟಾಗುತ್ತಿದ್ದಂತೆ ಸಾಮಾನ್ಯ, ಸಹಜ ವರ್ತನೆಯ ಅಂಶಗಳು ಕ್ರಮೇಣ ಕಾಣೆಯಾಗುತ್ತ ಅವುಗಳ ಸ್ಥಾನವನ್ನು ನಿಯಮ, ನಂಬಿಕೆ, ಕಾನೂನುಗಳು ಆಕ್ರಮಿಸಿಕೊಳ್ಳಲಾರಂಭಿಸಿದವು. ಮನುಷ್ಯನ ಪ್ರಜ್ಞೆ ಬೆಳೆದಂತೆ, ನಾಗರಿಕತೆ ವಿಕಾಸಗೊಂಡಂತೆ ಸಹಜ, ಭೌತಿಕ, ಜೈವಿಕ ಚಟುವಟಿಕೆಗಳನ್ನು ಕೀಳಾಗಿ ನೋಡುವ ಅಭ್ಯಾಸ ಪ್ರಾರಂಭವಾಗಿ ಹುಸಿ ಮಾನಸಿಕ, ಆಧ್ಯಾತ್ಮಿಕ ಚಟುವಟಿಕೆಗಳು ಶ್ರೇಷ್ಠವೆಂಬಂತೆ ಮೆರೆದವು. ಮನುಷ್ಯನ ಚೇತನವನ್ನು ಇಡಿಯಾಗಿ ಗ್ರಹಿಸುವ ಆರೋಗ್ಯಕರ ಪ್ರವೃತ್ತಿಯು ಭೌತಿಕ, ಮಾನಸಿಕ, ಆಧ್ಯಾತ್ಮಿಕಗಳೆಂಬ ಕೃತಕ ವಿಭಜನೆಗಳಲ್ಲಿ ಪರ್ಯವಸಾನಗೊಂಡಿತು. ಸಂತಾನಾಭಿವೃದ್ಧಿಗಾಗಿ ಮಾತ್ರ

ಲೈಂಗಿಕ ಸಂಬಂಧಗಳು ಎಂಬ ವಾದಗಳು ಒಂದು ನಿಟ್ಟಿನಲ್ಲಿ ಬೆಳೆದರೆ, 'ಬ್ರಹ್ಮಚರ್ಯವೇ ಜೀವನ, ವೀರ್ಯನಾಶವೇ ಮೃತ್ಯು' ಎಂಬ ಅರ್ಥ ಬರುವ ವಾದಗಳು ಇನ್ನೊಂದು ನಿಟ್ಟಿನಲ್ಲಿ ಬೆಳೆಯಲಾರಂಭಿಸಿದವು. ಗಂಡು-ಹೆಣ್ಣುಗಳು ಯಾವ ವಯಸ್ಸಿನಲ್ಲಿ ಕೂಡಬೇಕು ಎಂಬುದರಿಂದ ಹಿಡಿದು ಯಾವ ವಾರ, ತಿಥಿ, ನಕ್ಷತ್ರಗಳಲ್ಲಿ ಕೂಡಬೇಕು ಎಂಬುವವರೆಗೆ ನಿಯಮಗಳು ವಿಸ್ತೃತಗೊಂಡವು. ಇಂಥ ಕೃತಕ ನಿರ್ದೇಶಕ ಸೂತ್ರಗಳನ್ನೂ, ಕಠೋರ ನಿಯಮಗಳನ್ನೂ ಮೀರುವ, ಪ್ರತಿಭಟಿಸುವ, ಉಲ್ಲಂಘಿಸುವ ಸಂದರ್ಭಗಳಲ್ಲೆಲ್ಲ ಸಮಸ್ಯೆಗಳು ಇನ್ನಷ್ಟು ಜಟಿಲಗೊಳ್ಳಲಾರಂಭಿಸಿದವು. ಮನುಷ್ಯ ಸಮಾಜದ ಅನಿವಾರ್ಯತೆಯನ್ನು ಒಪ್ಪಿಕೊಂಡಮೇಲೆ ಲೈಂಗಿಕ ಸಂಬಂಧಗಳನ್ನೂ ಒಳಗೊಂಡಂತೆ ಮನುಷ್ಯ ವರ್ತನೆಗಳನ್ನೂ, ಮನುಷ್ಯ-ಮನುಷ್ಯ ಸಂಬಂಧಗಳನ್ನೂ ನಿರ್ದೇಶಿಸಿ, ನಿಯಂತ್ರಿಸುವ—ಎಲ್ಲ ಮನುಷ್ಯರಿಗೂ ಸಾಮಾನ್ಯವಾದ—ಅಂಶಗಳೇ ಇರಬಾರದೆ ಎಂಬ ಪ್ರಶ್ನೆಗಳು ಎದುರಾದವು. ಲೈಂಗಿಕ ವಿಕೃತಿ, ಲೈಂಗಿಕ ಶೋಷಣೆಗಳನ್ನು ನಿರೋಧಿಸುವ, ಹತ್ತಿಕ್ಕುವ ಸರ್ವಸಮ್ಮತ ನಿಯಮಗಳು ಅವಶ್ಯಕವಲ್ಲವೆ ಎಂಬ ವಾದಗಳು ಹುಟ್ಟಿಕೊಂಡವು. ಪ್ರತಿಯೊಬ್ಬ ವ್ಯಕ್ತಿಯ ಲೈಂಗಿಕ ಸ್ವಾತಂತ್ರ್ಯವನ್ನು ಉಳಿಸುವ, ಪರಸ್ಪರ ಲೈಂಗಿಕ ಸ್ವಾತಂತ್ರ್ಯವನ್ನು ಗೌರವಿಸುವ ಕೊನೆಯಪಕ್ಷ ಸ್ವನಿಯಂತ್ರಣ ಅನಿವಾರ್ಯವಲ್ಲವೇ ಎಂಬ ಕೂಗು ಕೇಳಿ ಬಂದಿತು. ಗಂಡು-ಹೆಣ್ಣಿನ ಸಂಬಂಧಗಳನ್ನು ಕುರಿತಂತೆ ಕಾರಂತರ ಕಾದಂಬರಿಗಳಲ್ಲಿ ಕಂಡುಬರುವ ಡಯಲೆಕ್ಟಿಕ್ ಇದು.

ಸಹಜವಾಗಿಯೇ, ಗಂಡು-ಹೆಣ್ಣಿನ ಸಂಬಂಧಕ್ಕೆ ಸಂಬಂಧಿಸಿದಂತೆ ಕಾರಂತರು ತೆಗೆದುಕೊಳ್ಳುವ ನಿಲುವುಗಳು ಒಂದು ಸಂಸ್ಕೃತಿ, ಪರಂಪರೆಗಳನ್ನು ಕುರಿತು ತೆಗೆದುಕೊಳ್ಳುವ ನಿಲುವುಗಳೇ ಆಗಿಬಿಡುತ್ತವೆ. ಅಲ್ಲದೆ ಲೈಂಗಿಕ ಸಂಬಂಧವೆನ್ನುವುದು ಒಂದು ಮನೋ-ದೈಹಿಕ ವ್ಯಾಪಾರವಾಗಿರುವುದರಿಂದ ವ್ಯಕ್ತಿಯ ಅಂತರಂಗ - ಬಹಿರಂಗಗಳೆರಡನ್ನೂ ಒಟ್ಟಿಗೇ ಹಿಡಿಯಲು ಕಾರಂತರಿಗೆ ಸಾಧ್ಯವಾಗಿದೆ. ಒಂದು ಸಾಮುದಾಯಿಕ ಜೀವನ ಶ್ರದ್ಧೆಯನ್ನು ನಿಯಂತ್ರಿಸುತ್ತಿರುವ ಶಕ್ತಿಗಳಾವುವು ಎಂಬುದನ್ನು ಶೋಧಿಸಿಕೊಳ್ಳಲು ಕಾರಂತರು ಅನುಸರಿಸುತ್ತಿರುವ ಮಾರ್ಗ ವೈಜ್ಞಾನಿಕವಾದದ್ದು. ಅವರ ರ್‍ಯಾಶನಲಿಸ್ಟ್ ಮನೋಧರ್ಮ ವ್ಯಕ್ತಿ ವೈಪರೀತ್ಯಗಳನ್ನು ಅವುಗಳ ಸಂದರ್ಭದಲ್ಲಿ ಅರ್ಥ ಮಾಡಿಕೊಳ್ಳಲು ಅವರಿಗೆ ಸಹಾಯ ಮಾಡಿದೆ. ಕಾರಂತರು ಯಾವುದೇ ಸಂದರ್ಭವನ್ನು ಅದರ ಸಾಪೇಕ್ಷತೆಯಲ್ಲೇ ನೋಡುವುದಾದರೂ ಪರಿಪೂರ್ಣ ಲೈಂಗಿಕ ಸಂಬಂಧಗಳ ಬಗ್ಗೆ ಅವರಿಗೊಂದು ಆರೋಗ್ಯಕಾರಿ ಕಲ್ಪನೆ ಇರುವುದರಿಂದ ಗಂಡು-ಹೆಣ್ಣಿನ ಸಂಬಂಧದ ವಿವಿಧ ಮುಖಗಳು ರೂಪವಿಲ್ಲದೆ ಕುಸಿಯುವುದಿಲ್ಲ. ಆದ್ದರಿಂದಲೇ ಕಾರಂತರು ಕೆಲವು ಸಂಬಂಧಗಳನ್ನು ಮೆಚ್ಚುಗೆಯಿಂದ, ಇನ್ನು ಕೆಲವು ಸಂಬಂಧಗಳನ್ನು ಸಹಾನುಭೂತಿಯಿಂದ, ಮತ್ತೆ ಕೆಲವು ಸಂಬಂಧಗಳನ್ನು ತಿರಸ್ಕಾರದಿಂದ ನೋಡುವುದಾದರೂ ಇವುಗಳಲ್ಲಿ ಪರಸ್ಪರ ಭಿನ್ನತೆಯಾಗಲೀ, ವಿರೋಧ

ವಾಗಲೀ ಕಂಡು ಬರುವುದಿಲ್ಲ. ಕಾರಂತರ ಧೋರಣೆಗಳಲ್ಲಿ ಇತ್ಯಾತ್ಮಕವಾದದ್ದು ಮತ್ತು ನೇತ್ಯಾತ್ಮಕವಾದದ್ದು ಅವರು ಆ ಧೋರಣೆಗಳನ್ನು ತಲುಪುವ ಶೈಲಿಗೆ ಮಾತ್ರ ಸಂಬಂಧಿಸಿದ್ದು. ಕಾರಂತರು ಏನನ್ನು ಹೇಳಬೇಕಾಗಿದೆಯೋ ಅದನ್ನು ಕೇವಲ ಬೇರೆ ಬೇರೆ ರೀತಿಗಳಲ್ಲಿ ಹೇಳುವಂಥದ್ದು.

ಕಾರಂತರು ಕಾಮವನ್ನು ಆರಾಧಿಸುವುದೂ ಇಲ್ಲ; ಧಿಕ್ಕರಿಸುವುದೂ ಇಲ್ಲ. ಒಪ್ಪಿಕೊಳ್ಳುತ್ತಾರೆ, ಬದುಕನ್ನು ಒಪ್ಪಿಕೊಳ್ಳುವಂತೆ. ಅದರಲ್ಲ ಸೂಕ್ಷ್ಮತೆ, ಸಂಕೀರ್ಣತೆಗಳಲ್ಲಿ. ಇದರರ್ಥ ಕಾರಂತರು ಲೈಂಗಿಕ ಸಂಬಂಧಗಳನ್ನು ಯಾಂತ್ರಿಕ ಸಂಬಂಧಗಳಾಗಿ ನೋಡುತ್ತಾರೆಂದಾಗಲೀ, ಅದರಲ್ಲಿನ ಚೆಲುವನ್ನು ಗಮನಿಸುವುದಿಲ್ಲವೆಂದಾಗಲೀ ಅಲ್ಲ. ಗಂಡು-ಹೆಣ್ಣಿನ ಲೈಂಗಿಕಾಕರ್ಷಣೆಯು ಹಳೆಯದೆಲ್ಲವನ್ನೂ ಮರೆಸಿ ಹೊಸಜೀವನದ ಸಾಧ್ಯತೆಗಳನ್ನೇ ತೆರೆಯುವಷ್ಟು ಸಾಮರ್ಥ್ಯವನ್ನು ಕೊನೆಯಪಕ್ಷ ಆ ಕ್ಷಣದಲ್ಲಾದರೂ ಧ್ವನಿಸುವ ವಿಸ್ಮಯ ಕಾರಂತರ ಅವಲೋಕನದಿಂದ ತಪ್ಪಿಸಿಕೊಳ್ಳುವುದಿಲ್ಲ. "ಮರಳಿ ಮಣ್ಣಿಗೆ" ಕಾದಂಬರಿಯ ಲಚ್ಚ-ನಾಗವೇಣಿಯರ ಸಂಬಂಧದ ಹಿನ್ನೆಲೆಯಲ್ಲಿ ಈ ಕೆಳಗಿನ ಉದ್ಧೃತಿಗಳು ನನ್ನ ಮಾತನ್ನು ಸ್ಪಷ್ಟೀಕರಿಸುತ್ತವೆ: "ಇತ್ತ ವಯಸ್ಸು ತುಂಬಿ ಯೌವನದ ಕಾಂತಿಯನ್ನು ಸೂಸುತ್ತಿದ್ದ ನಾಗವೇಣಿಯ ಚೆಲುವು, ಲಚ್ಚನ ಕಣ್ಣಿನಲ್ಲಿ ಬೆಳದಿಂಗಳನ್ನು ಚೆಲ್ಲಿತು. ಈ ರೂಪರಾಶಿಯನ್ನು ಮರೆತು ತಾನೆಲ್ಲಿಗೆ ಹೋಗಿದ್ದೆನೆಂಬ ಮರುಳು ಅವನಿಗಾಯಿತು." (ಮ.ಮ. ಆರನೆಯ ಆವೃತ್ತಿ ಪು. 307) "ಲಚ್ಚನು ನಾಗವೇಣಿಯ ಯೌವನವನ್ನು ತಿರುಗಿ ತನ್ನ ಅಧಿಕಾರಕ್ಕೆ ತಂದುಕೊಂಡ ಹಾಗಾಯಿತು. ಧರ್ಮ, ಸ್ನೇಹಗಳಿಗೆ ಕಟ್ಟುಬಿದ್ದ ಅವಳ ಜೀವವು ಇತರ ಎಲ್ಲ ಯೋಚನೆಗಳನ್ನು ಮರೆತು, ಅವನಿಗೆ ಶಯ್ಯೆಯ ಪಾಲನ್ನು ಸಲ್ಲಿಸಿತು. ಆತನ ಮೇಲಿದ್ದ ಉಗ್ರ ವೈರವು ಮರವೆಯಾಯಿತು." (ಮ. ಮ. ಪು. 307-308) ಕಾರಂತರು ಸಿದ್ಧ, ಶಾಸ್ತ್ರೀಯ ಸತ್ಯಗಳನ್ನು ಮುಂದಿಟ್ಟುಕೊಂಡೇ ಬದುಕನ್ನು ಸಮೀಪಿಸುವುದಿಲ್ಲ. ಕಾಮವೆಂಬುದು ಒಂದು ಮನೋದೈಹಿಕ ಒತ್ತಡ. ನಿಸರ್ಗದತ್ತ ಒತ್ತಡ. ಹಾಗಾಗಿ ಇಂಥ ಮನೋದೈಹಿಕ ಬಯಕೆಗಳು ತಣಿಯಲಾರದೆ ವ್ಯಕ್ತಿ ವಿಕಾಸವೂ ಆಗಲಾರದು; ಬದುಕಿನಲ್ಲಿ ತೃಪ್ತಿ ಎನ್ನುವುದೂ ಸಿಗಲಾರದು. ವಿವಾಹ ದಾಂಪತ್ಯ, ಕುಟುಂಬ ಎನ್ನುವುದು ಇಂಥ ಬಯಕೆ, ಒತ್ತಡಗಳಿಗೆ ಸಾಮಾಜಿಕ ರೂಪವನ್ನು, ಧಾರ್ಮಿಕ, ಆಧ್ಯಾತ್ಮಿಕ, ನೈತಿಕ ಸ್ವರೂಪವನ್ನು ಕೊಡುವ ಸಂಸ್ಥೆಗಳೇ ಆದರೂ ಕೆಲವೊಮ್ಮೆ ಇಂಥ ಸಂಸ್ಥೆಗಳೇ ಮೂಲ ಪ್ರೇರಣೆಗಳಿಗೆ ಅಡ್ಡಿಯಾಗುವುದುಂಟು. ಆಗ ವ್ಯಕ್ತಿಗಳು ತಮ್ಮ ಸಾಂಸ್ಕೃತಿಕ ಆವರಣವನ್ನು ಪ್ರಜ್ಞಾಪೂರ್ವಕವಾಗಿಯೋ, ಅಪ್ರಜ್ಞಾಪೂರ್ವಕವಾಗಿಯೋ ಮೀರಲು ಪ್ರಯತ್ನಿಸುತ್ತಾರೆ. ಫಲಿತಾಂಶವು ವೈಯಕ್ತಿಕ ಗಟ್ಟಿತನವನ್ನು ಅವಲಂಬಿಸಿರುತ್ತದೆ. ಇಂಥ ಇತ್ಯಾತ್ಮಕ ಫಲಿತಾಂಶಗಳು ಸದ್ಯದ ಸಾಮಾಜಿಕ, ಸಾಂಸ್ಕೃತಿಕ ಸಂದರ್ಭದಲ್ಲಿ ಕೆಲವರ ದೃಷ್ಟಿಯಿಂದ ಅನೈತಿಕ, ಅಸಭ್ಯ, ಅಸಹ್ಯವೆನಿಸಬಹುದಾದರೂ ಇವುಗಳನ್ನೂ

ಮೀರಿದ ಮೂಲಭೂತ ಮಾನವೀಯ ಸಂದರ್ಭಗಳಲ್ಲಿ ಸಹ್ಯ, ಸಭ್ಯ, ನೈತಿಕವೇ ಆಗಿ ಬಿಡುತ್ತದೆ. ಆದ್ದರಿಂದಲೇ "ಜಗದೋದ್ಧಾರನಾ"ದಲ್ಲಿ ಶಿರಸಿಯ ಗಣಪತಿ ಭಟ್ಟರ ಪತ್ನಿ ಗಂಡನಲ್ಲಿ ಕಾಣದ ಯೌವನವನ್ನು ವಿಷ್ಣುಮಹಾರಾಜರಲ್ಲಿ ಕಾಣುವುದು; "ಹೆತ್ತಳಾತಾಯಿ"ಯಲ್ಲಿ ಕುಸುಮಾ ತಾಯ್ತನದ ಹಂಬಲದಲ್ಲಿ 'ಅಡ್ಡದಾರಿ' ಹಿಡಿಯುವುದು; "ಜಾರುವ ದಾರಿಯಲ್ಲಿ" ಗುಲಾಬಿ ಇದೇ ತೆರನಾದ ಬಯಕೆಯಿಂದ ಮಾಧವನನ್ನು ಕೂಡುವುದು; "ಮುಗಿದ ಯುದ್ಧ"ದಲ್ಲಿ ಅಚ್ಚುತ ಸುಬ್ಬಿಯಿಂದ ಆಕರ್ಷಿತನಾಗುವುದು ಮತ್ತು ಹೆಂಡತಿಯೊಡನೆ ಲೈಂಗಿಕ ಸಂಬಂಧ ವೈದ್ಯಕೀಯ ನಾಗಿ ನಿಷಿದ್ಧ ಎಂದು ತಿಳಿದೂ ಕೂಡಿ ಆಮೇಲೆ ಅದಕ್ಕಾಗಿ ಪರಿತಪಿಸುವುದು ಒಂದು ಅರ್ಥದಲ್ಲಿ ಮಾನವೀಯವೇ ಆಗುತ್ತದೆ. ಇಲ್ಲೆಲ್ಲ ಕಾರಂತರು ಒಂದೇ ವ್ಯಕ್ತಿತ್ವದೊಳಗೆ ಪ್ರಕೃತಿ ರೂಪಿಸಿದ ದೇಹ ಮತ್ತು ಪರಂಪರೆ ರೂಪಿಸಿದ ಮನಸ್ಸುಗಳ ನಡುವಣ ಯಾವತ್ತೂ ಸಂಘರ್ಷವನ್ನೂ, ಇಂಥ ಸಂಘರ್ಷಗಳಲ್ಲೆಲ್ಲ ದೇಹವೇ ಗೆಲ್ಲುವ ಅನಿವಾರ್ಯತೆ ಯನ್ನೂ, ಹಾಗೆ ಗೆಲ್ಲುವುದು ನಿಸರ್ಗ ಧರ್ಮಕ್ಕೆ ಸಹಜವಾಗಿಯೇ ಇರುತ್ತದೆಂಬ ಯಾವತ್ತೂ ಸತ್ಯವನ್ನು ಅರ್ಥಪೂರ್ಣವಾಗಿ ಗುರುತಿಸುತ್ತಾರೆ. ಇಂಥ ಚಟುವಟಿಕೆ ಗಳಲ್ಲೆಲ್ಲ ಅಂತಿಮವಾಗಿ ಎಲ್ಲರೂ ಸಫಲರಾಗುತ್ತಾರೆಂದೇನೂ ಇಲ್ಲ. ಆದರೆ ಸಾಫಲ್ಯ ವೈಫಲ್ಯಗಳ ಪೂರ್ವಶರತ್ತು, ಮುಲಾಜುಗಳಿಲ್ಲದೆಯೂ ಇಂಥ ಸಂಘರ್ಷ, ಕ್ರಿಯೆ, ಯಾವತ್ತೂ ನಡೆಯುವಂಥದ್ದು. "ಬತ್ತದ ತೊರೆ"ಯ ಮಂಜುಳೆ, ವಿನುತೆ, ಅಂಜಲಿ ಒಟ್ಟಿನಲ್ಲಿ ಅಸಫಲರಾಗಬಹುದು, "ನಂಬಿದವರ ನಾಕ ನರಕ"ದ ಸತ್ಯಭಾಮೆ, "ಧರ್ಮ ರಾಯನ ಸಂಸಾರ"ದ ಸರಸ್ವತಿ, "ಕೇವಲ ಮನುಷ್ಯರು"ದ ಹಯವದನ ರಾಯರು, "ಮೈಮನಗಳ ಸುಳಿಯಲ್ಲಿ"ನ ಮಂಜುಳೆ ಅಂತಿಮವಾಗಿ ಸಫಲರಾಗಬಹುದು. ಲೈಂಗಿಕ ಸಂಬಂಧಗಳು ಮಾನವೀಯ ಸಂಬಂಧಗಳೂ ಆದ್ದರಿಂದ, ಲೈಂಗಿಕ ಚಟುವಟಿಕೆಗಳು ಸಾಮಾಜಿಕ ಚಟುವಟಿಕೆಗಳೂ ಆದ್ದರಿಂದ ಇಲ್ಲಿ ಸೋಲು-ಗೆಲುವುಗಳು ಪೂರ್ವ ನಿರ್ಧಾರಿತವಲ್ಲ. ಹುಡುಕುತ್ತ ಹುಡುಕುತ್ತ ಹೋದಂತೆಯೇ ಸೋಲು ಗೆಲುವುಗಳಿಗೆ ಕಾರಣಗಳು – ಬೇರೆ ಬೇರೆ ಸಂದರ್ಭಗಳಲ್ಲಿ ಬೇರೆ ಬೇರೆ ಕಾರಣಗಳು–ಸ್ಪಷ್ಟವಾಗುತ್ತ ಹೋಗಬಹುದು. ಕಾರಂತರ ಕಾದಂಬರಿಗಳ ಮಹತ್ವ ಇಂಥ ಅರ್ಥಪೂರ್ಣ ಹುಡುಕಾಟಗಳಲ್ಲಿಯೂ ಇಂಥ ಹುಡುಕಾಟಗಳ ಫಲವಾಗಿಯೇ ಮೂಡಿಬರುವ ಬೆರುಗುಗೊಳಿಸುವ ಸತ್ಯದಲ್ಲಿಯೂ ಇದೆ.

ಆದ್ದರಿಂದಲೇ ಮನುಷ್ಯನ ಪ್ರಜ್ಞೆಯ ವಿಕಾಸದ ಯಾವುದೋ ಒಂದು ಘಟ್ಟದಲ್ಲಿ ಹುಟ್ಟಿಕೊಂಡ ಕೆಲ ವಿಚಾರಗಳು ಸೃಷ್ಟಿಯ ಮೂಲ ಕಲ್ಪನೆಯನ್ನೇ ತಿರುಚುವ, ಧ್ವಂಸಗೊಳಿಸುವ ವ್ಯಂಗ್ಯವನ್ನೂ, ಇವುಗಳ ಸಾಮಾಜಿಕ, ಸಾಂಸ್ಕೃತಿಕ ಅಪಾಯಗಳನ್ನೂ ಮಾನವೀಯ ದುರಂತಗಳನ್ನೂ ಕಾರಂತರು ಸಮರ್ಥವಾಗಿ ಬಯಲಿಗೆಳೆದಿದ್ದಾರೆ. ಸಹಜವಾಗಿಯೇ ಕಾರಂತರು ಬ್ರಹ್ಮಚರ್ಯವನ್ನು ಜೀವನ ಪರವಾದ ಮೌಲ್ಯವಾಗಿ

ಸ್ವೀಕರಿಸುವುದಿಲ್ಲ. ಬ್ರಹ್ಮಚರ್ಯವನ್ನು ಬೋಧಿಸುವ, ನಟಿಸುವ ವ್ಯಕ್ತಿಗಳನ್ನು ಕಾರಂತರು ಅನುಮಾನದಿಂದ ನೋಡುತ್ತಾರೆ. ಬ್ರಹ್ಮಚರ್ಯವು ಕೇವಲ ಪಾಲಿಸಲು ತುಂಬ ಕಷ್ಟವಾದ ನಿಯಮ ಎಂಬುದಕ್ಕಿಂತ ಅದೊಂದು ಪಾಲಿಸಬೇಕಾದ ನಿಯಮವಲ್ಲ ಎಂದೇ ಕಾರಂತರು ನಂಬಿದಂತಿದೆ. ಹಾಗಾಗಿ ಗಂಡು-ಹೆಣ್ಣಿನ ಸಂಬಂಧಗಳನ್ನು ನಿರ್ವಹಿಸುವಾಗಲೆಲ್ಲ ಬ್ರಹ್ಮಚರ್ಯವನ್ನು ಕೃತಕವಾದ, ಜೀವ ವಿರೋಧಿಯಾದ ಹುಸಿಮೌಲ್ಯ ಬೇರೊಂದಿಲ್ಲ-ಎನಿಸುವಷ್ಟು ಕಟುವಾಗಿ, ಖಾರವಾಗಿ ಬರೆದಿದ್ದಾರೆ. ಬ್ರಹ್ಮಚರ್ಯವು ಹುಸಿ ವೈರಾಗ್ಯದ ಒಂದು ಮುಖವೂ ಆಗಿರುವುದರಿಂದ ವಿರಕ್ತಿ ಮೂಲವಾದ ಎಲ್ಲ ಹುಸಿ ವಿಚಾರಗಳನ್ನು ಕಾರಂತರು ಏಕೆ ತಿರಸ್ಕರಿಸುತ್ತಾರೆ ಎಂಬ ಪ್ರಶ್ನೆಗೆ ಇದೊಂದು ಸೂಚನೆಯಾಗಬಲ್ಲದು. ಪುರುಷಪ್ರಧಾನ ವ್ಯವಸ್ಥೆ ಹೆಣ್ಣನ್ನು ನಿಕೃಷ್ಟವಾಗಿ ಕಾಣುವ, ಶೋಷಿಸುವ, ತಿರಸ್ಕರಿಸುವ ಪ್ರೇರಣೆಗಳ ಹಿಂದೆಯೂ ಹುಸಿ ಆಧ್ಯಾತ್ಮದ, ಪಾರಮಾರ್ಥದ ಅಂಶಗಳೇ ಕೆಲಸ ಮಾಡುವುದರಿಂದ ಕ್ರೌರ್ಯಜನ್ಯವಾದ ಇವೆಲ್ಲವನ್ನೂ ಕಾರಂತರು ತಿರಸ್ಕರಿಸುತ್ತಾರೆ. "ಸನ್ಯಾಸಿಯ ಬದುಕು", "ಜಗದೋದ್ಧಾರನಾ", "ಕನ್ನಡಿಯಲ್ಲಿ ಕಂಡಾತ", "ಆಳನಿರಾಳ", "ಸಮೀಕ್ಷೆ", "ಕಣ್ಣಿದ್ದೂ ಕಾಣರು," "ಕೇವಲ ಮನುಷ್ಯರು" ಮುಂತಾದ ಕಾದಂಬರಿಗಳನ್ನು ಈ ನಿಟ್ಟಿನಲ್ಲಿ ವಿವರವಾಗಿ ಚರ್ಚಿಸಲು ತುಂಬ ಅವಕಾಶಗಳಿವೆ. ಕ್ಷುಲ್ಲಕ, ವೈಯಕ್ತಿಕ ಕಾರಣಗಳಿಗಾಗಿ ತಮ್ಮ ಹೆಂಡಂದಿರನ್ನು ತೊರೆಯುವ ಗಂಡಂದಿರ ಸ್ವಾರ್ಥ, ಆ ಸ್ವಾರ್ಥವನ್ನು ಮುಚ್ಚಿ ಹಾಕಿಕೊಳ್ಳಲು ಹಾಕಿಕೊಳ್ಳುವ ಮುಖವಾಡಗಳು, ಈ ಮುಖವಾಡಗಳ ಹಿಂದಿನ ಧೂರ್ತತೆ ಕಾರಂತರ ಸಿಟ್ಟು, ತಿರಸ್ಕಾರಗಳಿಗೆ ಒಳಗಾಗುತ್ತವೆ. ಹೀಗೆಂದಾಗ ಕಾರಂತರು ಬರೇ ಪಡಿಯಚ್ಚುಗಳನ್ನು ಸೃಷ್ಟಿಸುತ್ತಾರೆಂದಾಗಲೀ, ಎಲ್ಲರನ್ನೂ ಒಂದೇ ತಕ್ಕಡಿಯಲ್ಲಿ ಇಟ್ಟು ತೂಗುತ್ತಾರೆಂದಾಗಲೀ ಅಲ್ಲ. ಒಂದು ಜೀವನಪರವಾದ, ಇತ್ಯಾತ್ಮಕವಾದ, ಆರೋಗ್ಯಪೂರ್ಣ ಕಲ್ಪನೆಯ ಹಿನ್ನೆಲೆಯಲ್ಲೇ ಕಾರಂತರು ಸಂದರ್ಭಗಳ ಸಾಪೇಕ್ಷತೆಯನ್ನು ಸೂಕ್ಷ್ಮವಾಗಿ ಹಿಡಿಯುತ್ತಾರೆ. ಆದ್ದರಿಂದಲೇ ಶಂಕರರಾಯ (ಸನ್ಯಾಸಿಯ ಬದುಕು), ಪರಮೇಶ್ವರ (ಕನ್ನಡಿಯಲ್ಲಿ ಕಂಡಾತ) ಮತ್ತು ಯಶವಂತರಾಯರು (ಅಳಿದ ಮೇಲೆ) ತಮ್ಮ ಹೆಂಡಂದಿರನ್ನು ತೊರೆದು ಹೋಗುವ ವ್ಯತ್ಯಾಸಗಳಿಗೆ ಮೌಲಿಕ ಕಾರಣಗಳು ಕಂಡು ಬರುತ್ತದೆ.

ಕಾರಂತರು ಗಂಡು-ಹೆಣ್ಣಿನ ಸಂಬಂಧಗಳ ಬಗ್ಗೆ ಯಾವುದೇ ನಿಲುವನ್ನು ತೆಗೆದುಕೊಳ್ಳುವಾಗ ಸಂದರ್ಭದ ಸಾಪೇಕ್ಷತೆಯನ್ನು ಮುಖ್ಯವಾಗಿ ಗಮನದಲ್ಲಿಟ್ಟುಕೊಳ್ಳುತ್ತಾರಾದರೂ ಅದನ್ನು ಕೇವಲ ಕ್ರೀಡಾ ಸಂದರ್ಭವೆಂಬಂತೆ ಪರಿಭಾವಿಸದೆ ಒಂದು ಸಂಸ್ಕೃತಿ ರೂಪಿಸುವ ಒಟ್ಟು ಜೀವನದ ಹಿನ್ನೆಲೆಯಲ್ಲಿಯೇ ಹಿಡಿಯುತ್ತಾರೆ. "ಕನ್ನಡಿಯಲ್ಲಿ ಕಂಡಾತ" ಕಾದಂಬರಿಯಲ್ಲಿ ಜಯರಾಮನ ಪ್ರಜ್ಞೆಯಲ್ಲಿ ಮೂಡಿ ಬರುವ ಕೆಳಗಿನ ಸಾಲುಗಳು ಕಾರಂತರು ಗಂಡು-ಹೆಣ್ಣಿನ ಸಂಬಂಧಗಳನ್ನು ಎಷ್ಟು ಸೂಕ್ಷ್ಮವಾಗಿ,

ಸಹಾನುಭೂತಿಯಿಂದ ಅರ್ಥಮಾಡಿಕೊಳ್ಳುತ್ತಾರೆಂಬುದಕ್ಕೆ ಒಂದು ಅತ್ಯುತ್ತಮ ಉದಾಹರಣೆಯಾಗುತ್ತದೆ. "ಮರುಗಳಿಗೆಗೆ ಅನಿಸಿತು. ಮನೆಯ ಹೆಂಡತಿ ಅವನ ಹಕ್ಕಿನ ಸೊತ್ತು. ಅದು ಬಯಸಿ ಬಂದದ್ದಲ್ಲ, ಬಿಟ್ಟಿಯಾಗಿ ಬಂದದ್ದು. ಅನೇಕ ಕುಟುಂಬಗಳಲ್ಲಿ ಇಂದಿಗೂ ತಮ್ಮ ಊರಲ್ಲಿರುವ ವಾಡಿಕೆಯಂತೆ ಹೆಂಡತಿಯಾದವಳು ಒನಪು, ವೈಯ್ಯಾರಗಳನ್ನು ತೋರಿಸಲಾರದೆ ಗಂಡನ ಮುಂದೆ ನಗುವುದಕ್ಕೂ ಕೂಡಾ ಅಂಜುವುದನ್ನು ಕಾಣುತ್ತೇವೆ. ಗಂಡನಾದವನಿಗೂ ಅವಳನ್ನು ಎಲ್ಲರ ಮುಂದೆ ಮಾತನಾಡಿಸುವ ಧೈರ್ಯ ಬರದು. ಇಂಥ ಗಂಡ-ಹೆಂಡಿರಾದ ಪರಮೇಶ್ವರ - ಕಾವೇರಿಯರು ಒಂದೇ ಮನೆಯಲ್ಲಿ, ಒಂದೇ ಕೋಣೆಯಲ್ಲಿ ಕತ್ತಲಲ್ಲಿ ಸೇರುವ ಕಾಲ ಸಾಗಿತು. ಗಂಡ ಮಲಗಿ ನಿದ್ದೆ ತೂಕಡಿಸುವ ಹೊತ್ತಿಗೆ ಹೆಂಡತಿ ಮನೆ ಸಾರಿಸಿ ಒಲೆ ಒರಸಿ ದಣಿದು ಬರುವಳು. ಆಗ ಇವನ ದೇಹ ಹಸಿದು ಅವಳನ್ನು ತಬ್ಬಿದರೂ ಅವಳು ವೈಯಾರ ರಹಿತವಾಗಿ ಅವನ ಆಕೃತಿಯನ್ನು ಕತ್ತಲಲ್ಲಿ ಕಾಣಲಾರದೆ—ಹೆದರಿಯೋ ನಾಚಿಯೋ ಅವನಿಗೆ ತನ್ನ ದೇಹವನ್ನು ತೆರತೊಡಗಿದಳು. ಮುಂದೆ ಅದೇ ರೀತಿ ಮನಸ್ಸನ್ನು ರಮಿಸುವ ಪ್ರಯತ್ನವಿಲ್ಲದೆಯೆ ಸಿಗುವ ಒಂದು ಯಾಂತ್ರಿಕ ಭೋಗವಾಯಿತು. ಮಕ್ಕಳು ಮರಿ ಹುಟ್ಟುವುದಕ್ಕೆ ಅದರಿಂದ ಯಾವ ಅಡಚಣೆಯೂ ಬಾರದು... ಒಬ್ಬರು ಮತ್ತೊಬ್ಬರನ್ನು ಒಲಿಸಿ ಹತ್ತಿರ ತಂದುಕೊಳ್ಳುವ ಪ್ರಯತ್ನವೇ ಬೇಕಿಲ್ಲದ ರೀತಿಯ ಜೀವನ ತನ್ನ ಸಮಾಜದ ಹೆಚ್ಚಿನ ಜನರದ್ದಲ್ಲವೆ ಎಂದು ಆತನಿಗೆ ಕಾಣಿಸ ತೊಡಗಿತು". (ಕ. ಕಂಡಾತ. ಪು. 166–67).

ಹೀಗೆಂದಾಗ ಆಧುನಿಕ ವಿದ್ಯಾಭ್ಯಾಸ ಗಂಡು-ಹೆಣ್ಣಿನ ಸಂಬಂಧವನ್ನು ಅವಶ್ಯವಾಗಿ ಸಫಲಗೊಳಿಸುತ್ತದೆ ಎಂಬ ಭ್ರಮೆಗಳನ್ನು ಕಾರಂತರು ಇಟ್ಟುಕೊಳ್ಳುವುದಿಲ್ಲ. ದಾಂಪತ್ಯದ ಸಫಲತೆ, ವಿಫಲತೆಗಳನ್ನು ಚರ್ಚಿಸುವಾಗ ಕಾರಂತರ "ಒಡಹುಟ್ಟಿದವರು" ಕಾದಂಬರಿಯನ್ನು (ಕಲಾತ್ಮಕ ಯಶಸ್ಸಿನ ದೃಷ್ಟಿಯಿಂದ ಅದೇನೂ ಕಾರಂತರ ಮಹತ್ತ್ವದ ಕೃತಿಯಲ್ಲದಿದ್ದರೂ) ಪ್ರಾತಿನಿಧಿಕವೆಂಬಂತೆ ವಿಶ್ಲೇಷಿಸಲು ಅವಕಾಶಗಳಿವೆ. ಈ ಕಾದಂಬರಿಯಲ್ಲಿ ವಾಸಂತಿ ಸುಧಾಕರರದು ಸಾಂಪ್ರದಾಯಿಕ ವಿವಾಹ ; ಸೇವಂತಿ-ವಾಸುದೇವರಾಯರದು ಒಂದು ರೀತಿಯಲ್ಲಿ ಪ್ರೇಮ ವಿವಾಹ. ಆದರೆ ಎರಡೂ ದಾಂಪತ್ಯಗಳು ಪ್ರಾರಂಭದಲ್ಲಿ ವಿಫಲಗೊಳ್ಳುತ್ತವೆ. ಅಂದರೆ ಈ ದಾಂಪತ್ಯಗಳ ವೈಫಲ್ಯಕ್ಕೆ ವಿವಾಹ ಪದ್ಧತಿಯೇ ಅನಿವಾರ್ಯ ಕಾರಣವಾಗಲಿಲ್ಲ. ಸುಧಾಕರ, ಸೇವಂತಿ, ವಾಸಂತಿ, ವಾಸು ದೇವರಾಯ ಎಲ್ಲರೂ ವಿದ್ಯಾವಂತರೇ. ಆದ್ದರಿಂದ ನಾವು ಇಂದು ಯಾವುದನ್ನು "ವಿದ್ಯಾಭ್ಯಾಸ" ಎಂದು ಕರೆಯುತ್ತೇವೋ ಅದರ ಕೊರತೆಯೂ ದಾಂಪತ್ಯದ ಸೋಲಿಗೆ ಕಾರಣವಾಗಲಿಲ್ಲ. ಇವೆಲ್ಲರೂ ತಕ್ಕಮಟ್ಟಿಗೆ ಅನುಕೂಲಸ್ಥರೇ ಆದ್ದರಿಂದ ಬಡತನ ಕಾರಣವಾಗಲಿಲ್ಲ. ಅವರ ವಿವಾಹ ಅಂತರ್ಜಾತೀಯ ವಿವಾಹಗಳೂ ಅಲ್ಲ. ಹಾಗಾಗಿ ಪರಸ್ಪರ ಸಾಂಸ್ಕೃತಿಕ ಅರಿವಿನ ಯಾವ

ತೊಡಕೂ ಇಲ್ಲ. ಅವರಲ್ಲಿ ವಯಸ್ಸಿನ ಅಂತರವಾಗಲೀ, ಅಂತಸ್ತಿನ ಅಂತರವಾಗಲೀ ತೀವ್ರವಾಗಿ ಇಲ್ಲ. ಎಲ್ಲರೂ ಆರೋಗ್ಯವಂತರೇ. ಹಾಗಾಗಿ ಲೈಂಗಿಕ (ದೈಹಿಕ) ದೌರ್ಬಲ್ಯವೂ ದಾಂಪತ್ಯದ ವೈಫಲ್ಯಕ್ಕೆ ಕಾರಣವಾಗಲಿಲ್ಲ. ಹಾಗಾದರೆ ಈ ದಾಂಪತ್ಯಗಳ ವೈಫಲ್ಯಕ್ಕೆ ಕಾರಣವೇನು? ವಾಸಂತಿ-ಸುಧಾಕರರ ವಿಷಯ ತೆಗೆದುಕೊಂಡರೆ ವಾಸಂತಿ ಅಪರಂಜಿಯಂಥ ಹೆಣ್ಣು. ಆದರೆ ಸುಧಾಕರ ಸ್ವಾರ್ಥಿ. ಅವನಿಗೆ ವಿವಾಹಕ್ಕಿಂತ ಅದು ಒಡ್ಡುವ ಆಮಿಷಗಳೇ ಮುಖ್ಯವಾಗುತ್ತವೆ. ವಿವಾಹ ಈ ಆಮಿಷಗಳನ್ನು ತಣಿಸಿಕೊಳ್ಳುವ ಕೇವಲ ವಾಹಕವಾಗುತ್ತದೆ. ಆದ್ದರಿಂದಲೇ ಎಮಿಲಿಯನ್ನು ಅವನು ಪಡೆಯಲು ಸಾಧ್ಯವಾಗದುದಕ್ಕೆ ನಮಗೇನೂ ನಿರಾಶೆಯಾಗುವುದಿಲ್ಲ. ಇವನನ್ನು ತಪ್ಪಾಗಿ ಅರ್ಥಮಾಡಿಕೊಂಡ ಎಮಿಲಿಯ ಬಗ್ಗೆ ಅನುಕಂಪ ಮೂಡುತ್ತದೆ ಅಷ್ಟೆ. ಸುಧಾಕರನ ಭ್ರಾಮಕ ಕನಸುಗಳು, ಅಪಕ್ವ ಮನಸ್ಸಿನ ಹುಸಿ ಭ್ರಮೆಗಳು ಅರ್ಥಪೂರ್ಣ ಗಂಡು ಹೆಣ್ಣಿನ ಸಂಬಂಧಕ್ಕೆ ಅವನಿನ್ನೂ ಪ್ರಬುದ್ಧನಾಗಿಲ್ಲ, ಸಜ್ಜಾಗಿಲ್ಲ ಎನಿಸುವಂತೆ ಮಾಡುತ್ತವೆ. ಆಕೆಗೂ ಸಹ ತನ್ನ ಮತ್ತು ವಾಸುದೇವರಾಯನ ಸಂಬಂಧದ ಸಾಫಲ್ಯಕ್ಕಿಂತ ವಿವಾಹ ತಂದುಕೊಡುವ ಇತರ ಸುಖ ಸೌಲಭ್ಯಗಳು, ಮೋಜುಗಳೇ ಮುಖ್ಯವಾಗುತ್ತವೆ. ದಾಂಪತ್ಯದ ಅಂತಃಸತ್ತ್ವ ಅವಳಿಗೆ ಹೊಳೆಯುವುದೇ ಇಲ್ಲ. ಆ ಚೌಕಟ್ಟು ಹೊಳೆಸುವ ಬಾಹ್ಯಾಡಂಬರಗಳೇ ಅವಳ ಮುಖ್ಯ ಆಕರ್ಷಣೆ. ಹೀಗಾಗಿ ಅವಳ ವ್ಯಕ್ತಿತ್ವವೂ ಅಪಕ್ವ; ಅಪ್ರಬುದ್ಧ. ಸೇವಂತಿ - ಸುಧಾಕರರಲ್ಲಿದ್ದ ಇತ್ಯಾತ್ಮಕ ಅಂಶಗಳು ವಾಸಂತಿ, ವಾಸುದೇವರಾಯರಲ್ಲಿದೆ. ಆದರೆ ಅವರು ಗಂಡ ಹೆಂಡಿರಲ್ಲ; ಭಾವ ನಾದಿನಿಯರು. ವಾಸಂತಿಯ ಗುಣವನ್ನು ಸೇವಂತಿಯೂ, ವಾಸುದೇವರಾಯನ ಗುಣವನ್ನು ಸುಧಾಕರನೂ ಮೈಗೂಡಿಸಿಕೊಂಡ ನಂತರವೇ ಎರಡೂ ದಾಂಪತ್ಯಗಳು ಮತ್ತೆ ಸುಖಮಯವಾಗುವುದು. ವಾಸುದೇವರಾಯನಲ್ಲಿ ಅಷ್ಟಾಗಿ ಕಾಣದ ರಾಯಭಾರತ್ವದ ಗುಣ ವಾಸಂತಿಯಲ್ಲಿ ಪ್ರಧಾನವಾಗಿರುವುದರಿಂದ ಅವಳ ಪಾತ್ರ ಹೆಚ್ಚಿನ ಘನತೆಯನ್ನು ರೂಢಿಸಿಕೊಳ್ಳುತ್ತದೆ. ದಾಂಪತ್ಯ ವಿಫಲವಾದಾಗ ವಾಸುದೇವರಾಯ ಸುಮ್ಮನೆ ಕೂಡುವಂತೆ, ಬೇರೊಂದು ಸಂಬಂಧದಲ್ಲಿ ಕ್ಷಣಿಕ ತೃಪ್ತಿಯನ್ನು ಕಂಡುಕೊಳ್ಳುವಂತೆ ವಾಸಂತಿ ಮಾಡದೆ ತನ್ನ ಮುರಿದ ದಾಂಪತ್ಯವನ್ನು ಸರಿಪಡಿಸಿಕೊಳ್ಳುವ ಧ್ಯೇಯದಲ್ಲಿ ಹೆಚ್ಚಿನ ನಿಷ್ಠೆ ತೋರುವುದರಿಂದ ಆಕೆಯ ಧೋರಣೆಗಳು ಸಾಮಾಜಿಕವಾಗಿ ಮಹತ್ತ್ವಪೂರ್ಣವಾಗುತ್ತದೆ. ವಾಸುದೇವರಾಯನಲ್ಲಿ ನಮಗೆ ಸಹಾನುಭೂತಿ ಮೂಡಿದರೆ ವಾಸಂತಿಯ ಬಗ್ಗೆ ಮೆಚ್ಚುಗೆ ಮೂಡುತ್ತದೆ. ಹಾಗೆಯೇ ವೇಶ್ಯೆಯರ ಬದುಕನ್ನು ಕಾರಂತರು ಸಂಪೂರ್ಣವಾಗಿ ತಿರಸ್ಕರಿಸದೆ ಸಹಾನುಭೂತಿಯಿಂದ ಅರ್ಥಮಾಡಿಕೊಳ್ಳುತ್ತಾರಾದರೂ "ಬತ್ತದ ತೊರೆ", "ಮೈಮನಗಳ ಸುಳಿಯಲ್ಲಿ" ಕಾದಂಬರಿಗಳಲ್ಲಿ ಆ ಕುಲದಲ್ಲಿ ಜನಿಸಿದ ವಿನತೆ, ಚಂದ್ರಿ ಆ ಜೀವನಕ್ರಮದಲ್ಲಿ ತಾವೂ ತೊಡಗಿಕೊಳ್ಳಲಿಚ್ಛಿಸದೆ ಮಾನವಂತರಾಗಿ ಬದುಕಬೇಕೆಂಬ ಇಚ್ಛೆಯಿಂದ

ಓಡಿಹೋಗುವ ನಿಶ್ಚಯವನ್ನು ಮೆಚ್ಚುಗೆಯಿಂದ ನೋಡುತ್ತಾರೆ. ಅದೇ ಕಾದಂಬರಿಯ ಮಂಜುಳೆಯ ಪ್ರೇಮವಿವಾಹದ ಕನಸುಗಳನ್ನು ಪ್ರೋತ್ಸಾಹಿಸುತ್ತಾರೆ. "ಮೊಗಪಡೆದ ಮನ" ಕಾದಂಬರಿಯಲ್ಲಿ ವ್ಯಾಸ-ವಿಮಲೆಯರು ಭಗ್ನ ಪ್ರೇಮಿಗಳು. ಕಾರಂತರ ಸಹಾನುಭೂತಿ ಭಗ್ನ ಪ್ರೇಮಿಗಳತ್ತಲೇ. "ಜಾರುವ ದಾರಿಯಲ್ಲಿ" ಮತ್ತು "ಸಮೀಕ್ಷೆ" ಗಳಲ್ಲಿ ಇಂದುಮತಿ ಮತ್ತು ಶಾರದೆ ತಮ್ಮ ಗಂಡಂದಿರ ಆದರ್ಶಗಳನ್ನು ಕ್ರಮೇಣ ತಾವೂ ರೂಢಿಸಿಕೊಂಡು ಬೆಳೆಯುವುದು ಕಾರಂತರ ಮೆಚ್ಚುಗೆಗೆ ಪಾತ್ರವಾಗುತ್ತವೆ. "ಬೆಟ್ಟದ ಜೀವ" ಮತ್ತು "ಕನ್ನಡಿಯಲ್ಲಿ ಕಂಡಾತ" ಕಾದಂಬರಿಗಳಲ್ಲಿ ಗೋಪಾಲಯ್ಯ, ಕಾಟುಮೂಲೆ ನಾರಾಯಣ ಮತ್ತು ಮಂಜಪ್ಪನವರ ದಾಂಪತ್ಯಗಳು ಸಾಂಪ್ರದಾಯಿಕ ಚೌಕಟ್ಟಿನೊಳಗೇ ಫಲಿಸುವ ಸಫಲ ದಾಂಪತ್ಯಕ್ಕೆ ಜೀವಂತ ಸಾಕ್ಷಿಗಳಾಗುತ್ತವೆ. ಹಾಗೆಯೇ "ಮೈಮನಗಳ ಸುಳಿಯಲ್ಲಿ" ಕಾದಂಬರಿಯ ಪಮ್ಮಿದುಗ್ಗಿ, "ಸಮೀಕ್ಷೆ"ಯ ಸೂರ-ಕಾಳಿಯರ ದಾಂಪತ್ಯ ಆದರ್ಶ ದಾಂಪತ್ಯಕ್ಕೆ ಅತ್ಯುತ್ತಮ ಉದಾಹರಣೆ ಗಳಾಗುತ್ತವೆ. "ಚೋಮನದುಡಿ" ಕಾದಂಬರಿಯಲ್ಲೂ ಒಳ್ಳೆಯ ದಾಂಪತ್ಯದ ಕಲ್ಪನೆಗಳಿವೆ. "ಕುಡಿಯರ ಕೂಸು", ಚೋಮನ ದುಡಿ" ಕಾದಂಬರಿಗಳಲ್ಲಿ ಲೈಂಗಿಕ ಶೋಷಣೆಯನ್ನು ವರ್ಗಸಂಬಂಧ, ವರ್ಣಸಂಬಂಧಗಳ ಹಿನ್ನೆಲೆಯಲ್ಲಿಗುರುತಿಸಿರುವಂತೆ ಒಂದೇ ಜಾತಿ ವ್ಯವಸ್ಥೆಯೊಳಗೆ, ಆದರೆ ಪುರುಷ ಪ್ರಧಾನ ವ್ಯವಸ್ಥೆಯ ಹಿನ್ನೆಲೆಯಲ್ಲಿ ಲೈಂಗಿಕ ಶೋಷಣೆಯನ್ನು "ಧರ್ಮರಾಯನ ಸಂಸಾರ"ದಲ್ಲಿ ಗುರುತಿಸಿದ್ದಾರೆ.

ದಾಂಪತ್ಯದ ಸಮಸ್ಯೆಗಳನ್ನು ಚರ್ಚಿಸುವಾಗ ಕಾರಂತರು ಎಂಥ ಕಟುವಾದ ನಿಲುವುಗಳನ್ನು ತೆಗೆದುಕೊಂಡರೂ, ಸಂಪ್ರದಾಯವನ್ನು ವಿರೋಧಿಸಿದರೂ ಸ್ವಚ್ಛಂದ ಕಾಮಕ್ಕಿಂತ ಅವರ ಒಲವು ಕುಟುಂಬವೆಂಬ ಸಾಮಾಜಿಕ ವ್ಯವಸ್ಥೆಯಲ್ಲಿ ಅರಳುವ ದಾಂಪತ್ಯದ ಬಗ್ಗೆಯೇ ಹೆಚ್ಚಾಗಿದೆ ಎನಿಸುತ್ತದೆ. ಇದಕ್ಕೆ ಕಾರಣ ವ್ಯಕ್ತಿ-ವ್ಯಕ್ತಿಗಳ ನಡುವಣ ಸಂಬಂಧವು ಒಂದು ಸಾಮಾಜಿಕ ಆವರಣದಲ್ಲೇ ನಿಜವಾದರೆ ಅದಕ್ಕೆ ಹೆಚ್ಚಿನ ಅರ್ಥವಂತಿಕೆ ಬಂದೀತು ಎಂಬುದು ಅವರ ಒಟ್ಟು ನಿಲುವು. ವೈಯಕ್ತಿಕವಾಗಿ ಫಲಿಸುವುದು ಸಾಮಾಜಿಕವಾಗಿ ವಿಸ್ತೃತಗೊಂಡಾಗ ಅದಕ್ಕೆ ಹೆಚ್ಚಿನ ಮಹತ್ವ ಬರುತ್ತದೆ. ಇಂಥ ಸಾಮಾಜಿಕ ಆವರಣಗಳು ಸಂಪ್ರದಾಯದತ್ತವಾಗಿಯೇ ಬಂದಿರಬೇಕು, ಪರಂಪರಾಗತವಾದ ಮೌಲ್ಯಗಳನ್ನೇ ಪೋಷಿಸುವಂತಿರಬೇಕು ಎಂದೇನೂ ಅಲ್ಲ. ಮನುಷ್ಯ ಸಮಾಜದ ಅನಿವಾರ್ಯತೆಯನ್ನು ಒಪ್ಪಿಕೊಂಡ ಮೇಲಂತೂ ವ್ಯಕ್ತಿ-ವ್ಯಕ್ತಿಗಳ ನಡುವೆ ಪರಸ್ಪರ ಅರಿವು, ಸಹನೆ, ಸಹಕಾರಗಳು ಕನಿಷ್ಠ ಅವಶ್ಯಕತೆಗಳಾಗುತ್ತವೆ. ಗಂಡು ಹೆಣ್ಣಿನ ಸಂಬಂಧಗಳ ಮಟ್ಟಿಗಂತೂ ಇದು ಅನಿವಾರ್ಯ. ಪರಸ್ಪರರ ಮೈಯಷ್ಟೇ ಅಲ್ಲ ಮನಸ್ಸುಗಳೂ ಕೂಡದ ಸಂಬಂಧಗಳು ಅಪೂರ್ಣವಾಗುತ್ತವೆ; ಅನಾರೋಗ್ಯಕರ ವಾಗುತ್ತವೆ. ಈ ದೃಷ್ಟಿಯಿಂದ "ಮೈಮನಗಳ ಸುಳಿಯಲ್ಲಿ" ಈ ವಸ್ತುವನ್ನು ಕುರಿತ

ಕಾರಂತರ ಅತ್ಯುತ್ತಮ ಕಾದಂಬರಿ. ಹಾಗಾಗಿ ಮೈ-ಮನಸ್ಸುಗಳನ್ನು ಹೀಗೆ ಅರ್ಥ ಪೂರ್ಣವಾಗಿ ಕೂಡಿಸುವ ಎಲ್ಲ ಪ್ರಯತ್ನಗಳನ್ನೂ ನಾವು ಗೌರವಿಸಬೇಕಾಗುತ್ತದೆ; ಎತ್ತಿ ಹಿಡಿಯಬೇಕಾಗುತ್ತದೆ: ಪ್ರೋತ್ಸಾಹಿಸಬೇಕಾಗುತ್ತದೆ. ಅಂದರೆ ತಿಳಿದೋ ತಿಳಿಯದೆಯೋ ಒಂದು ನೀತಿ ಅಥವಾ ಆದರ್ಶವನ್ನು ನಾವು ರೂಪಿಸಿಕೊಳ್ಳಬೇಕಾಗುತ್ತದೆ. ಇದನ್ನು ಇಡೀ ಸಮಾಜದ ಮೇಲೆ ಹೇರಬೇಕೆಂದೇನೂ ಇಲ್ಲ. ಕೊನೆಯ ಪಕ್ಷ ಪ್ರತಿಯೊಂದು ವೈಯಕ್ತಿಕ ಗಂಡು-ಹೆಣ್ಣಿನ ಸಂಬಂಧದ ಮಟ್ಟಿಗಾದರೂ ಇದು ಅನಿವಾರ್ಯವಾಗುತ್ತದೆ. ಮತ್ತು ಪ್ರತಿಯೊಂದು ಜೋಡಿಯೂ ತನ್ನದೇ ಆದ ನೀತಿ ಸಂಹಿತೆಯೊಂದನ್ನು ರೂಪಿಸಿಕೊಳ್ಳುವ ಅವಕಾಶವನ್ನು ನಾವು ನೀಡಲೇಬೇಕಾಗುತ್ತದೆ. ಆದ್ದರಿಂದಲೇ "ಧರ್ಮರಾಯನ ಸಂಸಾರ"ದ ಸರಸ್ವತಿ ಮತ್ತು "ನಂಬಿದವರ ನಾಕ ನರಕ"ದ ಸತ್ಯಭಾಮೆಯರ ವರ್ತನೆಗಳು ನಮ್ಮ ಸಂಸ್ಕೃತಿಯ ಹಿನ್ನೆಲೆಯಲ್ಲಿ ತುಂಬ ತೀವ್ರವಾದ ಬಂಡಾಯದ ಸೂಚನೆಗಳನ್ನು ನೀಡಿದರೂ ಆ ಬಂಡಾಯದ ಫಲವಾಗಿಯೇ ಹೊಸ ಸಫಲ ದಾಂಪತ್ಯವನ್ನು ರೂಪಿಸಿಕೊಳ್ಳುವ, ತಮ್ಮ ಬದುಕನ್ನು ಆ ಹೊಸ ದಾಂಪತ್ಯದಲ್ಲಿಯೇ ಅರ್ಥಪೂರ್ಣಗೊಳಿಸಿಕೊಳ್ಳುವ ಕಾರಣಗಳಿಗಾಗಿ ಸಾಮಾಜಿಕವಾಗಿ ತುಂಬ ಮಹತ್ತ್ವದ್ದಾಗುತ್ತವೆ. ಹಳೆಯ, ಕ್ರೂರ ವ್ಯವಸ್ಥೆಯನ್ನು ಮೆಟ್ಟಿನಿಂತು ಆರೋಗ್ಯಕರ ಮೌಲ್ಯಗಳ ಆಧಾರದ ಮೇಲೆ ಹೊಸ ಬದುಕೊಂದನ್ನು ಕಟ್ಟಿಕೊಳ್ಳುವ ಇತ್ಯಾತ್ಮಕ ಭರವಸೆಯ ಸೂಚನೆಗಳಾಗುತ್ತವೆ. "ಕನ್ಯಾಬಲಿ"ಯ ಮಾಲತಿಯ ವರ್ತನೆಗಳೂ ಒಂದು ಅರ್ಥದಲ್ಲಿ ಇಂಥದೇ ಆಘಾತಗಳನ್ನು ಉಂಟು ಮಾಡುವುದಾದರೂ ವೈಯಕ್ತಿಕ ಬಂಡಾಯಕ್ಕೇ ಅವು ಸಂಕುಚಿತಗೊಳ್ಳುತ್ತವೆ. "ಕೇವಲ ಮನುಷ್ಯರು" ಕಾದಂಬರಿಯಲ್ಲಿ ಹಯವದನರಾಯರು ತಮ್ಮ "ಸಂಸಾರವಲ್ಲದ ಸಂಸಾರ"ದಿಂದ "ಸಂಸಾರ ಸುಖವೆಂದರೆ ಹೇಗಿದ್ದೀತು" ಎಂಬ ಅರಿವನ್ನು ಪಡೆಯುವುದು ಆ ಕಾದಂಬರಿಯ ಇತ್ಯಾತ್ಮಕ ಅಂಶವಾಗಿದೆ. ಏಕೆಂದರೆ ಯಾವುದೇ ಬಗೆಯ ವಿಚ್ಛೇದನಕ್ಕಿಂತ ಹೊಸ ನಂಬಿಕೆಗಳ ಆಧಾರದ ಮೇಲೆ ಹೊಸ ಬದುಕನ್ನು ಕಟ್ಟಿಕೊಳ್ಳುವ ಧೋರಣೆ ಹೆಚ್ಚು ಪ್ರಗತಿಗಾಮಿಯಾದದ್ದು. ವ್ಯವಸ್ಥೆ ಕುಸಿದ ನಂತರವೂ ಹೊಸವ್ಯವಸ್ಥೆ ಕುಡಿಯೊಡೆಯುವ ಹಾಗೆ. ಹೊಸವ್ಯವಸ್ಥೆಯ ಸೃಷ್ಟಿಗಾಗಿಯೇ ಹಳೆಯ ವ್ಯವಸ್ಥೆ ಧ್ವಂಸಗೊಳ್ಳುವಂತೆ. ವಿಚ್ಛೇದನವು ವಿಚ್ಛೇದನವನ್ನು ವಿಧಿಬದ್ಧವಾಗಿ ತಡೆಯುವ ವ್ಯವಸ್ಥೆಗಿಂತ ಮೇಲು. ಏಕೆಂದರೆ ಅದು ಕೊನೆಯ ಪಕ್ಷ ವಿರಸ ಸಂಬಂಧಗಳಿಂದ ಮುಕ್ತಿಯನ್ನು ಪಡೆಯುವ ಸ್ವಾತಂತ್ರ್ಯವನ್ನಾದರೂ ದಯಪಾಲಿಸುತ್ತದೆ. ಆದರೆ ವಿರಸ ಸಂಬಂಧಗಳನ್ನು ಸರಸ ಸಂಬಂಧಗಳನ್ನಾಗಿ ಮಾಡುವ ಸಾಧ್ಯತೆಗಳ ಬಗ್ಗೆ ಮಾಡುವ ಯೋಚನೆಗಳು ಸಾಮಾಜಿಕವಾಗಿ ಹೆಚ್ಚು ಉಪಯುಕ್ತ ; ಅರ್ಥಪೂರ್ಣ. ಏಕೆಂದರೆ ಗಂಡು-ಹೆಣ್ಣಿನ ಸಂಬಂಧವೆನ್ನುವುದು ದೈಹಿಕ-ಕಾಮನೆಗಳು ತಣಿದ ಮೇಲೂ, ಉದ್ವೇಗ ಕಳೆದ ಮೇಲೂ, ಬಿಸಿ ಆರಿದ ಮೇಲೂ ಮುಂದುವರಿಯಬೇಕಾದ ಪೂರ್ಣಜೀವನ. ಈ ನಿಟ್ಟಿನಲ್ಲಿ ಕಾರಂತರ ಯೋಚನೆಗಳು ಸುಧಾರಣಾ

ವಾದದಿಂದ ಕ್ರಾಂತಿಕಾರಕತೆಯವರೆಗೂ ಹಬ್ಬಿ ಬೆಳೆದಿವೆ. ಎಲ್ಲಿ ವಿಚ್ಛೇದನ ಅನಿವಾರ್ಯವೋ ಅಲ್ಲಿ ಅದನ್ನು ಎತ್ತಿ ಹಿಡಿದಿದ್ದಾರೆ; ಎಲ್ಲಿ ವಿಕ್ಷಿಪ್ತತೆ ಮರಳಿ ಆರೋಗ್ಯ ಪಡೆಯುವ ಸೂಚನೆ ಕೊಡುತ್ತದೋ ಅಲ್ಲಿ ಅದನ್ನು ಪ್ರೋತ್ಸಾಹಿಸಿದ್ದಾರೆ; ಪರಂಪರಾಗತ ವ್ಯವಸ್ಥೆಯಲ್ಲೂ ಎಲ್ಲೆಲ್ಲಿ ದಾಂಪತ್ಯದ ಅತ್ಯುತ್ತಮ ಉದಾಹರಣೆಗಳು ಸಿಗುತ್ತವೋ ಅಲ್ಲೆಲ್ಲ ಅವುಗಳನ್ನು ಗುರುತಿಸಿದ್ದಾರೆ; ಎಲ್ಲಿ ಹಳೆಯ ವ್ಯವಸ್ಥೆಯನ್ನು ಕಿತ್ತೊಗೆದು ಹೊಸ ಬದುಕಿನ ಕುಡಿ ಏಳುವ ಸೂಚನೆ ಕಾಣುತ್ತದೋ ಅಲ್ಲಿ ಅದನ್ನು ಎತ್ತಿ ಹಿಡಿದಿದ್ದಾರೆ. ವಿರಸ ದಾಂಪತ್ಯಗಳನ್ನು ಗುರುತಿಸಿರುವಂತೆ ಸರಸ ದಾಂಪತ್ಯಗಳನ್ನು ಗುರುತಿಸಿದ್ದಾರೆ. "ಕನ್ಯಾಬಲಿ", "ಸರಸಮ್ಮನ ಸಮಾಧಿ", "ಅಳಿದ ಮೇಲೆ", "ಬೆಟ್ಟದ ಜೀವ", "ಮರಳಿ ಮಣ್ಣಿಗೆ", "ಬತ್ತದ ತೊರೆ", "ಒಡಹುಟ್ಟಿದವರು", "ಕೇವಲ ಮನುಷ್ಯರು", "ನಂಬಿದವರ ನಾಕ ನರಕ", "ಧರ್ಮರಾಯನ ಸಂಸಾರ", "ಮೈಮನಗಳ ಸುಳಿಯಲ್ಲಿ" "ಜೋಮನ ದುಡಿ", "ಸಮೀಕ್ಷೆ", "ಕನ್ನಡಿಯಲ್ಲಿ ಕಂಡಾತ", "ಮೂಕಜ್ಜಿಯ ಕನಸುಗಳು" ಮೊದಲಾದ ಕಾದಂಬರಿಗಳಲ್ಲಿ ಇತರ ವಿಷಯಗಳು ಎಷ್ಟು ಮುಖ್ಯವಾಗುತ್ತವೋ ಗಂಡು-ಹೆಣ್ಣಿನ ಸಂಬಂಧಗಳ ನಿರ್ವಹಣೆಯೂ ಅಷ್ಟೇ ಮುಖ್ಯವಾಗುತ್ತದೆ; ಮಹತ್ತ್ವದ್ದಾಗುತ್ತದೆ. ಒಳಿತು-ಕೆಡುಕು, ಪರ-ವಿರೋಧ, ಸಹ್ಯ-ಅಸಹ್ಯ, ಆರೋಗ್ಯ ಅನಾರೋಗ್ಯ, ಸಭ್ಯ-ಅಸಭ್ಯಗಳ ಡಯಲೆಕ್ಟಿಕ್‌ನಲ್ಲೇ ಪಾತ್ರಗಳನ್ನೂ, ಸಂದರ್ಭಗಳನ್ನೂ ಸಂಯೋಜಿಸಿ ತಮ್ಮ ಧೋರಣೆಗಳನ್ನು ಖಚಿತವಾಗಿ, ಸ್ಪಷ್ಟವಾಗಿ, ನಿರ್ದುಷ್ಟವಾಗಿ ಬಹಿರಂಗಪಡಿಸಿಕೊಂಡಿದ್ದಾರೆ; ನಮ್ಮ ಅರಿವನ್ನು ಹಿಗ್ಗಿಸಿದ್ದಾರೆ.

# ಮನೋವಿಜ್ಞಾನದ ನೆಲೆಯಲ್ಲಿ ಕಾರಂತರ ಕಾದಂಬರಿಗಳು

ಎ. ಎಸ್. ಧರಣೇಂದ್ರಯ್ಯ

In the psychological laboratory, Experimental Esthetics means a study of response to the beautiful, the sublime and the tragic, the comic and the pathetic......The beautiful must be pleasing, the sublime uplifting, the tragic stirring, the comic amusing, the pathetic moving. Man is the measure of all things esthetic and the measure depends upon his feelings rather than purely upon his intellectual perceptions.[1]

ಪೀಠಿಕೆ :

ಸೌಂದರ್ಯದ ಸೃಷ್ಟಿಕರ್ತ ಹಾಗೂ ಮೀಮಾಂಸಕ ಇವರಿಬ್ಬರಿಗೂ ಬುದ್ಧಿಯ ಜೊತೆಗೆ ಹೃದಯವಂತಿಕೆ ಸಮೃದ್ಧವಾಗಿರಬೇಕಾಗುತ್ತದೆ. ತಮ್ಮ ಬುದ್ಧಿಭಾವಗಳ ಅನ್ಯೋನ್ಯ ಸಾಹಚರ್ಯ ಮತ್ತು ಅರ್ಥಪೂರ್ಣ ಅನುಭವಗಳ ನೆರವಿನಿಂದ ಅವರು ಸೃಷ್ಟಿ ಮತ್ತು ಪುನರ್‌ಸೃಷ್ಟಿ ಕಾರ್ಯಗಳಲ್ಲಿ ತೊಡಗಬೇಕಾಗುತ್ತದೆ. ಹಾಗಾದಾಗ ಕೃತಿಯ ಆಂತರ್ಯದ ಸೊಬಗು ಸಂಬಂಧಪಟ್ಟ ಸಹೃದಯರೆಲ್ಲರಿಗೂ ಮುಟ್ಟು ವಂತಾಗಿ ಕೃತಿ ಸಾರ್ಥಕವೆನಿಸುತ್ತದೆ. ಅಂದಮೇಲೆ, ಯಾವುದೇ ಸಾಹಿತ್ಯಕೃತಿ ಅಥವಾ ಕೃತಿಗಳ ಮೌಲ್ಯಮಾಪನದ ಪ್ರಶ್ನೆ ಬಂದಾಗ ಮಾನವನೇ ಮಾನದಂಡವೆಂಬ ಮಾತನ್ನು ಬಹುಶಃ ಒಪ್ಪಬೇಕಾಗುತ್ತದೆ. ಅಂತಹ ಮಾನದಂಡದಲ್ಲಿ ಕ್ರಿಯಾಶೀಲವಾಗಿರುವ ವಿವೇಚನೆಯ ಜೊತೆಜೊತೆಗೇ ನಮ್ಮ ಭಾವನೆಯೂ ಜಾಗೃತವಾಗಿರಬೇಕೆಂಬುದನ್ನು ನಾವು ಮರೆಯಲಾಗದು. ಆದರೆ ವಿಪರೀತ ಭಾವುಕತೆ ನಮ್ಮನ್ನು ದಾರಿತಪ್ಪಿಸುವ ಸಾಧ್ಯತೆಯೇ ಹೆಚ್ಚು ಎಂಬ ಅರಿವೂ ಅತ್ಯಗತ್ಯ. ನಮ್ಮ ಭಾವಾತಿರೇಕಗಳು ನಮ್ಮನ್ನು ವಂಚಿಸುವಂತೆಯೇ, ನಮ್ಮ ಬೌದ್ಧಿಕ ನೋಟಗಳೂ ನಮ್ಮನ್ನು ವಂಚಿಸಬಹುದು. ವಸ್ತು, ವಿಷಯ, ವ್ಯಕ್ತಿ ಮತ್ತು ಘಟನೆಗಳ ಬಗ್ಗೆ ನಾವು ಕಂಡದ್ದೇ ಸತ್ಯವೆಂಬ ಭ್ರಮೆ ನಮ್ಮನ್ನು ಕಾಡಬಹುದು. ನಾವು ಕಾಣುವ ಅನೇಕ ನೋಟಗಳು ದೋಷಪೂರ್ಣ

---

1. R. S. Woodworth, Experimental Psychology.

ವಾಗಿರುತ್ತವೆಂಬುದು ಪ್ರಾಯೋಗಿಕ ಸತ್ಯ[2]. ನಮ್ಮ ಮನೋಭಾವ, ಪೂರ್ವಗ್ರಹ, ವೈಯಕ್ತಿಕ ಮೌಲ್ಯ ಮತ್ತು ವ್ಯಕ್ತಿ ಹಾಗೂ ಜೀವನಗಳ ಬಗ್ಗೆ ನಮಗಿರುವ ಒಲವು-ನಿಲವುಗಳು ನಮ್ಮ ನೋಟಗಳನ್ನು ಕಲುಷಿತಗೊಳಿಸಬಲ್ಲವು. ಆದ್ದರಿಂದ ಯಾವುದೇ ಕೃತಿ ಅಥವಾ ಕೃತಿಕಾರನ ಮೌಲ್ಯಮಾಪನ ಮಾಡುವಾಗ ನಮ್ಮಿಂದಲೇ ನಾವು ರಕ್ಷಣೆ ಪಡೆಯಬೇಕಾದ ಅಗತ್ಯವಿದೆ.

ಕನ್ನಡ ಸಾಹಿತ್ಯಪ್ರಪಂಚಕ್ಕೆ ಕಾರಂತರು ಸಲ್ಲಿಸಿರುವ ಸೇವೆಯ ಪರಿಮಾಣ ವೆಷ್ಟು, ಗುಣವೆಷ್ಟು ಎಂಬುದರ ಬಗ್ಗೆ ಈಗಾಗಲೇ ಮೌಲ್ಯಮಾಪನ ಕಾರ್ಯ ಸಾಕಷ್ಟು ಆಗಿದೆ, ಇನ್ನೂ ಆಗಬೇಕಾಗಿದೆ. ವೈಜ್ಞಾನಿಕ ನೆಲೆಯಿಂದ ಕಾರಂತರ ಕೃತಿಗಳ ಸಮೀಕ್ಷೆ ಆಗಬೇಕಾದ ಅಗತ್ಯವಿದೆ. ಯಾಕೆಂದರೆ ಕಾರಂತರ ಕೃತಿಗಳಲ್ಲಿ ವೈಜ್ಞಾನಿಕ ಮನೋಭಾವ ಕಂಡುಬರುತ್ತದೆ ಎಂಬ ಅಭಿಪ್ರಾಯದ ಸತ್ಯಾಸತ್ಯತೆಗಳನ್ನು ಪರಿಶೀಲಿಸಲು ಅಂತಹ ಸಮೀಕ್ಷೆಯು ಬಹುಶಃ ಅನಿವಾರ್ಯವೆನಿಸುತ್ತದೆ.

ಶಿವರಾಮ ಕಾರಂತರು ನಮ್ಮೆಲ್ಲರ ಅಭಿಮಾನದ ವ್ಯಕ್ತಿ. ಅವರ ಸಾಧನೆಯ ಗಾತ್ರ, ಯಾವ ಮಾನದಂಡದಿಂದಲಾದರೂ ಬಹು ದೊಡ್ಡದು. ತಮ್ಮ ಜೀವಿತ ಕಾಲ ದಲ್ಲಿಯೇ ವಿಶೇಷ ಗೌರವಾದರಗಳಿಗೆ ಪಾತ್ರರಾದವರು, ಗಣನೀಯ ಕೀರ್ತಿ ಗಳಿಸಿದವರು, ಅವರು. 'ಕಾರಂತ ಪ್ರಪಂಚ'ದಲ್ಲಿ ಅವರ ಬಂಧು ಮಿತ್ರರು, ಅಭಿಮಾನಿಗಳು, ಪರಿಚಿತರು, ಅಪರಿಚಿತರು, ಅವರಿಗೆ ತಮ್ಮ ನುಡಿ ನಮನವನ್ನು ಸಲ್ಲಿಸಿದ್ದರೆ ಎಲ್ಲದಕ್ಕಿಂತಲೂ ಹೆಚ್ಚಾಗಿ ಇಡೀ ಕನ್ನಡ ಕುಲಮಾತ್ರವಲ್ಲದೆ, ಲಲಿತಕಲಾ ಪ್ರಪಂಚದ ಹಲವರು, 'ಕಾರಂತರು ನಮ್ಮವರು' ಎಂದಿರುವುದು ಮಹತ್ವಪೂರ್ಣ ಅಂಶ. ಇಷ್ಟು ದೊಡ್ಡ ವ್ಯಕ್ತಿಯನ್ನು, ಆತನ ಕೃತಿಗಳನ್ನು ಅಳೆಯಲು ಹೊರಟ ವ್ಯಕ್ತಿಗೆ 'ಗಾತ್ರ ತೂಕ ಭ್ರಮೆ' ಬಾಧಿಸುವ ಸಾಧ್ಯತೆಯೇ ಹೆಚ್ಚು. ಹಾಗಾದಲ್ಲಿ, ಕಾರಂತರು ಮುಟ್ಟಿದ್ದೆಲ್ಲಾ ಚಿನ್ನ, ನಡದದ್ದೇ ದಾರಿ, ಪಡೆದದ್ದೇ ಸಿದ್ಧಿ' ಎಂಬ ಅಭಿಪ್ರಾಯ ತಾಳಬಹುದು. ತದ್ವಿರುದ್ಧವಾದ ಅಭಿಪ್ರಾಯ ತಾಳುವ ಸಾಧ್ಯತೆಯೂ ಇಲ್ಲದಿಲ್ಲ. ಅಂತಹ ವಿಪರೀತತೆಯಿಂದ ಪಾರಾಗಲು ಸ್ವಲ್ಪ ಹೆಚ್ಚು ವಸ್ತುನಿಷ್ಠ ಪರಿಶೀಲನೆ ಅಗತ್ಯವೆನಿಸುತ್ತದೆ.

---

2. ಭ್ರಮಾನುಭವಗಳಿಗೆ ಸಂಬಂಧಿಸಿದಂತೆ, ಮನೋವಿಜ್ಞಾನ ಪ್ರಯೋಗಶಾಲೆಗಳಲ್ಲಿ ನಡೆಸಲಾಗುವ ಹಲವು ಪ್ರಯೋಗಗಳಿಂದ ಈ ಅಂಶ ಸ್ಪಷ್ಟವಾಗುತ್ತದೆ. ಉದಾಹರಣೆಗೆ : 'ಗಾತ್ರ-ತೂಕ ಭ್ರಮೆ' (Size-Weight illusion) ಗಾತ್ರದಲ್ಲಿ ದೊಡ್ಡದಾದ ವಸ್ತುವನ್ನು ನೋಡಿದಾಗ ಅದರ ತೂಕವೂ ಹೆಚ್ಚಿರಬಹುದೆಂಬ ಭಾವನೆ ನಮ್ಮಲ್ಲಿ ಮೂಡುತ್ತದೆ. ಈ ಭಾವನೆಯಿಂದ ಆ ವಸ್ತುವನ್ನು ಮೇಲೆತ್ತಿದಾಗ, ಅದು ಬಹು ಹಗುರವಾಗಿರುವ ಅನುಭವ ನಮಗಾಗುತ್ತದೆ. ತದ್ವಿರುದ್ಧವಾಗಿ, ಗಾತ್ರದಲ್ಲಿ ಚಿಕ್ಕದಾದ ವಸ್ತುವು ಹೆಚ್ಚು ಭಾರವಿದ್ದಂತೆ ಭಾಸವಾಗುತ್ತದೆ. ಇದು ಸಾಮಾನ್ಯವಾಗಿ ಎಲ್ಲರಿಗೂ ಉಂಟಾಗುವ ಭ್ರಮೆ.

## ಮನೋವಿಜ್ಞಾನದ ನೆಲೆ

ಮನೋವಿಜ್ಞಾನದ ನೆಲೆಯಲ್ಲಿ ಕಾರಂತರ ಕಾದಂಬರಿಗಳನ್ನು ವಿಮರ್ಶಿಸಲು ತೊಡಗಿದ ನನಗೆ, ಮನೋವಿಜ್ಞಾನದ ಯಾವ ನೆಲೆಯಿಂದ ನೋಡಬೇಕೆಂಬ ಪ್ರಶ್ನೆ ಸಹಜವಾಗಿ ಎದ್ದಿತು. ಆಧುನಿಕ ಮನೋವಿಜ್ಞಾನದಲ್ಲಿ ಪ್ರತಿಪಾದಿತವಾಗಿರುವ ತತ್ತ್ವಗಳು ಹಾಗೂ ಸಿದ್ಧಾಂತಗಳು ಹಲವು ಪ್ರಕಾರವಾಗಿದ್ದು, ಹಲವು ನೆಲೆಗಳ ನೋಟಗಳಿಂದ ರೂಪಗೊಂಡಿವೆ. ಅಂತಹ ನೆಲೆಗಳು–ಉದಾಹರಣೆಗೆ, ಒಂದು ದೃಷ್ಟಿಯಿಂದ ಜ್ಞಾನಾತ್ಮಕ (cognitive), ಕ್ರಿಯಾತ್ಮಕ, (conative) ಮತ್ತು ಭಾವಾತ್ಮಕ (affective) ಎನಿಸಬಹುದು ; ಮತ್ತೊಂದು ದೃಷ್ಟಿಯಿಂದ ಪ್ರಜ್ಞಾತ್ಮಕ ಅಥವಾ ಚೇತನಾತ್ಮಕ (conscious) ಮತ್ತು ಸುಪ್ತ ಚೇತನಾತ್ಮಕ (subconscious) ಎನಿಸಬಹುದು. ಇಂತಹ ಹಲವು ನೆಲೆಗಳಿಂದ ಕಾರಂತರ ಕಾದಂಬರಿಗಳನ್ನು ಪರಿಶೀಲಿಸುವ ಸಾಧ್ಯತೆಯಿದ್ದರೂ, ಪ್ರಮುಖವಾಗಿ ಕ್ರಿಯಾತ್ಮಕ ನೆಲೆಯಿಂದ ನೋಡಲು ನಾನು ಪ್ರಯತ್ನಿಸಿದ್ದೇನೆ. ಅದಕ್ಕೆ ಕಾರಣವೆಂದರೆ ಕಾರಂತರ ಸಾಮಾಜಿಕ ಕಾದಂಬರಿಗಳಲ್ಲಿ ಅಭಿಪ್ರೇರಣೆಗಳಿಗೆ ಅದರಲ್ಲಿಯೂ ಜೈವಿಕ ಅಭಿಪ್ರೇರಣೆಗಳಿಗೆ ಪ್ರಾಧಾನ್ಯತೆ ಇರುವುದು ; ಹೆಣ್ಣು, ಹೊನ್ನು, ಮಣ್ಣುಗಳ ಪ್ರಭಾವ ವ್ಯಕ್ತಿ-ಸಮೂಹ ವ್ಯವಹಾರಗಳನ್ನು ಆವರಿಸಿರುವುದು.

## ವರ್ತನಾ ಪ್ರಪಂಚ (Behavioural world)

ಕಾರಂತರ ಕಾದಂಬರಿಗಳಲ್ಲಿ ಚಿತ್ರಿತವಾಗಿರುವ ವ್ಯಕ್ತಿ-ಸಮೂಹ ವ್ಯವಹಾರಗಳು ಹಾಗೂ ಘಟನೆಗಳನ್ನು ಅರ್ಥೈಸಲು, ಆ ವ್ಯವಹಾರಗಳು ಮತ್ತು ಘಟನೆಗಳು ಎಂತಹ ಪ್ರಾಪಂಚಿಕ ಚೌಕಟ್ಟಿನಲ್ಲಿ ನಡೆಯುತ್ತವೆ ಎಂಬುದನ್ನು ತಿಳಿಯುವುದು ಅತ್ಯಗತ್ಯ ಯಾಕೆಂದರೆ ವ್ಯವಹಾರಗಳು ಮತ್ತು ಘಟನೆಗಳು ಶೂನ್ಯದಲ್ಲಿ ನಡೆಯದೆ, ಯಾವುದಾದರೂ ಪ್ರಾಪಂಚಿಕ ಚೌಕಟ್ಟಿನಲ್ಲಿ ನಡೆಯುವುದು ಅನಿವಾರ್ಯ. ಮನೋವೈಜ್ಞಾನಿಕವಾಗಿ ಹೇಳುವುದಾದರೆ, ಯಾವ ವ್ಯಕ್ತಿಯೇ ಆಗಲಿ, ಸಮೂಹವೇ ಆಗಲಿ, 'ತನ್ನ ಪ್ರಪಂಚ'ದಲ್ಲಿ ವ್ಯವಹರಿಸುತ್ತಾನೆ/ವ್ಯವಹರಿಸುತ್ತದೆ. ಈ 'ತನ್ನ ಪ್ರಪಂಚ'ವೆಂಬುದೇ 'ವರ್ತನಾ ಪ್ರಪಂಚ'. ಈ ಪ್ರಪಂಚದಲ್ಲಿ, ವ್ಯಕ್ತಿಯ ನಾನಾ ರೀತಿಯ ಭೌತಿಕ, ಸಾಮಾಜಿಕ ಹಾಗೂ ಮಾನಸಿಕ ಕ್ರಿಯೆಗಳ–ಪ್ರಕ್ರಿಯೆಗಳ ಕ್ರಿಯಾತ್ಮಕ ಸಾಹಚರ್ಯವಿರುತ್ತದೆ. ಆತನ ನೈಸರ್ಗಿಕ ಮತ್ತು ಸಾಮಾಜಿಕ ಸ್ಪಂದನ ಹಾಗೂ ಪ್ರಜ್ಞೆಗಳು ಹಿಗ್ಗಿದಂತೆಲ್ಲಾ ಆ ಪ್ರಪಂಚ ಹಿಗ್ಗುತ್ತಾ ಹೋಗುತ್ತದೆ, 'ಇತರರ ಪ್ರಪಂಚ'ಗಳನ್ನು ವ್ಯಾಪಿಸುತ್ತದೆ. ಈ ಪ್ರಕ್ರಿಯೆ ಮತ್ತು ವಿಕಾಸಕ್ಕೆ ಅನುಗುಣವಾಗಿ ವ್ಯಕ್ತಿಯು ತನ್ನ ಪ್ರಪಂಚದೊಂದಿಗೆ ವ್ಯವಹರಿಸುವ ರೀತಿನೀತಿಗಳಲ್ಲಿಯೂ ಬದಲಾವಣೆಗಳು ಕಂಡು ಬರುತ್ತವೆ. ಅಂತಹ ಬದಲಾವಣೆಗಳು ಯಾವಾಗಲೂ ವ್ಯಕ್ತಿಗೆ ಅನುಕೂಲಕರವಾಗಿಯೇ ಪರಿಣಮಿಸಲಾರವು.

ಕಾರಂತರ ವಿವಿಧ ಕಾದಂಬರಿಗಳಲ್ಲಿ ಚಿತ್ರಿತವಾಗಿರುವ ವರ್ತನಾ ಪ್ರಪಂಚಗಳು ಸಹಜವೋ ಎಂಬಂತೆ ಉದ್ಭವಿಸಿ, ಸಂಕೋಚ - ವಿಸ್ತಾರಗಳನ್ನು ಪಡೆದಿವೆಯೇ ಅಥವಾ ಒಂದೇ ರೀತಿಯ ಪಾತ್ರಗಳ ಆಟಕ್ಕಾಗಿ, ಹಾಗೂ ಅಷ್ಟಾಗಿ ವೈವಿಧ್ಯಪೂರ್ಣವಲ್ಲದ ಘಟನೆಗಳ ಪ್ರಕಟಣೆಗಾಗಿ ವಿಶೇಷ ರೀತಿಯ ರಂಗ ನಿರ್ಮಿತವಾಗಿಯೇ ಎಂಬ ಅಂಶವನ್ನು ಪರಿಶೀಲಿಸುವುದು ಅಗತ್ಯ. ಇಂತಹ ಪರಿಶೀಲನೆಗೆ ನಾನು ಪ್ರಮುಖವಾಗಿ ಅವ ಲಂಬಿಸಿರುವ ಕಾದಂಬರಿಗಳೆಂದರೆ: ಚೋಮನದುಡಿ, ಮರಳಿ ಮಣ್ಣಿಗೆ, ಬೆಟ್ಟದ ಜೀವ, ಕರುಳಿನಕರೆ, ಮೈಮನಗಳ ಸುಳಿಯಲ್ಲಿ, ಅಳಿದಮೇಲೆ, ಕುಡಿಯರ ಕೂಸು ಇತ್ಯಾದಿ. ಈ ಕಾದಂಬರಿಗಳಲ್ಲಿ ಬರುವ ಪಾತ್ರಗಳು ಸಂಕುಚಿತವೆನಿಸುವ ವರ್ತನಾ ಪ್ರಪಂಚಗಳಲ್ಲಿ ವ್ಯವಹರಿಸುವಂತೆ ಕಾಣುತ್ತದೆ. ಒಂದು ಕಾದಂಬರಿಗೆ ಕಾರಂತರೇ ಕೊಟ್ಟಿರುವ 'ಅದೇ ಊರು, ಅದೇ ಮರ' ಎಂಬ ಹೆಸರು, ಮೇಲಿನ ಅಂಶಕ್ಕೆ ಸಂಬಂಧಿಸಿದಂತೆ ಹೆಚ್ಚು ಧ್ವನಿ ಪೂರ್ಣವೆನಿಸುತ್ತದೆ. ಭೌಗೋಳಿಕವಾಗಿ ಸ್ವಲ್ಪ ವಿಭಿನ್ನವೆನಿಸುವ ಪರಿಸರಗಳ ಚಿತ್ರಣವಿದ್ದರೂ, ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ, ಈ ಕಾದಂಬರಿಗಳಲ್ಲಿ ಬರುವ ಹಲವು ಪ್ರಮುಖ ಪಾತ್ರಗಳ ಹಿನ್ನೆಲೆಯಲ್ಲಿ ಗಣನೀಯ ಭಿನ್ನತೆ ಕಂಡುಬರದು. ಮಾನಸಿಕ ಪ್ರಪಂಚವನ್ನು ಪರಿಗಣಿಸಿದಾಗಲೂ ಅಷ್ಟಾಗಿ ವೈವಿಧ್ಯಪೂರ್ಣವಲ್ಲದ ಪ್ರೇರಣೆಗಳು, ಆಶಯಗಳು, ಮನೋಭಾವಗಳು, ನಂಬಿಕೆಗಳು, ಹಾಗೂ ಪೂರ್ವ ಗ್ರಹಗಳು ಕಂಡುಬರುತ್ತವೆ. ಅಂದಮೇಲೆ ಸ್ವಲ್ಪಮಟ್ಟಿಗೆ ವಿಭಿನ್ನವೆನಿಸುವ ಭೌತಿಕ ಪ್ರಪಂಚದಲ್ಲಿ ಹುಟ್ಟಿ ಬೆಳೆದರೂ, ಸಂಕುಚಿತ ರೀತಿಯ ಸಾಮಾಜಿಕ ಹಾಗೂ ಮಾನಸಿಕ ಪ್ರಪಂಚಗಳನ್ನು ಗಣನೀಯವಾಗಿ ಹಿಗ್ಗಿಸಿಕೊಂಡು ವ್ಯವಹರಿಸುವ ಪಾತ್ರಗಳ ಸಂಖ್ಯೆ ಯನ್ನು ಎಣಿಸಿದಾಗ ನಿರಾಶೆ ಎನಿಸುತ್ತದೆ. ಬಹುಮಟ್ಟಿಗೆ 'ಚೋಮ', ತಕ್ಕಮಟ್ಟಿಗೆ 'ಯಶವಂತರಾಯ', ಓದುಗರ ತಾತ್ಸಾರಕ್ಕೆ ಪಾತ್ರನಾಗುವ 'ಲಚ್ಚ' ಮುಂತಾದ ಕೆಲವೇ ಪಾತ್ರಗಳನ್ನು ಇಲ್ಲಿ ಎಣಿಸಬಹುದು. ಹೀಗೇಕೆ? ಎಂಬ ಪ್ರಶ್ನೆ ಎದುರಾದಾಗ, ಕಾರಂತರು ತಮ್ಮ ಆಶಯಕ್ಕನುಗುಣವಾಗಿ ತಾವೇ ನಿರ್ಮಿಸಿದ ರಂಗಮಂದಿರದಲ್ಲಿ, ಅದೇ ಪಾತ್ರಧಾರಿಗಳನ್ನು ಬೇರೆ ಬೇರೆ ವೇಷಗಳಿಂದ ಕುಣಿಸಿದ್ದಾರೆಯೇ? ಎಂಬ ಶಂಕೆ ನಮ್ಮನ್ನು ಕಾಡಿದರೆ ಆಶ್ಚರ್ಯವಿಲ್ಲ. ಇಂತಹ ಶಂಕೆಗೆ ಪ್ರಬಲ ಕಾರಣಗಳನ್ನು ಪಾತ್ರಗಳ ಮಾನಸಿಕ ಪ್ರಪಂಚದಲ್ಲಿ ಗುರುತಿಸಲು ಸಾಧ್ಯವೆನಿಸುತ್ತದೆ. ಕಾರಂತರು ಸೃಷ್ಟಿಸಿರುವ ನಾಯಕ-ನಾಯಕಿಯರು, ಅಜ್ಜಿಯರು,ವೇಶ್ಯೆಯರು, ಗೃಹಿಣಿಯರು ಹಾಗೂ ದಲಿತರು ತಮ್ಮ ಸಾಮಾಜಿಕ ಪರಿಸ್ಪಂದನದಲ್ಲಿಲ್ಲವಾದರೂ, ಮಾನಸಿಕ ಪರಿಸ್ಪಂದನ ದಲ್ಲಿ ಗಣನೀಯ ವೈವಿಧ್ಯತೆಯನ್ನು ತೋರದಿರುವುದು ಆಶ್ಚರ್ಯಕರ. ಅಲ್ಲಿ ಕಾಣು ವುದು ಸ್ಪಷ್ಟವಾಗಿ ವಿಂಗಡಿಸಿದಂತೆ ನೇರವಾದ ಸಂಪ್ರದಾಯ ಬದ್ಧತೆಯುಳ್ಳ, ಅಥವಾ ಕೆಲವು ನಂಬಿಕೆಗಳು ಹಾಗೂ ಆಚರಣೆಗಳನ್ನು ವಿರೋಧಿಸುವುದರ ಮೂಲಕ ಪ್ರಗತಿ ಶೀಲತೆಯ (ತಪ್ಪು) ಕಲ್ಪನೆ ಕೊಡುವ; ಅಥವಾ ಅದೃಷ್ಟ ಮತ್ತು ಪಾಪ-ಪುಣ್ಯಗಳಿಗೆ ಶರಣಾಗಿ ಕಾಲತಳ್ಳುತ್ತಿರುವ ಪಾತ್ರಗಳು. ಇಂತಹ ಸ್ಥಗಿತ ರೀತಿಯ ವರ್ತನಾ

ಪ್ರಪಂಚದ ಸೃಷ್ಟಿಗೆ ಕಾದಂಬರಿಕಾರರ ಜೀವನದೃಷ್ಟಿ ಮತ್ತು ಶ್ರದ್ಧೆಗಳಲ್ಲಿಯೇ ಸಮಾಧಾನ ಸಿಗಬಹುದಾದರೂ, ಮಾನವಸಹಜ ಭಾವ-ಭಾವನೆಗಳ ವಿಕಾಸವನ್ನು ದಮನ ಮಾಡಬಲ್ಲ ಶಕ್ತಿಯಿರುವ ನಮ್ಮ ಸ್ಥಗಿತ ರೀತಿಯ ಸಾಮಾಜಿಕ-ಆರ್ಥಿಕ ವ್ಯವಸ್ಥೆಯಲ್ಲಿಯೇ ಕಾರಣಗಳನ್ನು ಹುಡುಕಬೇಕಾಗಬಹುದು. ಕಾರಂತರೂ ಕೂಡ ಈ ಸಾಮಾಜಿಕ ಆರ್ಥಿಕ ವ್ಯವಸ್ಥೆಯ ಕೂಸಲ್ಲವೇ ?

## ಪ್ರೇರಕ ಶಕ್ತಿಗಳು

ವ್ಯಕ್ತಿ ಮತ್ತು ಸಮೂಹ ವ್ಯವಹಾರಗಳಿಗೆ ಪ್ರೇರಕಶಕ್ತಿಗಳು ಎರಡು ವಿಧ: ವ್ಯಕ್ತಿಯ ಅಂತರಂಗದಲ್ಲಿಯೇ ಅಂಕುರಿಸಿ, ಬೆಳೆದು ಅವನ ಆಲೋಚನೆಗಳು, ಭಾವನೆಗಳು ಮತ್ತು ಕ್ರಿಯೆಗಳನ್ನು ಪ್ರೇರೇಪಿಸುವ ಜೈವಿಕ ಚೋದನೆಗಳು ಮತ್ತು ಭಾವರಸ (emotions)ಗಳೂ; ಮತ್ತು 'ವ್ಯಕ್ತಿಯು ತನ್ನ ಪ್ರತ್ಯಾವರಣದೊಂದಿಗೆ ವ್ಯವಹರಿಸುವಾಗ, ಪ್ರತ್ಯಾವರಣದ ಪ್ರಭಾವದಿಂದಾಗಿ ಆತನಲ್ಲಿ ಪ್ರವೇಶಿಸಿ, ಅವನಲ್ಲಿಯೇ ಬೆಳೆದು ಸ್ವಂತಿಕೆಯ ಭ್ರಮೆಯನ್ನು ಹುಟ್ಟಿಸುವ ಸಾಮಾಜಿಕ ಅಭಿಪ್ರೇರಣೆಗಳೂ, ವೈಯಕ್ತಿಕ ಜೀವನ ಮೌಲ್ಯಗಳು ಹಾಗೂ ನಂಬಿಕೆಗಳೂ ಒಂದು ಗುಂಪಿಗೆ ಸೇರಿದ ಪ್ರೇರಕ ಶಕ್ತಿಗಳಾದರೆ, ಬಾಹ್ಯ ಜಗತ್ತಿನ ಭೌತಿಕ ಹಾಗೂ ಸಾಂಸ್ಕೃತಿಕ ಆಗುಹೋಗುಗಳು, ಆಚಾರ ವ್ಯವಹಾರಗಳು, ಕಟ್ಟು ಕಟ್ಟಳೆಗಳು, ಸಂಘರ್ಷಗಳು ಮುಂತಾದವು ಎರಡನೆಯ ಗುಂಪಿಗೆ ಸೇರಿದ ಪ್ರೇರಕ ಶಕ್ತಿಗಳು. ಈ ಎಲ್ಲ ಪ್ರೇರಕ ಶಕ್ತಿಗಳ ವ್ಯಾಪಾರ ಹೊರ ನೋಟಕ್ಕೆ ಕಾಣುವಷ್ಟು ಸರಳವಾಗಿರದು. ಅವುಗಳ ವ್ಯಾಪಾರ ಬಹು ಜಟಿಲವಾದುದು, ಕೆಲವು ವೇಳೆ ಕುಟಿಲವಾದುದೂ ಹೌದು. ಒಳ-ಹೊರಗಿನ ಪ್ರೇರಕ ಶಕ್ತಿಗಳ ನಡುವೆ ಮಾತ್ರವಲ್ಲದೆ ಒಳಗಿನ ಹಾಗೂ ಹೊರಗಿನ ಪ್ರೇರಕಶಕ್ತಿಗಳಲ್ಲಿ ತಮ್ಮ ತಮ್ಮಲ್ಲಿಯೇ ಸಂಘರ್ಷಣೆ ನಡೆದಿರುತ್ತದೆ. ಸಿಕ್ಕುಸಿಕ್ಕಾಗಿರುವಂತೆ ಕಾಣುವ ಈ ಅಂತರ್ವ್ಯವಹಾರಗಳಲ್ಲಿ ಒಂದು ವ್ಯವಸ್ಥಿತ ಪ್ರಕ್ರಿಯೆ, ವಿನ್ಯಾಸವಿರುವುದನ್ನು ಕಂಡುಕೊಳ್ಳುವಲ್ಲಿ ನಾವು ಸಮರ್ಥರಾದರೆ ವ್ಯಕ್ತಿ-ಸಮೂಹಗಳ ವರ್ತನೆಯ ಅಂತರ್ಯ ಪ್ರಕಟವಾಗುತ್ತದೆ. ವರ್ತನೆಯ ಪ್ರೇರಕಶಕ್ತಿಗಳ ಸ್ವಭಾವ-ವಿನ್ಯಾಸಗಳನ್ನು, ಅವುಗಳ ಕಾರ್ಯಾಚರಣೆಯ ರೀತಿ ನೀತಿಗಳನ್ನು ಅರಿಯಲು ಮನೋವಿಜ್ಞಾನಿಗಳು ಸತತವಾಗಿ ಪ್ರಯತ್ನಶೀಲರಾಗಿದ್ದಾರೆ. ಅವರು ಈವರೆಗೆ ನಡೆಸಿರುವ ಅವಲೋಕನಗಳು, ಪ್ರಯೋಗಗಳು, ಅಲ್ಲಲ್ಲಿ ಗಣನೀಯ ಜಯವನ್ನು ಒದಗಿಸಿರುವುದು ಅಭಿಮಾನದ ಸಂಗತಿ. ವರ್ತನೆಯ ಪ್ರೇರಕ ಶಕ್ತಿಗಳ ತೀವ್ರತೆ, ಪ್ರಾಮುಖ್ಯತೆಗಳ ಬಗ್ಗೆ ಮಹಾ ಮಹಾ ಮನೋವಿಜ್ಞಾನಿಗಳ ನಡುವೆ ಮತ ಭೇದ ಕಂಡರೂ ಅವರು ತಮ್ಮ ಸತತ ಪರಿಶ್ರಮ, ವಿವೇಚನೆ ಹಾಗೂ ಕಾಣ್ಕೆಗಳಿಂದ ಗುರುತಿಸಿದ ಅಭಿಪ್ರೇರಣೆಗಳು ಸತ್ತ್ವಪೂರ್ಣವಾದವುಗಳೆಂಬುದನ್ನು ಯಾರೂ ಅಲ್ಲಗಳೆಯುವಂತಿಲ್ಲ.

ಹಸಿವು : ಮೂಲಭೂತ ಜೈವಿಕ ಅಭಿಪ್ರೇರಣೆಗಳಾದ ಗಾಳಿ, ನೀರು, ಆಹಾರ ಮತ್ತು ರಕ್ಷಣೆಯ ಅಗತ್ಯಗಳ ತೀವ್ರತೆ ಎಷ್ಟೆಂಬುದನ್ನು ಅವುಗಳಿಂದ ನಾವು ವಂಚಿತ

ರಾದಾಗ ತಿಳಿಯುವುದು ಕಷ್ಟವಲ್ಲ. ಉದಾಹರಣೆಗೆ ವ್ಯಕ್ತಿ ಮತ್ತು ಸಮೂಹಗಳ ಜೀವನದ ಮೇಲೆ ಹಸಿವು ವ್ಯಾಪಕ ರೀತಿಯ ಪ್ರಭಾವ ಬೀರುತ್ತದೆಯೆಂಬುದು ಅನುಭವಿಕ ಮಾತ್ರವಲ್ಲ, ಐತಿಹಾಸಿಕ ಹಾಗೂ ಪ್ರಾಯೋಗಿಕ ಸತ್ಯಕೂಡ. ಹಸಿವಿನಿಂದ ಕಂಗೆಟ್ಟ ಜನಸಮೂಹ ದೇಶಕೋಶಗಳ, ಕಲೆ ಸಂಸ್ಕೃತಿಗಳ ಬುಡವನ್ನೇ ಅಲುಗಿಸ ಬಲ್ಲರೆಂಬುದಕ್ಕೆ ಮಾನವನ ಇತಿಹಾಸದಾದ್ಯಂತ ಅಲ್ಲಲ್ಲಿ ನಡೆದಿರುವ ರಕ್ತಕ್ರಾಂತಿಗಳೇ ಸಾಕ್ಷಿ. ಹಸಿದ ಹೊಟ್ಟೆಗೆ ಆಚಾರ ವಿಚಾರಗಳ ಹಂಗಿರದು, ಒಳಿತು-ಕೆಡುಕುಗಳ ಪರಿವೆಯಿರದು, ನೀತಿ ನಿಯಮಗಳ ಕಟ್ಟುಕಟ್ಟಳೆ ಇರದು. ಹಸಿದವನಿಗೆ ಅನ್ನವೇ ಸರ್ವಸ್ವ. ಅವನು ಕಾಣುವುದು ಅನ್ನವನ್ನು, ಅವನು ಕೇಳುವುದು ಅನ್ನದ ಮಹಿಮೆ ಯನ್ನು, ಅವನ ಸ್ಪರ್ಶನ, ರಸನ, ಘ್ರಾಣ ಅನುಭವಗಳೆಲ್ಲಾ ಅನ್ನಮಯವೇ ಆಗಿರು ತ್ತವೆ. ಅವನಲ್ಲಿ ಸುಳಿಯುವ ವಿಚಾರಗಳು, ಅವನು ನಿರತನಾಗಿರುವ ಮನೋವಿಹಾರಗಳು, ಕಾಣುವ ಕನಸುಗಳು, ಅನುಭವಿಸುವ ಭ್ರಮೆ, ವಿಭ್ರಮೆಗಳು, ಕಟ್ಟಿಕೊಳ್ಳುವ ವಿಭ್ರಾಂತಿ ಗಳು ಅನ್ನಪ್ರೇರಿತವಾದವುಗಳು. ಇದಕ್ಕೆ ನಮ್ಮ ಗಮನವನ್ನು ಸೆಳೆಯುವ ಪ್ರಾಯೋಗಿಕ ನಿದರ್ಶನವೆಂದರೆ, ಎರಡನೇ ಮಹಾಯುದ್ಧದ ಕಾಲದಲ್ಲಿ ಅಮೆರಿಕೆಯ ಮಿನಿಸೋಟಾ ವಿಶ್ವವಿದ್ಯಾನಿಲಯದಲ್ಲಿ, 32 ಮಂದಿ ಸಂಶೋಧಕರ ಮೇಲೆ ಒಂದು ವರ್ಷಕಾಲ ನಡೆಸಲಾದ 'ಅರೆಯೂಟ ಪ್ರಯೋಗ'.[3] ಅರೆಯೂಟದ ಪ್ರಭಾವಕ್ಕೆ ಒಳಗಾದ ಆ ಸುಸಂಸ್ಕೃತರಲ್ಲಿ ಚಿತ್ರ ವಿಚಿತ್ರವಾದ ಸಡಿಲವರ್ತನೆ ಎಲ್ಲರ ಗಮನ ಸೆಳೆಯುವಂತ ಹುದು. ಆಹಾರವನ್ನು ಕದಿಯುವ ಮಟ್ಟಕ್ಕೆ ಕೆಲವರ ವರ್ತನೆ ಇಳಿಯುತ್ತದೆ ಎಂದ ಮೇಲೆ, ಸಮಾಜದಲ್ಲಿನ ನ್ಯಾಯ ನೀತಿಗಳ ಅಸ್ತಿತ್ವ ಎಷ್ಟರಮಟ್ಟಿಗೆ ಆಹಾರ ಸಮೃದ್ಧಿ ಹಾಗೂ ಹಸಿವಿನ ಸಂತೃಪ್ತಿಗಳನ್ನು ಅವಲಂಬಿಸಿರುತ್ತದೆ ಎಂಬುದಕ್ಕೆ ಹೆಚ್ಚು ವಿವರಣೆ ಬೇಕಾಗದು. ಮಾನವಶಾಸ್ತ್ರೀಯ ಅಧ್ಯಯನಗಳೂ ಕೂಡ ಹಸಿವಿನ ಪ್ರಭಾವ ಒಂದು ಜನಸಮೂಹದ ದೈನಂದಿನ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳನ್ನೆಲ್ಲಾ ವ್ಯಾಪಿಸಬಲ್ಲದೆಂಬುದನ್ನು ಬೆಳಕಿಗೆ ತಂದಿವೆ.[4]

ಕಾರಂತರು 'ಚೋಮನದುಡಿ', 'ಮರಳಿ ಮಣ್ಣಿಗೆ', 'ಅದೇ ಊರು ಅದೇ ಮರ', 'ಕುಡಿಯರ ಕೂಸು' ಮುಂತಾದ ಕಾದಂಬರಿಗಳಲ್ಲಿ ಹಸಿವಿನ ಕಠೋರತೆ ಎಷ್ಟೆಂಬುದನ್ನು ಚಿತ್ರಿಸಲು ಪ್ರಯತ್ನಿಸಿ ಸ್ವಲ್ಪಮಟ್ಟಿಗೆ ಕೃತ್ಯಕೃತ್ಯರಾಗಿದ್ದಾರೆ. ಬಡತನದ ಬೇಗೆ ವ್ಯಕಿ ಸಮೂಹಗಳನ್ನು ಗತಿಗೆಡಿಸಬಲ್ಲದೆಂಬುದು ಅವರ ಕಾದಂಬರಿಗಳಲ್ಲಿ ಸ್ಪಷ್ಟವಾಗಿಲ್ಲ.

---

3 'ವಿವರಗಳಿಗೆ ನೋಡಿ: ಧರಣೇಂದ್ರಯ್ಯ, ಎ. ಎಸ್. ಹಸಿವು ಮತ್ತು ವರ್ತನೆ' ಮಾನವಿಕ ಕರ್ನಾಟಕ, ಮೈಸೂರು 1970.

4 'ಬೊಲುವಿಯದ ಕೆಂಪು ಇಂಡಿಯನ್ನರಲ್ಲಿ ಸಿರಿಯೋನಿ ಎಂಬ ಬುಡಕಟ್ಟಿನ ಜನರ ಜೀವನ ರೀತಿನೀತಿಗಳೆಲ್ಲಾ ಆಹಾರದ ಮತ್ತು ಆಹಾರ ಪಡೆಯುವ ವಿಧಾನಗಳ ಮೇಲೆಯೋ ಕೇಂದ್ರೀಕೃತ ವಾಗಿರುತ್ತದೆ...ಅವರ ಕನಸುಗಳು ಮತ್ತು ಹಗಲುಗನಸುಗಳಿಗೆ ಆಹಾರದ ಬೇಟೆಯೇ ಪ್ರಮುಖ ವಸ್ತು. ಆಹಾರ ಬಹಳ ಕಡಿಮೆಯಿದ್ದಾಗ ಅವರಲ್ಲಿ ಲೈಂಗಿಕ ಸಂಬಂಧ ಅತ್ಯಲ್ಪಮಟ್ಟದಲ್ಲಿರುತ್ತದೆ. ಅವರ ಕತೆ, ಪುರಾಣ ಮತ್ತು ಕಲೆಗಳಲ್ಲೂ ಆಹಾರದ ವಿಷಯವೇ ಹಾಸುಹೊಕ್ಕು...''
(ಧರಣೇಂದ್ರಯ್ಯ, ಎ. ಎಸ್. 1970 ಉಲ್ಲೇಖ)

ಬಹುಶಃ ಇದಕ್ಕೆ ಅವರ ಕಾದಂಬರಿಯ ಕಾಲದೇಶಗಳ ಸ್ಥಿತಿಗತಿಗಳು, ಪ್ರಚಲಿತವಿದ್ದ ಸಾಂಪ್ರದಾಯಿಕ ಮೌಲ್ಯಗಳ ಬಿಗಿಹಿಡಿತ, ಹಾಗೂ ತಮ್ಮ ಪೂರ್ವಜನ್ಮದ ಪಾಪ ಪುಣ್ಯಗಳಲ್ಲಿ ಅಚಲ ಶ್ರದ್ಧೆಯನ್ನಿಟ್ಟು ತಮ್ಮ ದಾರುಣ ದುಃಖವನ್ನೇ ನುಂಗಿ ತಮ್ಮ ಬಾಳನ್ನು ಸಾಗಿಸುತ್ತಿದ್ದ ದರಿದ್ರ ಜನ, ಇವುಗಳು ಕಾರಣವಿರಬಹುದು. ಆದರೆ ಹಸಿದವರನ್ನು ಕಂಡು ಮರುಕದೋರುವ ಲೇಖಕರು, ಹಸಿವಿನ ಪರಿಹಾರದ ಬಗ್ಗೆ ತಳೆದಿರಬಹುದಾದ ನಿಲುವು ಅಸ್ಪಷ್ಟವೆನಿಸುತ್ತದೆ. ಈ ಸಮಸ್ಯೆಗೆ ಸಂಬಂಧಿಸಿದಂತೆ ಅವರು ಬೇರೆಬೇರೆ ಸಮೂಹ (ವರ್ಗ)ಗಳಿಗೆ, ಬೇರೆಬೇರೆ ಅಳತೆಗೋಲುಗಳನ್ನು ಬಳಸುತ್ತಾರೋ ಎಂಬ ಶಂಕೆ ಬರದಿರದು. 'ಬೆಟ್ಟದ ಜೀವ' ಕಾದಂಬರಿಯ ಧೀರೋದಾತ್ತನೆನಿಸಿದ ನಾಯಕ ಗೋಪಾಲಯ್ಯ, ತಮ್ಮ ಸಾಕುಮಗನಂತಿರುವ ನಾರಾಯಣಯ್ಯ ಮತ್ತು ಅವನ ಕುಟುಂಬದ 'ಮುಂದಿನ ಸುಖಜೀವನ'ದ ಬಗ್ಗೆ ತೀವ್ರತರ ಕಳಕಳಿಯನ್ನು ತೋರಿಸುತ್ತಾನಾದರೂ ತಮ್ಮ ಕುಲಕ್ಕೆ, ಹುಟ್ಟಿದಂದಿನಿಂದ ದುಡಿಯುತ್ತಿರುವ ಮೂಲದ ಹೊಲೆಯ ಬಚ್ಚ ಮತ್ತು ಅವನ ಕುಟುಂಬದ 'ಇಂದಿನ ದರಿದ್ರಜೀವನ'ದ ಬಗ್ಗೆ ಅಷ್ಟಾಗಿ ಗಮನ ಕೊಡದಿರುವುದು ಆಯಾಯ ಪಾತ್ರಗಳ ಸನ್ನಿವೇಶದಲ್ಲಿ ವಾಸ್ತವ ಚಿತ್ರಣವೆನಿಸಿದರೂ, ಲೇಖಕರ ಸಾಂಪ್ರದಾಯಿಕ ಒಲವು ಇಲ್ಲಿ ತನ್ನ ಕಾರುಬಾರು ನಡೆಸಿರಬಹುದೆಂಬ ಸಂದೇಹ ಮೂಡದಿರದು. 'ಮರಳಿ ಮಣ್ಣಿಗೆ' ಕಾದಂಬರಿಯಲ್ಲಿ ಐತಾಳರ ಮನೆವಾರ್ತೆ, ಮೂರು ತಲೆಮಾರುಗಳಲ್ಲಿ ಆ ಜೀವಿತಕ್ಕಾಗಿ ಕುಟುಂಬದ ಜನರು ಪ್ರಕೃತಿಯೊಂದಿಗೆ ನಡೆಸುವ ಸೆಣಸಾಟ, ಆದರಿಂದುಂಟಾಗುವ ಸೋಲು ಗೆಲುವುಗಳು ಓದುಗರ ಮನಮುಟ್ಟುವಂತೆ ಚಿತ್ರಿತವಾಗಿವೆ.

'ಐತಾಳರ ಮನೆಯ ದೇವರದ್ದೊಂದು ಒಳ್ಳೆಯ ಗುಣ. ಅಕ್ಕಿ ನೆನೆಯಿಸಿ ತೋರಿಸಿದರೆ ಸಾಕು, ಅನ್ನದ ನೈವೇದ್ಯ ಅವನಿಗೆ ಬೇಕಿಲ್ಲ'...'ಮೊಮ್ಮಗನ ಒಂದು ತುತ್ತನ್ನು ತಾನುಣ್ಣುತ್ತಿದ್ದೇನೆಯೋ'...'ಮಗುವಿನ ಹಪ್ಪಳಕ್ಕೆ ಕಡಿಮೆ ಆಗುವುದಾದರೆ ಮೂರು ಜನ ಒಂದೊಂದು ದಿನ ಏಕಾದಶಿ ಮಾಡಿದ ರಾಯಿತು'...

'ಉಪ್ಪಿನ ಕಾಯಿ ಮುಗಿದಿತ್ತು, ಮನೆಯಲ್ಲಿ ಹಾಲುಮಜ್ಜಿಗೆಯ ಹೆಸರಿಲ್ಲ, ಸವಿನುಡಿಯೇ ಆ ಮಗುವಿನ ರಸದೂಟವಾಯಿತು'...

ಜಾತ್ರೆಗೆ ಹೋದಾಗ, 'ದೇವರಿಗೊಂದು ಮೂರು ಕಾಸಿನ ಕಾಣಿಕೆ ಮೇಲೆ ಮುಕ್ಕಾಲಿನ ಮಂಡಕ್ಕಿ, ಒಟ್ಟು ಒಂದಾಣೆಯ ಬದುಕು'...

'ತನ್ನ ದರಿದ್ರ ಸ್ಥಿತಿಯನ್ನು ತನ್ನ ಚಿಕ್ಕಪ್ಪನಿಂದ ಮರೆ ಮಾಡಲು ನಾಗವೇಣಿ ಜಾತ್ರೆಯಲ್ಲಿ ನಾರಾಯಣಯ್ಯನ ಕಣ್ಣು' ತಪ್ಪಿಸದಾದಳು.

'...ನಾಗವೇಣಿಯು ಆ ವರ್ಷದೊಳಗೆ ಅರ್ಧಮರ್ಧ ಎಲುಬಾಗಿದ್ದಳು, ಅದು ಯಾರ ಕಣ್ಣಿಗೂ ಬೀಳುವಂತಿತ್ತು. ಜಾತ್ರೆಗೆ ಅವಳು ಉಟ್ಟದ್ದು ಹಳೆಯ

ಸೀರೆ. ಹೊಸ ಬಟ್ಟೆ ಉಡುವ ದಿನ ಅವಳ ಮಗು ಉಟ್ಟದ್ದು ಹರಕು ಪಾಣಿ ಪಂಚೆ...

'ಆ ಮಂಡಕ್ಕಿಯ ಪ್ರತಿಕಾಳನ್ನು ಒಂದೊಂದಾಗಿ ಎತ್ತಿ ಅವನು ತಿನ್ನ ತೊಡಗಿದ'...

ಮುಂತಾದ ನುಡಿಗಟ್ಟುಗಳು ಐತಾಳರ, ಅದರಲ್ಲಿಯೂ ನಾಗವೇಣಿ ಕುಟುಂಬದ ಬಡತನದ ಸ್ವರೂಪವನ್ನು ನಮ್ಮ ಕಣ್ಮುಂದೆ ಕಟ್ಟುತ್ತವೆ. ಓದುಗನಲ್ಲಿ, ಸಂಬಂಧ ಪಟ್ಟವರ ಬಗ್ಗೆ ಅಡೆತಡೆಯಿಲ್ಲದೆ ಅನುಕಂಪೆಯನ್ನು ಹುಟ್ಟಿಸುವಂತಹ ಈ ಚಿತ್ರಣ ಕಾರಂತರ ಸಮಸ್ಯೆಯ ಅರಿವು, ಮಾನವ ಪ್ರತಿಕ್ರಿಯೆಯ ಬಗೆಗಿನ ಒಳನೋಟ ಹಾಗೂ ಕಲಾನೈಪುಣ್ಯಗಳಿಗೆ ಉತ್ತಮ ನಿದರ್ಶನ. ನಾಗವೇಣಿಯ ಬಡತನವನ್ನು ಓದುಗರ ಮನಕರಗುವಂತೆ ಚಿತ್ರಿಸಿದ ಕಾರಂತರು ಬಚ್ಚಿಯ ಕಡುಬಡತನದ ಬಗ್ಗೆ ಉದಾಸೀನ ರಾಗಿಲ್ಲ. ರಾಮನು,

"ಬಚ್ಚಿ ಗಾಳಿ ತಿನ್ನಲಿಕ್ಕೆ ನೀನೂ
ಸಮುದ್ರಕ್ಕೆ ಬರುವುದಿಲ್ಲವೇ?" ಎಂದಾಗ
ಬಚ್ಚಿ, 'ಒಡೆಯಾ, ಉಣ್ಣಲಿಕ್ಕೆ ಇಲ್ಲದ ದಿನ ನಾವು
ಅದನ್ನೇ ತಿನ್ನುವುದು' ಎಂಬ ಮಾತು ಧ್ವನಿಪೂರ್ಣ.

ಆದರೂ ಆ ಶೂದ್ರರ ಜೀವಿತದ ಬಗ್ಗೆ ಅಷ್ಟಾಗಿ ಕಳಕಳಿ ಕಂಡುಬರದು. ತಮ್ಮದೇ ಆದ ಗದ್ದೆಯನ್ನು ಲಚ್ಚನ ವಂಚನೆಯಿಂದ ಕಳೆದುಕೊಂಡು, ಮೂಲ ಗೇಣಿಗೆ ಪಡೆದು ಕೊಂಡಾಗ 'ಗೇಣಿ ಸಲ್ಲಿಸಿ ಬದುಕುವುದೆಂತು?' ಎಂಬ ಆತಂಕ ಸಹಜ ಚಿತ್ರಣ ಸರಿ. ಓದುಗರ ಅನುಕಂಪೆಯನ್ನು ತಕ್ಷಣ ಸೆಳೆಯುವಂಥದ್ದು. ಆದರೆ ಶೂದ್ರ, ಸೂರನ ಕುಟುಂಬದವರು, ತಮ್ಮ ಶ್ರಮಕ್ಕಾಗಿ ಅನಿವಾರ್ಯವಾಗಿ ಹೆಚ್ಚು ನುಚ್ಚನ್ನು ಬೇಡುವ ಸನ್ನಿವೇಶದಲ್ಲಿ, ಅವರ ಬಗ್ಗೆ ಸಹಾನುಭೂತಿ ಓದುಗನಿಗೆ ಬರುವಂತಹ ಚಿತ್ರಣವಿಲ್ಲ ದಿರುವುದು ಸೋಜಿಗವೆನಿಸುತ್ತದೆ. ಚೋಮನದುಡಿಯಲ್ಲಿ, ದಲಿತ ಸಮಸ್ಯೆಯ ಬಗ್ಗೆ ಸ್ಪಷ್ಟ ರೀತಿಯಲ್ಲಿ ಪ್ರಕಟವಾದ ಸಹಾನುಭೂತಿ, ಕಾರಂತರಲ್ಲಿ ಬಹುಶಃ ಬರುಬರುತ್ತಾ ಮಾತಿನ ಮಟ್ಟದಲ್ಲಿ ನಿಲ್ಲುವಂತಾಯಿತೇನೋ ಎಂಬ ಸಂದೇಹ ಸುಳಿಯುತ್ತದೆ; ಪು.ತಿ.ನ. ಅವರ 'ಕರುಣೆ ಒಲುಮೆಗೆ ಸಾಟಿಯೇ' ಎಂಬ ನುಡಿಗಟ್ಟು ನೆನಪಿಗೆ ಬರುತ್ತದೆ.

ಕಾಮೇಚ್ಛೆ : ತಮ್ಮ ಕಾದಂಬರಿಗಳಲ್ಲಿ, ಅವಕಾಶ ಸಿಕ್ಕಿದಾಗಲೆಲ್ಲಾ, ಅರ್ಥೈಸಲು ಕಾರಂತರು ಪ್ರಯತ್ನಿಸಿರುವ ಮತ್ತೊಂದು ಅಭಿಪ್ರೇರಣೆ ಎಂದರೆ 'ಕಾಮೇಚ್ಛೆ'. ಕಾಮೇಚ್ಛೆ ಅಥವಾ ಲೈಂಗಿಕ ಚೋದನೆ ಮಾನವನ ಆಗುಹೋಗುಗಳಲ್ಲಿ ವ್ಯಾಪಕ ರೀತಿಯ ಪ್ರಭಾವವನ್ನು ಬೀರುವುದು ಸಾಹಿತಿಗಳ, ಕಲಾವಿದರ, ವಿಜ್ಞಾನಿಗಳ, ಅಷ್ಟೇಕೆ ದಾರ್ಶನಿಕರ ಗಮನಕ್ಕೆ ಬಂದಿರುವ ಸಂಗತಿ. ಪ್ರಾಣಿವರ್ಗದಲ್ಲಿ ತನ್ನ ನೈಜ ಅಭಿವ್ಯಕ್ತಿ ಕಂಡುಕೊಂಡು ಸಾಪೇಕ್ಷವಾಗಿ ಅತ್ಯಂತ ಸರಳವೆಂಬಂತೆ ಕಾಣುವ ಈ ಅಭಿಪ್ರೇರಣೆ,

ಮಾನವಮಟ್ಟದಲ್ಲಿ ಅತ್ಯಂತ ಜಟಿಲ ಶಕ್ತಿಯಾಗಿ, ಪ್ರಕ್ರಿಯೆಯಾಗಿ, ಪರಿಣಾಮವಾಗಿ ಕಂಡುಬರುತ್ತಿರುವುದು ಗಣನೀಯವೂ ಹೌದು, ಆತಂಕಕಾರಿಯೂ ಹೌದು. ಕಾಮಜೀವನದ ಬಗ್ಗೆ ಪ್ರಾಚೀನ ಕಾಲದಿಂದಲೂ ಜಿಜ್ಞಾಸೆ ನಡೆದೇ ಬಂದಿದೆ. ಕಾಮ ಮತ್ತು ಕಾಮಜೀವನದ ಬಗ್ಗೆ ವೈವಿಧ್ಯಪೂರ್ಣವಾದ ಸಿದ್ಧಾಂತಗಳು, ಮನೋಭಾವಗಳು, ಪೂರ್ವಗ್ರಹಗಳು, ನಂಬಿಕೆಗಳು ಹಾಗೂ ಆಚರಣೆಗಳು ಕಾಲಕಾಲಕ್ಕೆ, ದೇಶದೇಶಗಳಲ್ಲಿ ರೂಪುಗೊಂಡು ಇಡೀ ಸಮಸ್ಯೆಯೇ ಹೆಚ್ಚು ಜಟಿಲಗೊಂಡಂತಾಗಿದೆ. ಒಂದು ಗಂಟು ಬಿಡಿಸಲು ಹೋಗಿ ಮೂರು ಗಂಟಿಕ್ಕಿದ ತೆರನಾಗಿದೆ. ಭಾರತೀಯ ದಾರ್ಶನಿಕರು 'ಕಾಮ'ವನ್ನು ವಿಶಾಲಾರ್ಥದಲ್ಲಿ ಬಳಸಿ ಅದಕ್ಕೆ ಪುರುಷಾರ್ಥದ ಸ್ಥಾನ ಕೊಟ್ಟರು. ಸಾಹಿತಿಗಳು, ಕಾಮೇಚ್ಛೆ ಮತ್ತು ಕಾಮ ಜೀವನಗಳ ಕೆಲಕೆಲವು ಅಂಶಗಳನ್ನು ಗುರುತಿಸಿ, ತಮ್ಮ ಕೃತಿಗಳಲ್ಲಿ ನಾನಾ ರೂಪಗಳನ್ನು ಚಿತ್ರಿಸಿದರು. ಆಧುನಿಕ ಮನೋವಿಜ್ಞಾನಿಗಳು ಈ ಸಮಸ್ಯೆಯನ್ನು ನೈದಾನಿಕ, ಪ್ರಾಯೋಗಿಕ ಹಾಗೂ ಸಮೀಕ್ಷಣಾತ್ಮಕ ವಿಧಾನಗಳಿಂದ ಅರಿಯಲು ಪ್ರಯತ್ನಿಸಿದ್ದಾರೆ. ಇಂತಹ ಪ್ರಯತ್ನಗಳಿಂದ ಸಮಸ್ಯೆಯ ಆಳ - ಅಗಲಗಳು ಹೆಚ್ಚಾಗುತ್ತಿವೆಯೇ ಹೊರತು ಒಂದು ಸಮಗ್ರ ಅರಿವು ಮೂಡಿದೆ ಎಂದು ಹೇಳಲಾಗದು. ಮನೋವಿಶ್ಲೇಷಣ ಶಾಸ್ತ್ರಜ್ಞರ, ಅದರಲ್ಲಿಯೂ, ಮನೋವಿಶ್ಲೇಷಣೆಯ ಪಿತೃವೆನಿಸಿ ಜಗತ್ಪ್ರಸಿದ್ಧನಾಗಿರುವ ಸಿಗ್ಮಂಡ್ ಫ್ರಾಯ್ಡನ ಅಭಿಪ್ರಾಯದಲ್ಲಿ "ಕಾಮವಾಂಛೆ" (Libido)ಯೇ ಮಾನವನ ಎಲ್ಲಾ ಭಾವ-ಭಾವನೆಗಳ, ಆಚಾರ ವ್ಯವಹಾರಗಳ ಮೂಲದಲ್ಲಿರುವ 'ಶಕ್ತಿ'. 'ಸುಖತತ್ತ್ವ' (pleasure principle)ದ ಆಧಾರದ ಮೇಲೆ ನಿಂತಿರುವ ಈ ಸಹಜ ಪ್ರೇರಣೆಯ ನೈಜವಿಕಾಸ ಮತ್ತು ಕಾರ್ಯಾಚರಣೆಗಳನ್ನು ವಿವರಿಸಲು ಫ್ರಾಯ್ಡ್ "ಮನೋಲೈಂಗಿಕ ವಿಕಾಸ ಸಿದ್ಧಾಂತ" (theory of psychosexual Development) ರೂಪಿಸಿದ. ಈ ಸಿದ್ಧಾಂತದ ಪ್ರಕಾರ ಕಾಮವಾಂಛೆಯು ವ್ಯಕ್ತಿಯ ವಯೋಮಾನಕ್ಕನುಗುಣವಾಗಿ ವಿಕಾಸಹೊಂದುತ್ತಾ ವಿವಿಧ ರೂಪತಾಳಿ, ಅವನು ಜೈವಿಕ ಪರಿಪಕ್ವತೆ ಪಡೆಯುವ ವೇಳೆಗೆ 'ಭಿನ್ನಲಿಂಗ ಕಾಮ'ದ ರೂಪತಾಳುತ್ತದೆ. ಅಂತಹ ವಿಕಾಸ ಸರಳವಾದಾಗ, ಸರಾಗವಾದಾಗ ಆರೋಗ್ಯ ಪೂರ್ಣ ವ್ಯಕ್ತಿತ್ವ ವಿಕಾಸ ಹೊಂದುತ್ತದೆ. ಆದರೆ ಪ್ರತ್ಯಾವರಣದ ಅಡೆತಡೆಗಳಿಂದಾಗಿ ಅಥವಾ ಸಾಮಾಜಿಕ ಕಟ್ಟುಕಟ್ಟಳೆಗಳಿಂದಾಗಿ, ಕಾಮವಾಂಛೆಯು ತನ್ನ ಸ್ವಭಾವಕ್ಕನುಗುಣವಾಗಿ, ವಿವಿಧ ವಿಕಾಸ ನೆಲೆಗಳಲ್ಲಿ ಬೆಳೆಯಲಾರದೆ, ಯಾವುದಾದರೂ ನೆಲೆಯಲ್ಲಿ ಬಂಧಿತನಾದಾಗ ವಿಕೃತ ರೂಪ ತಾಳುತ್ತದೆಯಲ್ಲದೆ, ಭಾವಗ್ರಂಥಿ (complex)ಯ ರೂಪ ತಾಳಿ, ಸುಪ್ತ ಚೇತನದ ತಳಾತಳದಲ್ಲಿ ನೆಲೆನಿಂತು, ವ್ಯಕ್ತಿಯ ಇಡೀ ಜೀವನದಾದ್ಯಂತ ಸಂಕಟಕಾರಿಯಾಗುತ್ತದೆ. ಪ್ರಾಚೀನ ಶಿಲ್ಪ ಹಾಗೂ ಚಿತ್ರಕಲೆಗಳಲ್ಲಿ, ಸಾಹಿತ್ಯಕೃತಿಗಳಲ್ಲಿ ಹಾಗೂ ಸರ್ವೇಕ್ಷಣಗಳಿಂದ ಬೆಳಕಿಗೆ ಬಂದಿರುವಂತೆ ಆಧುನಿಕ ಜನಜೀವನದಲ್ಲಿ ಕಂಡು

ಬರುತ್ತಿರುವ ಚಿತ್ರ ವಿಚಿತ್ರವಾದ ಕಾಮವಿಕಾರಗಳಿಗೂ, ವಿಕೃತ ಕಾಮುಗಳಿಗೂ, ಕಾಮವಾಂಛೆಯ ಕುಂಟಿತ, ಅಸಹಜ, ವಿಪರೀತ ಅಭಿವ್ಯಕ್ತಿಯೇ ಕಾರಣವೆಂದು ಹೇಳಲಾಗಿದೆ. ಅಲ್ಲದೆ, ಅನುವರಿತ ಸ್ವನಿಯಂತ್ರಣ ತಂತ್ರಗಳಿಂದ ನಿರೀಕ್ಷಿತ ಸ್ವಪರಹಿತಗಳಿಗಾಗಿ, ಉನ್ನಯನೀಕರಿಸಲಾದ (sublimated) ಕಾಮವಾಂಛೆ, ಕಲೆ, ಸಾಹಿತ್ಯ, ವಿಜ್ಞಾನ ಮತ್ತು ಸಂಸ್ಕೃತಿಗಳ ಸೃಷ್ಟಿ ಕಾರ್ಯದಲ್ಲಿ ಅಭಿವ್ಯಕ್ತಿ ಪಡೆಯುತ್ತದೆ ಎಂದೂ ಹೇಳಲಾಗಿದೆ. ಫ್ರಾಯ್ಡನ ಈ ಮೂಲ ಸಿದ್ಧಾಂತವನ್ನು ಅವನ ಆತ್ಮೀಯ ಅನುಯಾಯಿಗಳಾಗಿದ್ದ, ಯೂಂಗ್ ಮತ್ತು ಆಡ್ಲೆರ್ ಕಟುವಾಗಿ ವಿರೋಧಿಸಿ ತಮ್ಮ ತಮ್ಮ ಪಂಥಗಳನ್ನೇ ಸ್ಥಾಪಿಸಿಕೊಂಡರೂ, ಈ ಸಿದ್ಧಾಂತದ ಪ್ರಮುಖ ತತ್ತ್ವಗಳು ಇನ್ನೂ ಜೀವಂತವಾಗಿವೆ ಎಂಬುದು ಗಮನಾರ್ಹ ಸಂಗತಿ. ಅಂತಹ ತತ್ತ್ವಗಳಲ್ಲಿ ಪ್ರಬಲ ವಿರೋಧವನ್ನೆದುರಿಸಿದ 'ಈಡಿಪಸ್ ಭಾವಗ್ರಂಥಿ' ತತ್ತ್ವವೇ ಉಳಿದು ಬಂದಿರುವುದು ಮಾತ್ರವಲ್ಲದೆ, ಮಾನವ ಜನಾಂಗದ ವಿವಿಧ ಸಾಹಿತ್ಯ-ಸಂಸ್ಕೃತಿಗಳಲ್ಲಿ, ಜನಪದಗಳಲ್ಲಿ ಜೀವಂತ ಸಾಕ್ಷಾತ್ಕಾರ ಪಡೆದಿರುವುದನ್ನು ಯಾರೂ ಅಲ್ಲಗಳೆಯಲಾರರು. ಧರ್ಮನಿಬದ್ಧವೆನಿಸಿರುವ ಭಾರತೀಯ ಸಂಸ್ಕೃತಿ, ಉಪ ಸಂಸ್ಕೃತಿಗಳಲ್ಲಿಯೂ ಒಂದಿಲ್ಲ ಒಂದು ರೂಪದಲ್ಲಿ, 'ಈಡಿಪಸ್ ಭಾವಗ್ರಂಥೀಯ' ಅಭಿವ್ಯಕ್ತಿಯನ್ನುಕ ಾಣುವುದು ಕಷ್ಟವಲ್ಲ.[4]

ಯೂಂಗನು 'ಪರಿಪೂರ್ಣತೇಚ್ಛೆ'ಯೇ ಮಾನವನ ಎಲ್ಲಾ ಆಗುಹೋಗುಗಳ ಮೂಲ ಶಕ್ತಿ ಎಂದು ಹೇಳಿದರೂ, 'ಸಮಷ್ಟಿ ಸುಪ್ತಚೇತನ' (collective unconscious) ಸಿದ್ಧಾಂತದಲ್ಲಿ, ಆತನು ಅಳವಡಿಸಿರುವ 'ಮೂಲಪ್ರರೂಪ' (archetype) ಸಂಕಲ್ಪನೆಯು, ಮಾನವ ಸಂಸ್ಕೃತಿಯಲ್ಲಿ ಪ್ರಚಲಿತವಿರುವ ಲಿಂಗ, ಸರ್ಪ ಮುಂತಾದ ಲೈಂಗಿಕ ಸಂಕೇತಗಳ ವಿಶ್ಲೇಷಣೆಯಲ್ಲಿ ಬಹು ಉಪಯುಕ್ತವೆನಿಸುತ್ತದೆ. ಮಾಸ್ಲೋನ ಸುಪ್ರಸಿದ್ಧ 'ಅಗತ್ಯಗಳ ಶ್ರೇಣಿ'[5] ಸಿದ್ಧಾಂತದಲ್ಲಿ ಕಾಮ ಮತ್ತು ಕಾಮಜೀವನಗಳು ಆನುಷಂಗಿಕ ಪ್ರಭಾವ ಬೀರುವುದು ಪ್ರತಿಪಾದಿತವಾಗಿದೆ.

ಕಾರಂತರು ತಮ್ಮ ಹಲವು ಕಾದಂಬರಿಗಳಲ್ಲಿ—ಕೆಲವಲ್ಲಿ ಪ್ರಧಾನವಾಗಿ ಕೆಲವಲ್ಲಿ ಗೌಣವಾಗಿ ಪ್ರಸ್ತಾಪಿಸಿ-ವಿವರಿಸಲು ಯತ್ನಿಸಿರುವ ಲೈಂಗಿಕ ಸಮಸ್ಯೆಗಳನ್ನು ಮನೋವೈಜ್ಞಾನಿಕ ನೆಲೆಯಿಂದ ಪರಿಶೀಲಿಸಿದಾಗ ಅನೇಕ ಮಹತ್ವಪೂರ್ಣ ಅಂಶಗಳು ಹೊರಬೀಳುವ ಸಾಧ್ಯತೆಯಿದೆ. ಕಾಮ ಮತ್ತು ಕಾಮಜೀವನಗಳ ಅವಿಭಾಜ್ಯ ಅಂಗಗಳಾಗಿ ದಾಂಪತ್ಯ ಮತ್ತು ವ್ಯಭಿಚಾರ ಸಮಸ್ಯೆಗಳು, ವೇಶ್ಯಾಜೀವನದ ಲೈಂಗಿಕ ಮತ್ತು ಸಾಮಾಜಿಕ-ಆರ್ಥಿಕ ನೆಲೆಗಳು, ಲೈಂಗಿಕ ಜೀವನದ ಮೂಲ ನೆಲೆಗಳು, 'ಹಳೆಯಭೂತ', 'ಸಲಿಂಗ ರತಿ'ಯಂತಹ ವಿಕೃತ ಕಾಮ ಪ್ರಸಂಗಗಳು ಮುಂತಾದ ಲೈಂಗಿಕ ಸಮಸೆ.

4 ಶುಭಚಂದ್ರ, ವಸಂತ ತಿಲಕೆ ವೇಶ್ಯೆಯ ಕಥೆ, ಜೈನ ಸಾಹಿತ್ಯ ಮತ್ತು ಸಂಸ್ಕೃತಿ ಕೆಲವು ಅಧ್ಯಯನಗಳು, ಮೈಸೂರು 1976 ಪು. 13

5 ವಿವರಗಳಿಗೆ ನೋಡಿ : ಎ. ಎಸ್. ಧರಣೇಂದ್ರಯ್ಯ, ಸಾಮಾನ್ಯ ಮನೋವಿಜ್ಞಾನ, ಮೈಸೂರು, ವಿ. ವಿ. 1976 ಪು. 405-408

ಗಳನ್ನು, ವಿವಿಧ ಸ್ತರಗಳಲ್ಲಿ, ವಿವಿಧ ಮಾನವ ಸಂಬಂಧಗಳಲ್ಲಿ ಪ್ರಸ್ತಾಪಿಸಿ, ತಮ್ಮ ಕಾಣ್ಕೆಗಳಿಗನುಗುಣವಾಗಿ ವಿವರಿಸಲು ಯತ್ನಿಸಿದ್ದಾರೆ. ಈ ಪ್ರಯತ್ನದಲ್ಲಿ ಅವರು ಅಲ್ಲಲ್ಲಿ ಆಧುನಿಕ ಮನೋವಿಜ್ಞಾನ ಮತ್ತು ಮಾನವಶಾಸ್ತ್ರಗಳ ನೆರವನ್ನು ಪಡೆದಿರು ವುದನ್ನು ಗುರುತಿಸಲು ಸಾಧ್ಯ.

ಕನ್ಯಾಬಲಿಯಲ್ಲಿ, ವೇಶ್ಯಾಸಮಸ್ಯೆ ಪ್ರಮುಖವಾಗಿ ಸಾಮಾಜಿಕ ಸಮಸ್ಯೆ ಎಂಬಂತೆ ಪ್ರತಿಪಾದಿತವಾಗಿದ್ದರೂ, ಅದು ಗಂಡು–ಹೆಣ್ಣುಗಳ ನಡುವಣ ಜೈವಿಕ ಆಕರ್ಷಣೆ ಮತ್ತು ಅತೃಪ್ತ ಕಾಮನೆಗಳಿಂದಲೂ ಪ್ರೇರಿತವಾಗುವುದನ್ನು ಕಾಣಬಹುದು. ಸರಸಮ್ಮನ ಸಮಾಧಿಯಲ್ಲಿ ಪ್ರತಿಪಾದಿತವಾಗಿರುವ ಲೈಂಗಿಕ ಸಮಸ್ಯೆ ಪ್ರಧಾನವಾಗಿ ವಿರಸ ದಾಂಪತ್ಯ ಜೀವನಕ್ಕೆ ಸಂಬಂಧಿಸಿ, ಅತೃಪ್ತ ಕಾಮನೆಗಳ ವಿಕೋಪದಿಂದಾಗಿ ಅನೈತಿಕ ಸಂಬಂಧಗಳಲ್ಲಿ ಪರ್ಯವಸಾನವಾಗುವ ಚಿತ್ರ ನಮ್ಮ ಕಣ್ಮುಂದೆ ನಿಲ್ಲುತ್ತದೆ. ಇನ್ನು ವೇಶ್ಯೆಯರ ಆಸೆ ಆಕಾಂಕ್ಷೆಗಳು, ಸ್ಥಾನಮಾನಗಳು, ಕಾಮಜೀವನದ ತೃಪ್ತಿ ಅತೃಪ್ತಿಗಳು, ಪ್ರಾಸಂಗಿಕವಾಗಿ ಅನುಭವಿಸಬೇಕಾಗಿ ಬರುವ ಸಂಕಟ ಮತ್ತು ರೋಗಜನ್ಯ ಮೈಮನಗಳ ಯಾತನೆ ಮುಂತಾದ ಸಮಸ್ಯೆಗಳನ್ನು ಕಾರಂತರು 'ಮೈಮನಗಳ ಸುಳಿಯಲ್ಲಿ' ಎಂಬ ಕಾದಂಬರಿಯಲ್ಲಿ ಸ್ವಾರಸ್ಯಕರವೆಂಬಂತೆ ಚಿತ್ರಿಸಿದ್ದಾರೆ. 'ಹಳೆಯ ಭೂತ'ದ ಸಮಸ್ಯೆಯನ್ನು ನಾಟಕೀಯವಾಗಿ, ರೋಮಾಂಚನಕಾರಿಯಾಗಿ ಸ್ವಪ್ನದ ಹೊಳೆಯಲ್ಲಿ ತೇಲಿಬಿಟ್ಟು, ಮೂಕಜ್ಜಿಯ ಕನಸುಗಳಲ್ಲಿ ಅರ್ಥಕಾಣುವ ಪ್ರಯತ್ನ ಮಾಡಿದ್ದಾರೆ. ಲೈಂಗಿಕ ಅತ್ಯಾಚಾರ ಅನಾಚಾರ ಸಮಸ್ಯೆಗಳನ್ನು, 'ಸ್ವಪ್ನದ ಹೊಳೆ' ಮತ್ತು 'ಬತ್ತದ ತೊರೆ' ಕಾದಂಬರಿಗಳಲ್ಲಿ ಚಿತ್ರಿಸಿದ್ದಾರೆ.

'ಮೈಮನಗಳ ಸುಳಿಯಲ್ಲಿ'ನ ನಾಯಕಿ ಮಂಜುಳೆ ವಿವಿಧ ವ್ಯಕ್ತಿಗಳಿಂದ ಪಡೆಯುವ ರತಿಸುಖ ಹಾಗೂ ಸುಖಾಭಾಸಗಳ ಹಿನ್ನೆಲೆಯಲ್ಲಿ, ಅವಳು ಕೂಡಿದ ಆಯಾಯ ವ್ಯಕ್ತಿಗಳಲ್ಲಿ ಮನೆಮಾಡಿಕೊಂಡಿದ್ದ ಕಾಮವಾಂಛೆ, ಚಿಕ್ಕಂದಿನ ಬೆಳವಣಿಗೆ, ಸಮಾಜದೊಡನೆ ವ್ಯವಹರಿಸುವಾಗ ಅನುಭವಿಸಿದ ಆಶಾಭಂಗ ಹಾಗೂ ಸಾಮಾಜಿಕ ರೀತಿ ನೀತಿಗಳ ಬಗೆಗಿನ ಅವ್ಯಕ್ತ ಭೀತಿ ಇವುಗಳು ನೆಲೆನಿಂತಿರಬಹುದು. ಉದಾಹರಣೆಗೆ ಮುರಗೋಡು ನಂಜಪ್ಪನಲ್ಲಿ ಕಂಡುಬರುವ ಲೈಂಗಿಕ ('ಗೂಳಿ') ವರ್ತನೆ ಆತನ ಹಿಂಸಾನಂದಿ (sadistic) ಪ್ರವೃತ್ತಿಯ ಅಭಿವ್ಯಕ್ತಿ ಎಂದು ಹೇಳಬಹುದು. ಅದೇ ರೀತಿ ಸ್ತ್ರೀಪಾತ್ರಧಾರಿ ಶೀನ ಮಾತನಾಡಿ ಆಸೆ ತೀರಿಸಿಕೊಳ್ಳುವ ವರ್ಗಕ್ಕೆ ಸೇರಿದವನೆಂಬುದು ಆತನ 'ಗುಬ್ಬಚ್ಚಿ' ವರ್ತನೆಯಿಂದ ವೇದ್ಯವಾಗುತ್ತದೆ. ಕಾಮವಾಂಛೆಯ ಬೆಳವಣಿಗೆಯ ಹಂತದಲ್ಲಿ ಅವನು 'ಬಾಯಿರತಿ' (oral)ಯ ಹಂತದಲ್ಲಿಯೇ ಉಳಿದಿರುವ ಸಂಭವವೇ ಎಂದು ಮನೋವಿಶ್ಲೇಷಣಾ ಸಿದ್ಧಾಂತವನ್ನು ಆಧರಿಸಿ ನಾವು ಹೇಳಬಹುದು. ಆದರೆ ಇಂತಹ ವರ್ತನೆಗಳನ್ನು ಚಿತ್ರಿಸುವಾಗ ಕಾರಂತರು 'ಕಾಮವಾಂಛೆ' ಸಿದ್ಧಾಂತವನ್ನು ಬಳಸಿಕೊಂಡಿದ್ದಾರೋ ಇಲ್ಲವೋ ಹೇಳುವುದು ಕಷ್ಟ. ಆದರೆ ಸೂಕ್ಷ್ಮವೇದಿಯಾದ ಅವರು

ಮಾನವ ಸ್ವಭಾವದ ಅವಲೋಕನದಿಂದಲೇ ಅಂತಹ ಪಾತ್ರಗಳನ್ನು ಸೃಷ್ಟಿಸಿರಬಹುದು. ಹಾಗೆಯೇ, ಮರಳಿ ಮಣ್ಣಿಗೆ ಕಾದಂಬರಿಯ ರಾಮನ ಪಾತ್ರವನ್ನು ಮನೋವಿಶ್ಲೇಷಣೆಯ ದೃಷ್ಟಿಯಿಂದ ನೋಡಿದಾಗ 'ಈಡಿಪಸ್ ಭಾವಗ್ರಂಥಿ'1 (oedipus complex) ಕ್ರಿಯಾಶೀಲವಾಗಿರುವ ಛಾಯೆಯನ್ನು ಕಾಣುವುದು ಕಷ್ಟವಲ್ಲ. ದುಃಖಿನಿ ತಾಯಿಯೊಂದಿಗಿರುವ ಆತನ ನಿಕಟಪ್ರೇಮ ಸಂಬಂಧ, ಅವನ ಸುಪ್ತಚೇತನದಲ್ಲಿ ಮನೆ ಮಾಡಿಕೊಂಡಿರಬಹುದಾದ 'ಸುರಕ್ಷಾಗತ್ಯ' (security need) ವನ್ನೂ ಸೂಚಿಸಬಹುದು. ಕಾರಂತರೇ ಒಂದು ಕಡೆ ಈ ಅಗತ್ಯದ ಪ್ರಸ್ತಾಪ ಮಾಡಿದ್ದಾರೆ. ಜಗತ್ತಿನ ಜಂಜಾಟದಿಂದ ಪಾರಾಗಲು ಅತ್ಯಂತ ಸುರಕ್ಷಿತ ಸ್ಥಾನವೆಂದರೆ ತಾಯಿಯ ಗರ್ಭ. ಅಲ್ಲಿದ್ದಾಗಿನ ನೆಮ್ಮದಿಭಾವ ಮತ್ತು ಅಂತಹ ನೆಮ್ಮದಿಯನ್ನು ಸದಾ ಪಡೆದಿರಬೇಕೆಂಬ ಇಚ್ಛೆ, ಕೆಲವರಲ್ಲಿ, ದೊಡ್ಡವರಾದ ಮೇಲೂ ಮನೆಮಾಡಿಕೊಂಡಿರುತ್ತದೆ. ಎಂಬುದು ಮನೋವಿಶ್ಲೇಷಣಾತ್ಮಕ ಪ್ರಾಕ್ಕಲ್ಪನೆ.]

ಅಧಿಕೃತ ದಾಂಪತ್ಯ ಜೀವನದಲ್ಲಿ ಪಡೆಯುವ ಕಾಮಸಂತೃಪ್ತಿಗಿಂತ ದಾಂಪತ್ಯ ಜೀವನದ ಹೊರಗೆ ಅನ್ಯೋನ್ಯವಾದ ಸ್ತ್ರೀ-ಪುರುಷ ಸಂಬಂಧಗಳಲ್ಲಿ ದೊರೆಯುವ ರತಿಸುಖ ಆಪ್ಯಾಯಮಾನವಾದುದು ಎಂಬ ಭಾವನೆ ಅವರ ಕಾದಂಬರಿಗಳನ್ನು ಓದುವವರಲ್ಲಿ ಉಂಟಾಗುವ ಸಾಧ್ಯತೆ ಇಲ್ಲದಿಲ್ಲ. ಅಂತಹ ಅನ್ಯೋನ್ಯ ಸಂಬಂಧಗಳನ್ನು ಪಡೆಯಲು ಕೆಲವರಿಗೆ ಮಾತ್ರ ಅವಕಾಶ. ಅಂತಹ ಅವಕಾಶಗಳನ್ನು ಕಲ್ಪಿಸುವಲ್ಲಿ ಕಾರಂತರು ಬೇರೆ ಬೇರೆ ಮಾನದಂಡಗಳನ್ನು ಬಳಸಿರುವುದನ್ನು ಕಾಣಬಹುದು. ವೇಶ್ಯೆಗೆ ಸುಖದಾಯಿಯಾಗುವಂತಹ ಸಂಬಂಧ ಗೃಹಿಣಿಗೆ ನಿಷಿದ್ಧ. ಆದರೆ ಗೃಹಸ್ಥ ಮತ್ತು ವಿಟ ಇಬ್ಬರಿಗೂ ಅಂತಹ ನಿಷೇಧವಿಲ್ಲ. ಮೈಮನಗಳ ಸುಳಿಯಲ್ಲಿನ ಮಂಜುಳೆಗೆ, ಆಕೆಗೆ ಆಪ್ಯಾಯಮಾನವೆನಿಸುವ ಅನುಭವವನ್ನು ಪಡೆಯಲು ಇರುವ ಅವಕಾಶಗಳು ಹಲವು. ಉದಾಹರಣೆಗೆ, ಹದವರಿತು ಮುಟ್ಟಿದರೆ ವೀಣೆಯಂತೆ ನುಡಿಯುವ ಮೈಮನವುಳ್ಳ, ಮಠಾಧೀಶನನ್ನು ಅವಳು ಪಡೆಯಬಲ್ಲಳು. ಹಾಗೆಯೇ ಅಳಿದ ಮೇಲೆ" ಕಾದಂಬರಿಯ ನಾಯಕ ಯಶವಂತರಾಯನಂಥ, ಕಾರಂತರ ಅಚ್ಚುಮೆಚ್ಚಿನ ಪಾತ್ರ 'ಸರಸಿ'ಯಂಥವಳ ಆಯ್ಕೆ ಮಾಡಿಕೊಳ್ಳಬಹುದು. ಅವರಿಬ್ಬರ ವರ್ತನೆ ಓದುಗರ ಸಂಪೂರ್ಣ ಸಹಾನುಭೂತಿಗೆ ಪಾತ್ರವಾಗುತ್ತದೆ. ಆದರೆ 'ಕಮಲೆ', ಯಶವಂಥರಾಯನ ಹೆಂಡತಿ, ತನ್ನ ಪ್ರಾಕಿನ ವಯಸ್ಸಿನಿಂದಲೂ, ತಾನು ಮೆಚ್ಚಿದವನೊಡನೆ ಕಾಮಜೀವನ ನಡೆಸುವುದು ಹೇಯವೆನಿಸುತ್ತದೆ. ಸಾಂಪ್ರದಾಯಿಕ ದೃಷ್ಟಿಯಿಂದ ಇದು 'ಸರಿ' ಎನಿಸಬಹುದಾದರೂ, ಕಮಲೆಯ ಬಗ್ಗೆ ಓದುಗನಿಗೆ ತಿರಸ್ಕಾರ ಮತ್ತು

---

6 ಭಾರತೀಯ ಸಂಸ್ಕೃತಿಯಲ್ಲಿಯೂ ನಿದರ್ಶನಗಳಿಗೆ ಕೊರತೆಯಿಲ್ಲ.

ಅಸಹ್ಯ ಭಾವಗಳು ಮೂಡುವಷ್ಟು ತೀವ್ರತರವಾಗಿ ಕಾರಂತರು ಚಿತ್ರಿಸಿರುವುದು ನಮ್ಮನ್ನು ವಿಚಾರಮಗ್ನರಾಗಿಸುತ್ತದೆ. ಇಬ್ಬಗೆಯ ಮಾನದಂಡಗಳನ್ನು ಬಳಸುವ ಕಾರಂತರು ಮೂಲತಃ ಸಂಪ್ರದಾಯಬದ್ಧರೇ ಅಲ್ಲವೆ? ಎಂಬ ಶಂಕೆ ಮೂಡುವುದು ಸಹಜ. ಆದರೆ, ಅತ್ಯಾಚಾರ, ಅನಾಚಾರ, ವೇಶ್ಯಾವೃತ್ತಿ, ವಿಕೃತ ಕಾಮಗಳಂತಹ ಲೈಂಗಿಕ ಸಮಸ್ಯೆಗಳ ಪರಿಹಾರಕ್ಕೆ ಕಾರಂತರು ಮುಕ್ತ ಕಾಮಜೀವನವನ್ನು ಪ್ರತಿಪಾದಿಸುತ್ತಿದ್ದಾರೋ ಏನೋ ಎಂಬ ಭಾವನೆ ಬರುವಂತಹ ಪ್ರಸಂಗಗಳ ಚಿತ್ರಣವನ್ನು ನೋಡಿದಾಗ ಸಂಪ್ರದಾಯವನ್ನು ವಿರೋಧಿಸಿ ನಿಲ್ಲುವ ಧೋರಣೆ ಕಂಡುಬಂದರೂ, ಅವರ ಧೋರಣೆ 'ಅನುಕೂಲ ಸಿಂಧು'ವನ್ನು ಆಶ್ರಯಿಸಿರುವುದನ್ನು ಕಾಣುವುದು ಕಷ್ಟವಲ್ಲ. ಅವರು ಸೃಷ್ಟಿಸಿರುವ 'ವಿಟ'ರ ವರ್ತನೆಯನ್ನು ಪರಿಶೀಲಿಸಿದಾಗ ವಿಚಿತ್ರವೆನಿಸುವ ಅಂಶಗಳು ಹೊರಬೀಳುತ್ತವೆ. ಉದಾಹರಣೆಗೆ, ಒಂದು ಜಾತಿಗೆ ಸೇರಿದ ವಿಟರು, ಷಂಡರಾದರೂ ಸರಿ ಉತ್ತಮರೆನಿಸಿದರೆ (ಉದಾ: ಉಲ್ಲಾಳರು), ಇತರ ಜಾತಿಗಳಿಗೆ ಸೇರಿದ ಹಲವರು ಅಧಮರೆನಿಸುತ್ತಾರೆ (ಉದಾ: ಮುರಗೋಡು ನಂಜಪ್ಪ). ಒಟ್ಟಿನಲ್ಲಿ ಕಾರಂತರು ಸಂಪ್ರದಾಯಬದ್ಧರೋ ಅಥವಾ ಸಂಪ್ರದಾಯ ವಿರೋಧಿಗಳೋ ಎಂಬುದನ್ನು ನಿರ್ಧರಿಸಲು ಹೆಚ್ಚು ಸೂಕ್ಷ್ಮತರ ಪರಿಶೀಲನೆ ಆಗತ್ಯವೆನಿಸುತ್ತದೆ.

ಮುಕ್ತ ಕಾಮಜೀವನದ ಬಗ್ಗೆಯೇ ಒಂದು ವೇಳೆ, ಕಾರಂತರ ಒಲವಿದೆ ಎಂದು ನಾವು ತಿಳಿಯುವುದಾದರೆ, ಜಟಿಲವೂ, ತೀವ್ರತರವೂ ಆಗಿರುವ ಒಂದು ಸಮಸ್ಯೆಗೆ ಅವರು ಬಹು ಸರಳ ಸೂತ್ರವನ್ನು ಸೂಚಿಸುತ್ತಾರೆಂದು ಹೇಳಬೇಕಾಗುತ್ತದೆ. ಮುಕ್ತ ಕಾಮಜೀವನದಿಂದ ಆಗಬಹುದಾದ ಒಳ್ಳೆಯದಕ್ಕಿಂತ, ಕೆಟ್ಟದ್ದೇ ಹೆಚ್ಚೆಂಬುದು ಮಾನವಶಾಸ್ತ್ರೀಯ ಮತ್ತು ಇತರ ಅವಲೋಕನಗಳಿಂದ ಹೊರಬಿದ್ದಿರುವ ಅಂಶ. ಭಾರತೀಯ ಧಾರ್ಮಿಕ ಜೀವನದಲ್ಲಿಯೂ ಅಲ್ಲಲ್ಲಿ ಮುಕ್ತ ಕಾಮಜೀವನವಿದ್ದು, ಅಹಿತಕರ ಪರಿಣಾಮಗಳಿಗೆ ಎಡೆಮಾಡಿಕೊಟ್ಟ ಸಂಗತಿಗಳೂ ಕಂಡುಬರುತ್ತವೆ. ಆದರೆ ಪ್ರಾಯೋಗಿಕ ತಥ್ಯಾಂಶಗಳು ದೊರೆತಿಲ್ಲ. ಸಾಮಾಜಿಕ ರೀತಿನೀತಿಗಳು ಪ್ರಯೋಗಗಳಿಗೆ ಅನುಕೂಲಕರವಾಗಿಲ್ಲದಿರುವುದು ಇದಕ್ಕೆ ಪ್ರಮುಖ ಕಾರಣ.

ಕಾಮಜೀವನ ಸಮಸ್ಯೆ ಅಷ್ಟು ಸರಳವೆನಿಸದು. ಇಂದ್ರಿಯ ಸಂತೃಪ್ತಿಗಳಲ್ಲೆಲ್ಲಾ, ಅದರಲ್ಲಿಯೂ ಮಾನವನ ಮಟ್ಟದಲ್ಲಿ ಸ್ಪರ್ಶನೇಂದ್ರಿಯ ಸಂತೃಪ್ತಿಯು ಹೆಚ್ಚು ಜಟಿಲವಾದುದೂ, ತೀವ್ರತರವಾದುದೂ ಎಂದೆನಿಸುತ್ತದೆ. (ರತಿಸುಖ ಸರ್ವೇಂದ್ರಿಯ ಸಂತೃಪ್ತಿಕರವಾದುದು ಎಂದು ಹೇಳುವುದೂ ಉಂಟು). ಇತರ ಇಂದ್ರಿಯಗಳ ಸಂತೃಪ್ತಿಗೆ ಬೇಕಾದ ವಸ್ತು ವಿಷಯಗಳು ಭೌತಿಕವೆನಿಸಿದರೆ, ಸ್ಪರ್ಶನೇಂದ್ರಿಯ ಸಂತೃಪ್ತಿಗೆ ಇತರ ಜೀವಿಗಳೊಂದಿಗೆ ನೇರ ದೈಹಿಕ ಸಂಪರ್ಕವಿರಬೇಕಾಗುತ್ತದೆ. ಮತ್ತೊಂದು ಜೀವಿಯೊಡನೆ ಕೂಡುವ ಅದಮ್ಯ ಇಚ್ಛೆಯೇ ಸ್ಪರ್ಶನ ಸುಖದ ಮಹತ್ವವನ್ನು ಬಹುಶಃ ಹೆಚ್ಚಿಸಿರಬೇಕೆನಿಸುತ್ತದೆ. ಅಲ್ಲದೆ ಇತರ ಎಲ್ಲಾ ಇಂದ್ರಿಯಗಳಿಗಿಂತ ಸ್ಪರ್ಶ

ನೇಂದ್ರಿಯವು ಜೀವ ವಿಕಾಸಾತ್ಮಕವಾಗಿಯೂ ಹೆಚ್ಚು ಪುರಾತನವಾದುದಲ್ಲದೆ, ಹೆಚ್ಚು ಮೂಲಭೂತವಾದುದು. ಒಂದು ದೃಷ್ಟಿಯಿಂದ ನೋಡಿದಾಗ ಇತರ ಎಲ್ಲಾ ಇಂದ್ರಿಯಗಳ ಸತ್ವಗಳೂ ಈ ಇಂದ್ರಿಯದಲ್ಲಿ ಅಂತರ್ಗತವಾಗಿವೆ ಈ ಕಾರಣ ದಿಂದಾಗಿಯೇ ಬಹುಶಃ ಲೈಂಗಿಕ ಶಕ್ತಿಯನ್ನು, ಕ್ರಿಯೆಯನ್ನು ಹೇಳುವಲ್ಲಿ ಕಾರಂತರು 'ಹಳೆಯ ಭೂತ' ಎಂಬ ಸಂಕಲ್ಪನೆಯನ್ನು ಪ್ರಯೋಗಿಸಿರುವುದು. ಈ ಮೊದಲೇ ನಾನು ಪ್ರಸ್ತಾಪಿಸಿದಂತೆ, ಈ ಹಳೆಯ ಭೂತದ ಇರುವಿಕೆಯನ್ನು ಕಾರಂತರು ಸ್ವಪ್ನದ ಹೊಳೆ'ಯಲ್ಲಿ ಹೆಚ್ಚು ನಾಟಕೀಯವಾಗಿ ಚಿತ್ರಿಸಿದ್ದಾರೆ :

ಸೊಪ್ಪಿನ ಹೊಳೆಯ ಸಮೀಪದ ಕಂಬದಂತಿದ್ದ ಬಂಡೆಯ ಬಳಿ ಕಿಟ್ಟು, ಶಂಕರ ಮತ್ತು ಮಾದ ಇವರು ನಡೆಸಿದ, ನಾಗಮಂಡಲ ಸಮಾರಂಭದ ಅಣುಕು ಅಭಿನಯ ಸಂದರ್ಭದಲ್ಲಿ, ನರ್ತಿಸುತ್ತಿದ್ದ ಕಿಟ್ಟು ಆವೇಶ ಭರಿತನಾಗಿ, ವಿಚಿತ್ರವಾಗಿ ಮಾತನಾಡಲು ತೊಡಗುತ್ತಾನೆ. ಯಾರು ನೀನೆಂದರೆ, 'ನಾನು ಹಳೆಯ ಭೂತ' ಎನ್ನುತ್ತಾನೆ. 'ನಾನು ಬಂದು ಸಾವಿರ ಸಾವಿರ ವರ್ಷವಾಯಿತು ಎನ್ನುತ್ತಾನೆ...ನನಗೆ ಲಂಚಬೇಡ, ರುಂಡ ಬೇಡ, ಮುಂಡಬೇಡ, ನೀನು ಬೇಕು' ಎಂದೆನ್ನುತ್ತಾನೆ. ಅದೇ ಕಿಟ್ಟನಿಗೆ ಮತ್ತೊಮ್ಮೆ ಅದರ ಮುಂದೆ ಅನಾಗರಿಕ ನಗ್ನ ಹೆಣ್ಣು ಗಂಡುಗಳು ಕುಣಿಯುತ್ತಾ ರತಿ ಕೇಳಿ ಯಲ್ಲಿ ತೊಡಗಿರುವುದು ಕಾಣಿಸಿಕೊಳ್ಳುತ್ತದೆ. ಇಂತಹ ಒಂದು ದೃಶ್ಯವನ್ನೇ ಮೂಕ ಜ್ಜಿಯೂ ಕಾಣುತ್ತಾಳೆ. ನಾಗನ ಬರೆಯಿಂದ ತಂದ ಸಣ್ಣ ಗುಂಡಿನಂತಹ ವಸ್ತುವೊಂದನ್ನು ಆಕೆಯ ಅಂಗೈ ಮೇಲಿಟ್ಟಾಗ ನಾಗರೀಕ ಪ್ರಪಂಚಕ್ಕೆ ಅಸಹ್ಯವೆನಿಸಬಹುದಾದಂತಹ ಚಿತ್ರವಿಚಿತ್ರವಾದ ರತಿಕ್ರೀಡೆಗಳನ್ನು, ವಯೋಮಾನ ಹಾಗೂ ರಕ್ತಸಂಬಂಧ ಮುಕ್ತ ಗಂಡು ಹೆಣ್ಣುಗಳ ಮಿಲನವನ್ನು ಕಾಣುತ್ತಾಳೆ. ತಮ್ಮ ಬರವಣಿಗೆಗಳಲ್ಲಿ ಮಾತ್ರ ವಲ್ಲದೆ ತಮ್ಮ ಭಾಷಣಗಳಲ್ಲಿಯೂ ಲಿಂಗ ಸಂಕೇತದ ಬಗ್ಗೆ ಕಾರಂತರು ಆಗಾಗ್ಗೆ ಪ್ರಸ್ತಾಪಿಸಿದ್ದನ್ನು ನಾನು ಕೇಳಿದ್ದೇನೆ. ಅಂದಮೇಲೆ ಕಾರಂತರ ವಿಚಾರ ಸರಣಿಯ ಬಗ್ಗೆ ನನ್ನ ಅನಿಸಿಕೆ ಹೀಗೆ, ಹಳೆಯ ಭೂತವೆಂದರೆ ಲೈಂಗಿಕಕ್ರಿಯೆ. ಆ ಕ್ರಿಯೆಯ ಸಂಕೇತ ಲಿಂಗ, ಲಿಂಗವೇ ಸೃಷ್ಟಿಕರ್ತ, ಅದಕ್ಕಾಗಿ ಲಿಂಗದ ಆರಾಧನೆ ಅನಾದಿ ಕಾಲದಿಂದಲೂ ಬೆಳೆದು ಬಂದಿದೆ, ಕಾರಂತರ ಪ್ರಕಾರ. ಮಾನವ ಜೀವನದಲ್ಲಿ ಲೈಂಗಿಕ ಕ್ರಿಯೆಯ ಪ್ರಾಮುಖ್ಯತೆಯನ್ನು ಇನ್ನೂ ಒತ್ತಿ ಹೇಳಬೇಕಾದರೆ, ನಾನು ಈಗಾಗಲೇ ಪ್ರಸ್ತಾಪಿಸಿದಂತೆ, ಆ ಕ್ರಿಯೆ, ಜೀವಿಗೆ ಮೂಲಭೂತವಾದ ಇಂದ್ರಿಯ ಸಂತೃಪ್ತಿಗೆ ಸಂಬಂಧಿಸಿದ್ದು. ಆ ಇಂದ್ರಿಯ ಸಂತೃಪ್ತಿ ಬಹು ಕಷ್ಟಸಾಧ್ಯ, ಅಷ್ಟೇಕೆ ಅಸಾಧ್ಯವೆಂದೂ ಹೇಳಬಹುದು. ಒಂದು ಪಕ್ಷ ಸಾಧ್ಯವಾದರೂ ಅದು ಕೇವಲ ತಾತ್ಕಾಲಿಕ ಅಷ್ಟೆ. ಈ ಕಾರಣದಿಂದಾಗಿಯೇ ಗಂಡು ಹೆಣ್ಣುಗಳ ಕಾಮ ಕೇಳಿ ವೈವಿಧ್ಯ ಪೂರ್ಣವಾಗುವುದು, ಕೆಲವು ವೇಳೆ ವಿಪರೀತವೆನಿಸುವುದು, ಅಲ್ಲದೆ ಅಂತರಂಗ ಹಾಗೂ ಬಾಹ್ಯ ಸಂಯಮಗಳು ಕಡಿದು ಬಿದ್ದಾಗ, ಚಿತ್ರವಿಚಿತ್ರವಾದ ವಿಕೃತ ರೂಪತಾಳಿ ಭೀಕರತೆ ಹುಟ್ಟಿಸುವುದು. ಲೈಂಗಿಕ ಕ್ರಿಯೆ, ಅನಂತರಾಮಯ್ಯ ಮತ್ತು ಮಾಣಿ ರಾಮ ದಾಸರ ನಡುವಣ ಸಲಿಂಗರತಿಯಂತೆ, ವಿಕೃತ ರೂಪತಾಳಲು ಕಾರಣವು ಸೂಚ್ಯವಾಗಿ

ಕಾರಂತರ ಮಾತುಗಳಲ್ಲೇ ಅಡಗಿದೆ. ಕಿಟ್ಟನ ಮೈಮೇಲೆ ಬಂದ ಹಳೆಯ ಭೂತವನ್ನು, ನೀನು ಗಂಡೋ, ಹೆಣ್ಣೋ ಎಂದು ಕೇಳಿದಾಗ, 'ನಾನು ಗಂಡೂ ಅಲ್ಲ ಹೆಣ್ಣು ಅಲ್ಲ' ಎಂದು 'ಹೇಳುತ್ತದೆ. ಜೈವಿಕವಾಗಿಯೂ, ಮಾನಸಿಕವಾಗಿಯೂ ಮಾನವನು ಉಭಯ ಲಿಂಗಿ. 'ಅರ್ಧನಾರೀಶ್ವರ' ಸಂಕಲ್ಪನೆಯಲ್ಲಿಯೇ ಈ ಅರ್ಥ ಅಡಗಿದೆ. ಸತ್ಯ ಹೀಗಿರ ಬೇಕಾದರೆ ಮಾನವನ ಲೈಂಗಿಕಸಂಬಂಧಗಳ ಪ್ರಕೃತಿ-ವಿಕೃತಿಗಳಿಗೆ ಸೀಮೆ ಇಷ್ಟೆಂದು ಹೇಳುವುದು ಕಷ್ಟ. ಮುಕ್ತ ವಾತಾವರಣದಲ್ಲಿ ತನ್ನ ಅಟ್ಟಹಾಸ ತೋರಿಸಿ ಸರ್ವನಾಶ ಮಾಡಬಲ್ಲಂತಹ ಈ ಶಕ್ತಿಯ ಮೇಲೆ ಸಾಪೇಕ್ಷವಾಗಿ ಸೂಕ್ತ ನಿಯಂತ್ರಣಗಳ ಅಗತ್ಯ ಎಂದೆಂದಿಗೂ ಇದೆ. ಅಂತಹ ನಿಯಂತ್ರಣಗಳನ್ನು ಕಾಲದೇಶಗಳ ಸ್ಥಿತಿಗತಿಗಳಿಗೆ ಅನು ಗುಣವಾಗಿ ರೂಪಿಸಿ ಕಾರ್ಯರೂಪಕ್ಕೆ ತರುವುದು ಆಯಾಯ ಕಾಲದೇಶಗಳ ಜನರಿಗೆ ಬಿಟ್ಟ ವಿಷಯ. ಯಾವಾಗಲಾದರೂ ನಮ್ಮ ತಲೆಯಲ್ಲಿ ಸುಳಿಯಬಹುದಾದ ನಿಯಂತ್ರಣವೊಂದು ಎಲ್ಲಾ ಕಾಲಕ್ಕೂ ದೇಶಕ್ಕೂ ಅನ್ವಯಿಸಬಲ್ಲದೆಂಬುದು ಕೇವಲ ಭ್ರಮೆ. ಆದರೂ ಕೆಲವು ಸಾಮಾನ್ಯ ನಿಯಂತ್ರಣಗಳು ಕಾಲದೇಶಾತೀತವಾಗುವ ಸಾಧ್ಯತೆಯೂ ಇದೆ. ಏಕೆಂದರೆ, ಕಾಮವಾಂಛೆ ಯಾವುದೇ ಜನಾಂಗಕ್ಕೆ, ದೇಶಕ್ಕೆ, ಕಾಲಕ್ಕೆ ಸೀಮಿತವಾದುದಲ್ಲ. ಅದು ಎಲ್ಲಾ ಮಾನವಜೀವಿಗಳಲ್ಲಿಯೂ ಕಂಡುಬರುವ ಯೂನಿವರ್ಸಲ್ ಪ್ರಚೋದನೆ. ಸಮಸ್ತ ಮಾನವರಿಗೂ ಅನ್ವಯಿಸುವಂತಹ ಕೆಲವು ನಿಯಂತ್ರಣ ಸೂತ್ರಗಳು, ಜಗತ್ತಿನ ಎಲ್ಲಾ ಶ್ರೇಷ್ಠ ಮತಧರ್ಮಗಳ ನೀತಿಶಾಸ್ತ್ರದಲ್ಲಿ ಕಂಡುಬರುವುದು ಗಮನಾರ್ಹ ಸಂಗತಿ.

## ಪಾತ್ರ ಸೃಷ್ಟಿ

ತಾವು ಸೃಷ್ಟಿಸಿದ ರಂಗಮಂಟಪದಲ್ಲಿ, ತಾವು ಕಲ್ಪಿಸಿದ ಪಾತ್ರಗಳು ಯಶಸ್ವಿಯಾಗು ವಂತೆ ಕಾರಂತರು ಬಹುಮಟ್ಟಿಗೆ ಎಚ್ಚರ ವಹಿಸಿದ್ದಾರೆ. ಇಲ್ಲಿ ಅವರ ಕಲಾವಂತಿಕೆ ಎಂಥವರನ್ನೂ ಮೆಚ್ಚಿಸುವಂತಿದೆ. ಇದಕ್ಕೆ ಬಹುಶಃ ಅವರಲ್ಲಿರುವ ಅದ್ಭುತವಾದ ನಟನಾ ಪ್ರತಿಭೆ ಕಾರಣವಿರಬಹುದು. ತಮಗೆ ಹೆಚ್ಚು ಪ್ರಿಯವೆನಿಸುವ, ಯಶವಂತ ರಾಯ, ಗೋಪಾಲಯ್ಯ, ಕೃಷ್ಣರಾಯ, ಚೋಮ, ಮಂಜುಳೆ, ಪಾರೋತಿ, ಮುಂತಾದ ಪಾತ್ರಗಳನ್ನೂ ತಮಗೆ ಅಷ್ಟು ಹಿತವೆನಿಸದ ಲಚ್ಚ, ಗಾಂವಕರ, ಮುರಗೋಡು ನಂಜಪ್ಪ, ಕಮಲೆ ಮುಂತಾದ ಪಾತ್ರಗಳನ್ನೂ, ಪರಿಪೂರ್ಣವೋ ಎಂಬಂತೆ ಚಿತ್ರಿ ಸಿದ್ದಾರೆ. ಇಂತಹ ಪಾತ್ರಗಳ ಬಗ್ಗೆ ಈಗಾಗಲೇ ಹಲವು ವಿಮರ್ಶಕರು ವಿಶ್ಲೇಷಣೆ ಮಾಡಿದ್ದಾರೆ, ಕಾರಂತರಿಗೆ ಸಲ್ಲಬೇಕಾದ ಅಭಿನಂದನೆ ಸಲ್ಲಿಸಿದ್ದಾರೆ. ಈ ಪಾತ್ರಗಳ ವ್ಯಕ್ತಿತ್ವವು ಓದುಗರಿಗೆ ಹೆಚ್ಚು ಸ್ಫುಟಗೊಳ್ಳುವಂತೆ ಮಾಡಲು ಕಾರಂತರು ಬಳಸಿರುವ 'ಅಭಿಮತ' ಮತ್ತು 'ಪ್ರತಿಕ್ರಿಯಾ' ತಂತ್ರಗಳು ಮೆಚ್ಚತಕ್ಕವು. ಉದಾಹರಣೆಗೆ, ಯಶವಂತರಾಯನ ವ್ಯಕ್ತಿತ್ವವು ಸ್ವಂತ ನಿವೇದನೆಯು, ಇತರರ ಮೆಚ್ಚುಗೆಯ ಮಾತು ಗಳ, ಕೃತಜ್ಞತಾ ಭಾವನೆಗಳ ಮೂಲಕ ಸುಂದರ ರೂಪತಾಳಿ ನಿಲ್ಲುತ್ತದೆ. ಜೀವನದ ಸವಾಲುಗಳನ್ನು ಎದುರಿಸಿ, ಜಯಿಸಿ ವಿಶೇಷ ಗಮನ ಕೊಟ್ಟಿದ್ದಾರೆ. ಸ್ವಲ್ಪಮಟ್ಟಿಗೆ

ಕಾರಂತರೇ ಅವಳಲ್ಲೂ, ರಾಮನಲ್ಲೂ ತಮ್ಮ ಅಭಿವ್ಯಕ್ತಿ ಪಡೆದಿದ್ದರೆಂದೂ, ಹಾಗೆಂದು ಕಾರಂತರೇ ಹೇಳಿದರೆಂದೂ, ವಿಮರ್ಶಕ ಅನಂತನಾರಾಯಣರು ಹೇಳುತ್ತಾರೆ. ಅಲ್ಲದೆ ನಾಗವೇಣಿಯಂತಹ ಪಾತ್ರಸೃಷ್ಟಿಗೆ ತಮ್ಮ ತಾಯಿಯೇ ಮಾದರಿ ಎಂದು 'ಮರಳಿ ಮಣ್ಣಿಗೆ, ಕಾದಂಬರಿಯ ಮುನ್ನುಡಿಯಲ್ಲಿಯೇ ಕಾರಂತರು ಹೇಳಿದ್ದಾರೆ. ಅಷ್ಟು ಆಸ್ಥೆವಹಿಸಿ ರೂಪಿಸಿದರೂ ಆ ಪಾತ್ರ ಪರಿಪೂರ್ಣವಾಗಿ ಬೆಳೆಯದಂತೆ ತಡೆದದ್ದು ಕಾರಂತರ ಹಂಜಿಕೆಯೋ ಎಂಬ ಶಂಕೆ ಮೂಡುತ್ತದೆ. ನಾಗವೇಣಿಯ ಸೌಜನ್ಯಶೀಲತೆ, ವಾತ್ಸಲ್ಯಭಾವ, ಕಷ್ಟ ಸಹಿಷ್ಣುತೆಗಳಂತಹ ಉತ್ತಮ ಗುಣಗಳ ಜೊತೆ ಅವಳ ಹಠ ಮಾರಿತನ, ಹಂಗಿಗೆ ಒಳಗಾಗದ ಇಚ್ಛೆಗಳೂ ಉತ್ತಮ ಗುಣಗಳೆನಿಸುವಷ್ಟು ಸುಂದರ ವಾಗಿ ಚಿತ್ರಿತವಾಗಿವೆ. ಸಾಮಾಜಿಕ ಜೀವನ ಸಹಜೀವನವೆನಿಸಬೇಕಾದರೆ, ಪರರ ಹಂಗಿಗೆ ಒಳಗಾಗದೆ ಸಾಧ್ಯವೇ? ಎಂಬ ಪ್ರಶ್ನೆಯತ್ತ ಕಾರಂತರು ವಿಮುಖರಾಗಿ ದ್ದಾರೆಯೇ? ಎಂಬ ಶಂಕೆ ನಮ್ಮಲ್ಲಿ ಮೂಡಿದರೆ ಆಶ್ಚರ್ಯವಿಲ್ಲ. ತಮ್ಮ ಜೀವನ ಮೌಲ್ಯ ಗಳ ಹೊರೆಯನ್ನು ನಾಗವೇಣಿಯ ಮೇಲೆ ಹೊರಿಸಿ ಬಾಗಿಸಿದ್ದಾರೋ ಅಥವಾ 'ನಾಗವೇಣಿ'ಯ ಜೀವನ ಮೌಲ್ಯಗಳ ಭಾರವನ್ನು ತಾವೇ ಹೊತ್ತು ಬಾಗಿದ್ದಾರೋ ಹೇಳುವುದು ಕಷ್ಟ. ಮೇಲಾಗಿ ಪೂರ್ಣಯೌವ್ವನ ಕಾಲದಲ್ಲಿ, ಮೈಮನಗಳು ಅರಳಿ ನಿಂತಾಗ, ಇಚ್ಛೆ ತನಗರಿವಿಲ್ಲದೇ ಕೆರಳುವ ಕ್ಷಣಗಳ ನೈಜಚಿತ್ರ ನಾಗವೇಣಿಯಲ್ಲಿ ಕಂಡು ಬರದು. ಲುಚ್ಚತನಕ್ಕಾಗಿ ಲಚ್ಚ ಆಗಾಗ್ಗೆ ಬಂದಾಗ, ನಾಗವೇಣಿಯಲ್ಲಿ ತೀವ್ರತರ ತೃಷ್ಣೆ ಕಾಣಿಸಿಕೊಳ್ಳುತ್ತಿದ್ದುದನ್ನು ಕಾರಂತರು ಚಿತ್ರಿಸಿದ್ದಾರೆ ನಿಜ. ಆದರೆ ಈ ನೈಸರ್ಗಿಕ ಪ್ರೇರಣೆ ಇತರ ಸಂದರ್ಭಗಳಲ್ಲಿ ಪೂರ್ಣ ಮುಚ್ಚಿರುತ್ತಿತ್ತೇ? ಹಾಗಿಲ್ಲದಿದ್ದಲ್ಲಿ, ತನ್ನ ಸುತ್ತಮುತ್ತಲ ಗಂಡುಗಳನ್ನು ಕಂಡಾಗ ಆಕೆಯ ಎದೆ ಸ್ಪಂದಿಸುತ್ತಿರಲಿಲ್ಲವೇ? ಹಾಗಿದ್ದಲ್ಲಿ, ಅಂತಹ ಎದೆಯಾಟದ ಮೇಲೆ ಅವಳು ಹೇಗೆ ಪ್ರಭುತ್ವ ಸಂಪಾದಿಸಿದಳು? ಎಂಬ ಅಂಶಗಳ ಬಗ್ಗೆ ಸ್ವಲ್ಪ ಗಮನ ಕೊಟ್ಟಿದ್ದರೆ, ಈ ಪಾತ್ರದ ಮಹತ್ವ ಹೆಚ್ಚುತ್ತಿತ್ತು ಎಂಬುದು ನನ್ನ ಅನಿಸಿಕೆ. ಅಲ್ಲದೆ, ಶೀನಮಯ್ಯ, ಲಚ್ಚ, ಒರಟರು ಹುಟ್ಟಿ ಬೆಳೆದಂಥ ಊರಿನಲ್ಲಿ ಚೆಲುವೆ ನಾಗವೇಣಿಯ ಮೇಲೆ ಕಾಕದೃಷ್ಟಿ ಬೀಳಲಿಲ್ಲವೇ? ಹಾಗಿದ್ದಲ್ಲಿ, ಅವಳು ಹೇಗೆ ಅಂತಹ ದೃಷ್ಟಿಗಳ ಮೇಲೆ ತನ್ನ ಪ್ರಭುತ್ವ ಸಂಪಾದಿಸಿದಳು? ಎಂಬ ಅಂಶಗಳೂ ಚಿತ್ರಿತವಾಗಿದ್ದರೆ, ಈ ಪಾತ್ರಕ್ಕೆ ಇನ್ನೂ ಹೆಚ್ಚಿನ ಮೆರುಗು ಬರುತ್ತಿತ್ತು. ಆದರೆ ಕಾರಂತರ ಸಾಂಪ್ರದಾಯಿಕ ಮಡಿವಂತಿಕೆ ಇಲ್ಲಿ ಪ್ರಬಲ ಅಡ್ಡಿಯಾಗಿ ನಿಂತಂತಿದೆ.

ರಾಮನ ಪಾತ್ರ ಪರಿಪೂರ್ಣವಲ್ಲ ಎಂದು ಹೇಳಲು ಕಾರಣವಿಷ್ಟೆ. ಕಾರಂತರು ತಮ್ಮ ಆದರ್ಶವನ್ನು ಅವನ ಮೇಲೆ ಹೇರಿ ಅವನು ಬೆಳೆಯದಂತೆ ಮಾಡಿರುವುದು ಜೀವನದಲ್ಲಿ ಯಾವುದೇ ಸಂಕಟಕಾರಿ ಸವಾಲು ರಾಮನಿಗೆ ಎದುರಾಗುವುದಿಲ್ಲ. ಎದು ರಾಗುವ ಸಾಧ್ಯತೆ ಇದ್ದಾಗ ಆಕಸ್ಮಿಕಗಳು ಅವನಿಗೆ ರಕ್ಷೆ ಒದಗಿಸುತ್ತವೆ. ಮಾಧವನ ನೆರವು ಸಿಗದೆ, ಮದ್ರಾಸಿನಂಥ ನಗರದಲ್ಲಿ ಅವನು ಹೋರಾಡಿ ಜಯಶಾಲಿಯಾಗಿದ್ದರೆ ಅಜ್ಜನು ಬಚ್ಚಿಟ್ಟ ಪವನುಗಳು ಸಕಾಲದಲ್ಲಿ ಸಿಗದೆ, ಗೋಪಾಲಯ್ಯನಂತೆ ತನ್ನ ಪರಿ

ಶ್ರಮದಿಂದಲೇ ಕೃಷಿಕ್ಷೇತ್ರದಲ್ಲಿ ಯಶಸ್ಸು ಗಳಿಸಿದ್ದರೆ, ರಾಮ ಧೀಮಂತ ನೆನಿಸುತ್ತಿದ್ದ ಅಲ್ಲದೆ, ಆತನಲ್ಲಿದ್ದ ಸಂಗೀತ ಮತ್ತು ಕಲಾ ಪ್ರತಿಭೆಗಳು ಮೆಚ್ಚುವವರಿಲ್ಲದ ಕೋಡಿ ಯಂತಹ ಹಳ್ಳಿಯಲ್ಲಿ ತಮ್ಮ ಪರಿಪೂರ್ಣರೂಪ ಪಡೆಯಬಲ್ಲವು ಎಂದು ನಂಬು ವುದು ಕಷ್ಟ ಪಾಪ ಮುಂಬೈಯಂಥ ಜನಾರಣ್ಯದಲ್ಲಿ, ಕೆಲದಿನಗಳಲ್ಲೇ ತನ್ನ ಸಂಗೀತ ದಿಂದ ಶ್ರೇಷ್ಠ ಕಲಾವಿದೆಯೊಬ್ಬಳ ಮೆಚ್ಚುಗೆ ಪಡೆಯಲು ಸಮರ್ಥನಾದಂಥ ವ್ಯಕ್ತಿ, ತನ್ನ ಜೀವನ ನಿರ್ವಹಣೆಗಾಗಿ ಹಳ್ಳಿಗೆ ಹಿಂದಿರುಗುವ ಪ್ರಸಂಗಕ್ಕೆ ಬಹುಶಃ ,ಬೇರೆಯೇ ಕಾರಣ ಹುಡುಕಬೇಕಾದೀತು. ರಾಮನು 'ಮರಳಿ ಮಣ್ಣಿಗೆ' ಬರುವುದು ಆತನಲ್ಲಿ ಜೀವಂತನಾಗಿದ್ದ, ತಾಯಿಯ ಗರ್ಭ ಸೇರುವ ಉತ್ಕಟಕಾಂಕ್ಷೆಯ ಸಂಕೇತವೇ? ಎಂಬ ಶಂಕೆ ನಮ್ಮಲ್ಲಿ ಮೂಡುವುದು ಅಸಹಜವೆನಿಸದು.

'ಲಚ್ಚನ' ಪಾತ್ರಸೃಷ್ಟಿ, ಕಾರಂತರ ಸೂಕ್ಷ್ಮ ಅವಲೋಕನಶಕ್ತಿ ಹಾಗೂ ವಿಕೃತ ಮಾನಸ ವರ್ತನೆಯ ಬಗ್ಗೆ ಅವರಿಗಿರುವ [ಒಳನೋಟಗಳಿಗೆ ಜೀವಂತ ನಿದರ್ಶನ. ಲಚ್ಚನಂಥವರು ಅಂದು ವಿರಳವೆನಿಸಿದ್ದರೂ, ಇಂದು ನಮ್ಮ ಸುತ್ತಮುತ್ತ ಸಾಕಷ್ಟು ಮಂದಿ ಕಾಣಸಿಗುತ್ತಾರೆ: ಇಂಥವರನ್ನು 'ಸಮಾಜಗೇಡಿಗಳು', 'ಲೋಕಕಂಟಕರು', 'ವಿಕೃತ ಮಾನಸ ವ್ಯಕ್ತಿತ್ವವುಳ್ಳವರು' (psychopathatic personalities) ಎಂದು ಮನೋವಿಜ್ಞಾನಿಗಳು ಗುರುತಿಸಿದ್ದಾರೆ. ಹೆಚ್ಚು ಕುಶಲಮತಿಗಳಾದ ಈ ಜನರನ್ನು 'ನೈತಿಕ ಮೂಢರು' (moral Imbecileses) ಎಂದೂ ಕರೆಯಲಾಗಿದೆ. ಇಂಥವರು ಪೂರ್ಣ ಸ್ವಾರ್ಥಪರರು. ಇವರಿಗೆ ನೀತಿ-ಅನೀತಿಗಳ ಪರಿವೆಯಿಲ್ಲ. ತಮ್ಮ ಸ್ವಾರ್ಥ ಸಾಧನೆಗೆ ಹೆತ್ತವರಿಗೂ ಕೈಕೊಡಬಲ್ಲಂಥ ನೀಚರು ಈ ವ್ಯಕ್ತಿಗಳು. ಇವರಲ್ಲಿ ಪ್ರತಿಷ್ಠಿತ ವಕೀಲರು, ವೈದ್ಯರು, ವ್ಯಾಪಾರಿಗಳು, ಇಂಜನೀಯರುಗಳು, ಪತ್ರಕರ್ತರು, ಸಮಾಜ ಸೇವಕರು, ರಾಜಕಾರಣಿಗಳು ಅಷ್ಟೇಕೆ, ಶಿಕ್ಷಕರೂ ಸೇರಿರಬಹುದು. ಇಂತಹ ವ್ಯಕ್ತಿಗಳು ಬೆಳೆದು ದೊಡ್ಡವರಾಗಲು ಸಮಾಜದಲ್ಲಿ ನೆಲೆ ನಿಂತಿರುವ ಇಬ್ಬಂದಿತನವೇ ಪ್ರಮುಖ ಕಾರಣವಾಗುತ್ತದೆ. ಮಕ್ಕಳ ಬೆಳವಣಿಗೆಯ ಮೊದಲ ಐದು ವರ್ಷ ಗಳಲ್ಲಿಯೇ ಈ ಇಬ್ಬಂದಿತನ ರೂಪುಗೊಳ್ಳುತ್ತದೆ. ಲಚ್ಚನ ಬೆಳವಣಿಗೆಯಲ್ಲೂ ನಾವು ಇದನ್ನು ಗುರುತಿಸಬಹುದು. ಹಿರಿಯ ರಾಮ ಐತಾಳರ ಮತ್ತು ಅವರ ಇಬ್ಬರು ಹೆಂಡಂದಿರ ವರ್ತನೆಯಲ್ಲಿಯೇ, ಲಚ್ಚನನ್ನು ಅಮಾನುಷನನ್ನಾಗಿ ಮಾಡಿದ ವಿಷಬೀಜ ಹುದುಗಿದೆ. ಇದನ್ನು ಕಾರಂತರು ಗಮನಿಸಿದ್ದಾರೋ, ಇಲ್ಲವೋ ತಿಳಿಯದು. ಗಮನಿಸಿದ್ದರೂ, ಅದು ಸ್ಪಷ್ಟವಾಗಿಲ್ಲ. ಏಕೆಂದರೆ, ಲಚ್ಚನು ಎಲ್ಲರಿಗೂ ಅಸಹ್ಯ ಹುಟ್ಟಿಸುವಂತಹ ವ್ಯಕ್ತಿಯಾಗಿ ಮತ್ತು ಅವನ ಬಗ್ಗೆ ಯಾರಿಗೂ ಎಳ್ಳಷ್ಟೂ ಸಹಾನು ಭೂತಿ ಬರದಂತೆ ಚಿತ್ರಿತವಾಗಿರುವುದು, 'ಅವನ ವರ್ತನೆಗೆ ಅವನೇ ಸಂಪೂರ್ಣ ಹೊಣೆ. ಎಂಬ ಧೋರಣೆ ತೋರಿಸುತ್ತದೆ. ಐತಾಳರ ಮುಚ್ಚುಮರೆತನ, ಹೆಂಡಂದಿರಲ್ಲಿ ಭಿನ್ನ ಭೇದವೆಣಿಸುವ ಪ್ರವೃತ್ತಿ, ಕೃಪಣತೆ, ಮನೆಯ ಜನರನ್ನು ದನಗಳಂತೆ ಕಾಣುವುದು ಮುಂತಾದ ಗುಣಗಳು; ತಾಯಿ ಸತ್ಯಭಾಮೆಯಲ್ಲಿ ಪ್ರಕಟವಾಗುತ್ತಿದ್ದ ಸವತಿ

ಮಾತ್ಸರ್ಯ; ದೊಡ್ಡಮ್ಮ ಪಾರೋತಿಯ ಅತಿಲಾಲನೆ-ಪಾಲನೆ ಮುಂತಾದವು ಲಚ್ಚನ ಅಮಾನವೀಯ ಬೆಳವಣಿಗೆಗೆ ಪ್ರಮುಖ ಕಾರಣಗಳು. ಪಾಪ ಈ ಹೊಣೆಯನ್ನು ಕಾರಂತರು ಲಚ್ಚನ ಅಜ್ಜ-ಅಜ್ಜಿಯ ಮೇಲೆ ಹೆಚ್ಚು ಹೊರಿಸುತ್ತಾರೆ.

## ಪ್ರಾಚೀನ ಪ್ರಜ್ಞೆ

ಇಲ್ಲಿ ಅಪ್ರಸ್ತುತವೆನಿಸಬಹುದಾದರೂ 'ಮೂಕಜ್ಜಿಯ ಕನಸುಗಳು' ಕಾದಂಬರಿಯ ಬಗ್ಗೆ ಒಂದೆರಡು ಮಾತನ್ನು ಹೇಳಬೇಕೆನಿಸುತ್ತದೆ. ತಮ್ಮಲ್ಲೇ ಬೆಳೆದು ಬೇರೂರಿರುವ ಕೆಲವು ನಂಬಿಕೆಗಳು ಹಾಗೂ ವಿಚಾರಗಳಿಗೆ, ತಾವೇ ಸೃಷ್ಟಿಸಿದ ಒಂದು ಸಾಂಕೇತಿಕ ಪಾತ್ರದ ಅತೀಂದ್ರಿಯ ಕಾಣ್ಕೆಗಳ ಮೂಲಕ ಅನುಮೋದನೆ ಪಡೆಯುವ ಕಾರಂತರ ಧೋರಣೆ ಈ ಕಾದಂಬರಿಯಲ್ಲಿ ಎದ್ದು ಕಾಣುತ್ತದೆ. ಅವರು ಸೃಷ್ಟಿಸಿರುವ 'ಮೂಕಜ್ಜಿ' ಅವರ 'ಪ್ರಾಚೀನ ಪ್ರಜ್ಞೆ' ಇರಬಹುದೆಂಬುದು ನನ್ನ ತರ್ಕ. ಮಾನವ ಶಾಸ್ತ್ರ (Anthropology), ಮತ್ತು ಅತಿಮಾನಸಶಾಸ್ತ್ರ (para psychology) ಗಳಲ್ಲಿ ತಾವು ಪಡೆದಿರಬಹುದಾದ ಅಲ್ಪಸ್ವಲ್ಪ ಜ್ಞಾನವನ್ನು ಈ ಕಾದಂಬರಿಯಲ್ಲಿ ಕಾರಂತರು ತಮ್ಮ ವಿಚಾರ ಧಾರೆಯನ್ನು ಹರಿಸಿದ್ದಾರೆ ಎಂಬುದು ನನ್ನ ಅನಿಸಿಕೆ. ಅತೀಂದ್ರಿಯ ಜ್ಞಾನದ ಇರುವಿಕೆಯ ಬಗ್ಗೆ ವೈಜ್ಞಾನಿಕ ಆಧಾರ ಕಲ್ಪನೆಗಳನ್ನು ರೂಪಿಸುವುದಕ್ಕೆ ಅನುಕೂಲವಾಗುವಂತಹ ವಿವರಾಂಶಗಳನ್ನು ಒದಗಿಸಿ ಕೊಟ್ಟಿರುವುದು ನಿಜ. ಅಂತಹ ಶಕ್ತಿ ಹಾಗೂ ಅದರ ಕಾರ್ಯಾಚರಣೆಗಳ ಬಗ್ಗೆ ವೈಜ್ಞಾನಿಕ ನಿಲುವುಗಳು ಸಾಪೇಕ್ಷವಾಗಿ ಗಟ್ಟಿಯಾಗಿಲ್ಲ. ಆದರೆ ಮೂಕಜ್ಜಿಯ ಅತೀಂದ್ರಿಯ (clairvoyant) ಕಾಣ್ಕೆಗಳನ್ನು ಯಾವುದೇ ತಕರಾರಿಲ್ಲದೆ ಸ್ವೀಕರಿಸುವ ಕಾರಂತರ ಮನೋಭಾವ ವೈಜ್ಞಾನಿಕವೆನಿಸದು. ಇದು ಮೇಲು ನೋಟಕ್ಕೆ ನನಗೆ ಕಾಣುವ ಅಂಶ. ವಿವರವಾಗಿ ಪರಿಶೀಲಿಸಿದಾಗ ಕಾರಂತರ ವೈಜ್ಞಾನಿಕ ಮನೋಭಾವದ ಸತ್ಯಾಸತ್ಯತೆಯ ಬಗ್ಗೆ ಮಹತ್ವಪೂರ್ಣ ಅಂಶಗಳು ಹೊರಬೀಳುವ ಸಾಧ್ಯತೆಯಿದೆ.

## ಸಮಾಪ್ತಿ

ಕಾರಂತರು ನಮ್ಮೆಲ್ಲರ ಹೆಮ್ಮೆಯ ವ್ಯಕ್ತಿ ಎಂದು ಮೊದಲೇ ತಿಳಿಸಿದ್ದೇನೆ. ಅವರ ಕೃತಿಗಳನ್ನು ಅರ್ಥೈಸಲು ಅವರನ್ನು ಅರ್ಥಮಾಡಿಕೊಳ್ಳುವ ಅಗತ್ಯವೂ ಇದೆ. ಸಾಧಾರಣ ನೋಟಕ್ಕೆ ಅವರು ಹೆಚ್ಚು 'ಅಹಂ ಕೇಂದ್ರಿತ' ವ್ಯಕ್ತಿಯಾಗಿ ತೋರುತ್ತಾರೆ. ದೀರ್ಘ ಜೀವನಯಾತ್ರೆಯ ಫಲವಾಗಿ ಈಗಾಗಲೇ ಅವರಲ್ಲಿ ನೆಲೆನಿಂತಿರುವ ವಿಚಾರಗಳು, ಭಾವನೆಗಳು ಹಾಗೂ ಅಭ್ಯಾಸಗಳು ಅವರ ವಯೋಮಾನಕ್ಕನುಗುಣವಾಗಿದ್ದರೆ ಆಶ್ಚರ್ಯವಿಲ್ಲ. ವ್ಯಕ್ತಿಯು ಬೆಳೆದಂತೆಲ್ಲಾ ವಿಕಾಸವಾಗುವ ಶಕ್ತಿ ಸಾಮರ್ಥ್ಯಗಳು ಪ್ರೌಢಾವಸ್ಥೆಯಲ್ಲಿ ಕೆಲವು ವರ್ಷಗಳು ಒಂದು ಮಟ್ಟದಲ್ಲಿದ್ದು, ಅನಂತರ ವೃದ್ಧಾಪ್ಯ ಸಮೀಪಿಸಿದಂತೆಲ್ಲಾ ಕ್ರಮೇಣ ಕ್ಷೀಣಿಸುತ್ತಾ ಹೋಗುವುದು ಮಾನವ ವ್ಯಕ್ತಿವಿಕಾಸದ

ಸಹಜ ಪ್ರಕ್ರಿಯೆ, ಬುದ್ಧಿಶಕ್ತಿಯೂ ಸೇರಿದಂತೆ ಹಲವು ಶಕ್ತಿ ಸಾಮರ್ಥ್ಯಗಳು ವಯಸ್ಸಾದಂತೆ ಕ್ಷೀಣಿಸುತ್ತಾ ಹೋಗುತ್ತವೆ. ಅದರಂತೆಯೇ ಸೃಜನಶೀಲ ಶಕ್ತಿಯೂ ಕೂಡ ಒಂದು ಅವಧಿಯವರೆಗೆ ಮಾತ್ರ ಹೆಚ್ಚು ಜಾಗೃತವಾಗಿದ್ದು ಮುಂದೆ ಕ್ಷೀಣಿಸುತ್ತಾ ಹೋಗುವುದು ಬೆಳಕಿಗೆ ಬಂದಿದೆ. ಆದರೆ, ಯಾವ ಕ್ಷೇತ್ರದಲ್ಲಿ ಸೃಜನ ಶೀಲತೆ ಪ್ರವಹಿಸುತ್ತದೆ ಎಂಬುದನ್ನು ಅವಲಂಬಿಸಿ ಮೇಲಿನ ಅವಧಿಗಳು ನಿರ್ಧಾರ ವಾಗುತ್ತವೆ.[7] ಉದಾಹರಣೆಗೆ ಸಾಹಿತ್ಯದಲ್ಲಿ ಸೃಜನಶೀಲ ಶಕ್ತಿಯು ಅತ್ಯುತ್ಕೃಷ್ಟ ಮಟ್ಟದಲ್ಲಿರುವುದು 30 ರಿಂದ 50ವರ್ಷ ವಯೋಮಿತಿಯಲ್ಲಿ[8] ಈ ಮಾನದಂಡದಿಂದ ನೋಡಿದಾಗ ಕಾರಂತರ 1950 ರ ಆಚೆ-ಈಚಿನ ಕಾದಂಬರಿಗಳಲ್ಲಿ ಕಂಡುಬರುವ

---

7. ಕೆಲವು ವಿವರಾಂಶಗಳನ್ನು ಈ ಕೆಳಗಿನ ಕೋಷ್ಟಕದಲ್ಲಿ ಕಾಣಬಹುದು. ವಿಜ್ಞಾನ, ಪರಿಶೋಧನೆ ಮತ್ತು ಸಾಹಿತ್ಯ ಕ್ಷೇತ್ರಗಳಲ್ಲಿ ಆಗಿರುವ ಅತ್ಯುತ್ತಮ ಸಾಧನೆಗಳಲ್ಲಿ ಯಾವ ಯಾವ ವಯಸ್ಸಿನಲ್ಲಿ ಅತ್ಯಂತ ಹೆಚ್ಚಿನ ಸಂಖ್ಯೆ ಕಂಡು ಬಂದಿದೆ ಎಂಬುದನ್ನು ತೋರಿಸುವ ಕೋಷ್ಟಕ.

| ಕ್ಷೇತ್ರ | ಸೃಷ್ಟಿಕರ್ತರ ಸಂಖ್ಯೆ | ಕೊಡುಗೆಗಳ ಸಂಖ್ಯೆ | ಅತ್ಯುತ್ತಮ ಮಾರ್ಗಗಳು |
|---|---|---|---|
| ಕವಿತೆ | 82 | 797 | 26-30 |
| ರಸಾಯನ ಶಾಸ್ತ್ರ | 244 | 993 | 28-32 |
| ಭೌತ ಶಾಸ್ತ್ರ | 90 | 141 | 30-34 |
| ಪರಿಶೋಧನೆಗಳು | 402 | 554 | 31-35 |
| ಸಣ್ಣ ಕತೆ | 220 | 1396 | 31-37 |
| ಗಣಿತಶಾಸ್ತ್ರ | 163 | 453 | 34-38 |
| ಸಾಹಿತ್ಯ | 101 | 224 | 38-42 |
| ಖಗೋಳ ಶಾಸ್ತ್ರ | 63 | 83 | 43–47 |

8. ಸೃಜನಶೀಲ ಸಾಹಿತಿಗಳ ಕೊಡುಗೆಗಳ ಗುಣ ಮತ್ತು ಪರಿಮಾಣಗಳ ಬಗೆಗಿನ ಕೆಲವು ವಿವರಾಂಶಗಳನ್ನು ಈ ಕೆಳಗಿನ ಆಲೇಖಗಳಲ್ಲಿ ಕಾಣಬಹುದು.



ಸ್ಪಷ್ಟ ವ್ಯತ್ಯಾಸಕ್ಕೆ ಕಾರಣ ಕಾಣುತ್ತದೆ. ಅವರ ಇತ್ತೀಚಿನ ಬರಹಗಳು ಪುನರಾವರ್ತನ ದಂತಿರುವುದಕ್ಕೆ ಅವರಲ್ಲಿ ಬೌದ್ಧಿಕ ಮತ್ತು ಭಾವನಾತ್ಮಕ ಕ್ರಿಯೆಗಳು ಅಭ್ಯಾಸಗತ ವಾಗಿರುವುದೇ ಕಾರಣವೆಂಬುದು ನನ್ನಮತ. (ಸೃಜನಶೀಲ ಮತ್ತು ಶಕ್ತಿಯ ಕ್ಷೀಣತೆಯೂ ಅಸಹಜವಲ್ಲ.

---




ಆಲೇಖ : 1 ಮತ್ತು 2 :–ಸಾಹಿತ್ಯ ಮತ್ತು ರಸಾಯನ ಶಾಸ್ತ್ರ ಕ್ಷೇತ್ರಗಳಲ್ಲಿ ಅತ್ಯುತ್ತಮ ಕೊಡುಗೆಗಳು ಬಂದ ವರ್ಷಗಳು. ಆಲೇಖದ ಯಾವುದೇ ಒಂದು ಬಿಂದುವಿನಲ್ಲಿ ಕಂಡು ಬರುವ ಎತ್ತರ, ತಾವು ಅತ್ಯುತ್ತಮ ಕೊಡುಗೆಗಳನ್ನು ಕೊಟ್ಟ ವಯಸ್ಸಿನಲ್ಲಿ ಬದುಕಿದ್ದ ಸಾಧಕರ ಪ್ರಮಾಣ ವನ್ನು ಆ ಎತ್ತರ ಅವಲಂಬಿಸಿದೆ.




ತಮ್ಮ ವಿವಿಧ ವಯಸ್ಸುಗಳಲ್ಲಿ ಲೇಖಕರು ಸೃಜಿಸಿದ ಸಾಹಿತ್ಯದ ಪರಿಮಾಣ ಮತ್ತು ಗುಣ ಮಟ್ಟಗಳ ತುಲನೆ. 40 ವರ್ಷದ ವೇಳೆಗೆ ಗುಣಮಟ್ಟ ಕಡಿಮೆಯಾಗುವುದನ್ನೂ ಮತ್ತು ಸುಮಾರು 80 ವರ್ಷದವರೆಗೆ ಪರಿಮಾಣ ಹೆಚ್ಚಿನ ಮಟ್ಟದಲ್ಲಿ ಉಳಿದಿರುವುದನ್ನೂ ಗಮನಿಸಿ.

(ಉಲ್ಲೇಖ : Guilford, 1952, p.475–76)

ಕಾರಂತರ ವ್ಯಕ್ತಿತ್ವ ಮತ್ತು ಸಾಧನೆಗಳ ಬಗ್ಗೆ ಒಂದು ಸಮಗ್ರ ಕಲ್ಪನೆ ನಮಗೆ ಬರಬೇಕಾದರೆ, ಪಾಶ್ಚಿಮಾತ್ಯ ದೇಶಗಳಲ್ಲಿ ನಡೆದಿರುವ ವಸ್ತುನಿಷ್ಠ ಅಧ್ಯಯನಗಳಂತಹ ಪ್ರಯತ್ನಗಳೂ ನಮ್ಮಲ್ಲಿ ನಡೆಯಬೇಕಾಗಿದೆ. ಸುಪ್ರಸಿದ್ಧ ಸಾಹಿತಿಗಳ, ವಿಜ್ಞಾನಿಗಳ ಹಾಗೂ ಕಲಾವಿದರ ಸೃಜನಶೀಲ ಜೀವನ ಮತ್ತು ಸಾಧನೆಗಳ ಅರಿವು ಮುಂದಿನ ಪೀಳಿಗೆಗಳ ಸೃಜನಶೀಲತೆಯ ಗತಿ ಮತ್ತು ವಿನ್ಯಾಸಗಳನ್ನು ನಿರ್ದೇಶಿಸಲು ನೆರವಾಗ ಬಲ್ಲವು.

ಕಾರಂತರ ಸೃಷ್ಟಿಕಾರ್ಯ, ಪರಿಮಾಣದಲ್ಲಂತೂ ವಿಪುಲವಾಗಿದೆ. ಕಲೆ, ನೃತ್ಯ ಸಂಗೀತ ಮತ್ತು ಸಾಹಿತ್ಯಗಳಲ್ಲಿ ಅವರ ಅದ್ಭುತ ಶಕ್ತಿ ಹಂಚಿ ಹೋಗಿವೆ ಎಂಬುದನ್ನು ಯಾರಾದರೂ ಕಾಣಲು ಸಾಧ್ಯ. ಅವರು ತಮ್ಮ ವಿಶಿಷ್ಟ ಪ್ರತಿಭೆ, ಅಭಿಪ್ರೇರಣೆ ಮತ್ತು ಇಚ್ಛಾಶಕ್ತಿಗಳ ಮುಕ್ತ ಅಭಿವ್ಯಕ್ತಿಗೆ ಯಾವುದಾದರೂ ಒಂದು ಕ್ಷೇತ್ರವನ್ನು (ಕಲೆ ಅಥವಾ ಸಾಹಿತ್ಯ) ಕೇಂದ್ರವನ್ನಾಗಿ ಬಳಸಿಕೊಂಡಿದ್ದರೆ, ಅವರ ಸಾಧನೆಯ ಆಯಾಮ ಗಳು ಹೆಚ್ಚು ವಿಶ್ವವ್ಯಾಪಿಯಾಗುವ ಸಾಧ್ಯತೆ ಇದ್ದಿತು. ಆದರೆ ಅವರ ಜೀವನ ಘಟನೆಗಳು ಅದಕ್ಕೆ ಅನುಕೂಲಕರವಾಗಿಲ್ಲದ್ದೂ ಅವರ ಹಾರುವ ಪ್ರವೃತ್ತಿಗೆ ಪೋಷಕ ವಾಗಿರಬಹುದು.

## ಆಕರ ಗ್ರಂಥಗಳು ಮತ್ತು ಲೇಖನಗಳು


1. ಅನಂತನಾರಾಯಣ., ಎಸ್. ಕಾರಂತರ ಕಾದಂಬರಿಗಳು
2. ಕಾರಂತ ಪ್ರಪಂಚ, ಅಭಿನಂದನಾ ಗ್ರಂಥ
3. ಕಾರಂತ, ಶಿವರಾಮ., ಚೋಮನದುಡಿ, ಮರಳಿಮಣ್ಣಿಗೆ, ನರಸಮ್ಮನ ಸಮಾಧಿ, ಬೆಟ್ಟದ ಜೀವ, ಅಳಿದಮೇಲೆ, ಮೈಮನಗಳ ಸುಳಿಯಲ್ಲಿ, ಮೂಕಜ್ಜಿಯ ಕನಸುಗಳು ಇತ್ಯಾದಿ ಕಾದಂಬರಿಗಳು.
4. ಧರಣೇಂದ್ರಯ್ಯ, ಎ. ಎಸ್., ಹಸಿವು ಮತ್ತು ವರ್ತನೆ, ಮಾನವಿಕ ಕರ್ನಾಟಕ ಮೈಸೂರು ವಿ.ವಿ. 1970.
5. ಧರಣೇಂದ್ರಯ್ಯ, ಎ. ಎಸ್. ಜಾನಪದ ಮತ್ತು ಮನೋವಿಜ್ಞಾನ (ಸಂ) ಹಂಪನಾ ಕ.ಸಾ.ಪ., 1980.
6. ಧರಣೇಂದ್ರಯ್ಯ ಎ. ಎಸ್., ಸಾಮಾನ್ಯ ಮನೋವಿಜ್ಞಾನ, ಮೈಸೂರು ವಿ. ವಿ. 1976
7. ಮಾಸ್ತಿ ವೆಂಕಟೇಶ್ ಅಯ್ಯಂಗಾರ್, ವಿಮರ್ಶೆ
8. ಶುಭಚಂದ್ರ, ಜೈನ ಸಾಹಿತ್ಯ ಮತ್ತು ಸಂಸ್ಕೃತಿ ಕೆಲವು ಅಧ್ಯಯನಗಳು, ಗೀತಾ ಬುಕ್ ಹೌಸ್, ಮೈಸೂರು, 1976
9. Douglas, Hewitt., The Approach to Fiction Good and Bad Readings of Novels, Laymann 1972
10. Freud. S. Three contributions to the theory of Sex in A.A. Brill (ed) The Basic writings of Sigmund. Freud The Modern Library.

11. Guilford, General Psychology, Van Nostrand, 1952, p. 476
12. Jung, C.G., on the Relationship of Analytical Psychology to Poetic Art (In Contributions to Analytical Psychology) 1928.
13. Jung, C. G., Psychological Reflection Pantheon Books, 1953
14. Richards I, A., Practical criticism, Routledge 1929
15. Woodworth, R. S., Experimental Psychology Mathuen, 1983

# ಕಾರಂತರ ಕಾದಂಬರಿಗಳಲ್ಲಿ ಮಹಿಳೆ: ವೃದ್ಧೆಯರು

ವನಮಾಲಾ ವಿಶ್ವನಾಥ್

ನಿಮಗೆಲ್ಲ ತಿಳಿದಿರುವಂತೆ, ಕಾರಂತರ ಕಾದಂಬರಿಗಳಲ್ಲಿ ಮಾಮೂಲೀ ಕಥಾ ನಾಯಕನನ್ನು ಬಿಟ್ಟರೆ, ಅಂದರೆ ಸಾಂಪ್ರದಾಯಿಕ ಹೀರೋ ಪಾತ್ರಗಳನ್ನು ಬಿಟ್ಟರೆ, ಬಹಳ ಪ್ರಾಧಾನ್ಯ ಸಿಕ್ಕಿರುವುದು ವೃದ್ಧೆಯರ ಪಾತ್ರಗಳಿಗೆ. ನಾವು ಸಾಮಾನ್ಯವಾಗಿ ಓದೋ ಕತೆ ಕಾದಂಬರಿಗಳು ಸುಮಾರಾಗಿ ನಾಯಕನನ್ನೇ ಕೇಂದ್ರವನ್ನಾಗಿ ಹೊಂದಿರುತ್ತವೆ. ಕೆಲವೇ ಕಾದಂಬರಿಗಳಲ್ಲಿ, ನಾಯಿಕೆಯು ಕತೆಯ ಕೇಂದ್ರವಾಗಿರುವುದನ್ನು ಕೂಡ ನಾವು ಕಾಣುತ್ತೇವೆ. ಉದಾ: ಇನಾಂದಾರ್, ಎಂ. ಕೆ. ಇಂದಿರಾ, ತ್ರಿವೇಣಿ ಮತ್ತಿತರರ ಕಾದಂಬರಿಗಳಲ್ಲಿ ಹೀಗೆ ಯುವಕ ಯುವತಿಯರನ್ನು ಕೇಂದ್ರವಾಗಿಟ್ಟುಕೊಂಡು ಬರೆಯುವುದೇ ದಿನದ ರೂಢಿಯಾದಾಗ, ಕಾರಂತರಂತಹ ಒಬ್ಬ ಕಾದಂಬರಿಕಾರ, ಅಷ್ಟೊಂದು "ಸಾದಾ-ಸೀದಾ" ಆಗಿರೋ ವೃದ್ಧೆಯರಲ್ಲಿ ಏನನ್ನು ಕಂಡು, ಅವರಿಗೆ ತಮ್ಮ ಕಾದಂಬರಿಗಳಲ್ಲಿ ಅಷ್ಟೊಂದು ಪ್ರಾಮುಖ್ಯತೆ ಕೊಟ್ಟರು ಅನ್ನೋ ಪ್ರಶ್ನೆ ನಮ್ಮ ಮುಂದೆ ನಿಲ್ಲೋದು ಸಹಜ. ಬಹುಶಃ ಇದಕ್ಕೆ ವ್ಯಾವಹಾರಿಕವಾಗಿ ಒಂದು ಉತ್ತರ ಕೊಟ್ಟುಕೊಳ್ಳಬಹುದು. ವೃದ್ಧೆಯರು, ಅಥವಾ ನಮಗೆ ನಿಮಗೆ ಹತ್ತಿರ ಅನ್ನಿಸೋ ಅಜ್ಜಿಯರು, ನಮ್ಮಲ್ಲಿ ಒಂದು ದೊಡ್ಡ ಸಂಸ್ಥೆಯೇ ಆಗಿದ್ದಾರೆ ಅನ್ನಬಹುದು. ಮಕ್ಕಳಿಗೆ 'ಅಜ್ಜಿ' ಅಂದ್ರೆ ಬೆಚ್ಚಗಿನ ಪ್ರೀತಿಯ, ಬಿಡದ ವಿಶ್ವಾಸದ, ಅಚಲ ಸ್ಥೈರ್ಯದ, ಭದ್ರತೆಯ ಒಂದು ಪ್ರತೀಕ. ಇನ್ನು ನಮ್ಮ ಪುರಾಣಗಳಲ್ಲಿ, ಕತೆಗಳಲ್ಲಿ ಅಜ್ಜಿ ಅಥವಾ ವೃದ್ಧೆಯರು ಅಂದರೆ ನಮಗೆ ತಿಳಿಯದ ರಹಸ್ಯಗಳಿಗೆಲ್ಲಾ ಒಂದು ಕೀಲೀ ಕೈ. ಎಂದೇ ಅವಳು ಅಂತಹ ಶ್ರೀಮಂತ ಅನುಭವದ, ತಿಳಿವಿನ ಸಮುದ್ರ.

ಇನ್ನು ಕಾರಂತರನ್ನೇ ಈ ಪ್ರಶ್ನೆ ಕೇಳಿದಾಗ ಅವರು ಕೊಟ್ಟ ಉತ್ತರ, ನಾನು ಈಗ ತಾನೆ ಹೇಳಿದ ಅಂಶವನ್ನು ಅನುಮೋದಿಸುತ್ತದೆ. ಶ್ರೀ ಇನಾಂದಾರ್‌ಅವರ ಪ್ರಶ್ನೆ "...ಒಂದು ಸಂಸ್ಕಾರದ, ನಿಷ್ಠೆಯ ಪ್ರತೀಕವಾಗಿ ನಿಮ್ಮ ಕಾದಂಬರಿಗಳಲ್ಲಿ ಮುದುಕಿಯರ ಪಾತ್ರಗಳು ಬರುತ್ತವೆ ಎಂದು ಹೇಳಬಹುದೆ?

ಉತ್ತರ : "ಮುದುಕಿಯರು ಯಾಕೆ ಎಂದರೆ—ಯಾವುದೋ ಒಂದು ನಂಬಿಕೆಯನ್ನು ಇಟ್ಟುಕೊಂಡು ದೀರ್ಘಕಾಲ ಅದಕ್ಕನುಗುಣವಾಗಿ ನಡೆದು ಬಾಳಿದ ವ್ಯಕ್ತಿಗಳು ನನಗೆ ಪ್ರಿಯರಾಗುತ್ತಾರೆ. ಮುದುಕಿಯರಿಗಿಂತ ಆಚೆಗೆ ಬಾಳಲು ಸಾಧ್ಯವಿಲ್ಲ

ವಲ್ಲ. ಅವರದು ಪರಮಾವಧಿಯ ಜೀವನ, ಅನುಭವ. ಮಿತವಾದ ಹಿನ್ನೆಲೆಯಲ್ಲಿ ತಮ್ಮ ತಮ್ಮ ನಂಬಿಕೆಗಳನ್ನು ಬೆಳೆಯಿಸಿಕೊಂಡು ಬಾಳಿದ ವ್ಯಕ್ತಿಗಳನ್ನು ಕೊಡುವ ಪ್ರಯತ್ನ ನನ್ನದು. ಬದುಕಿನ ಚೆಲುವನ್ನು ನಾನು ಕಂಡದ್ದು ಹೆಚ್ಚಾಗಿ ಅವರಲ್ಲಿ ಎನ್ನುವುದರಿಂದ. ಆದರೆ ಅವರ ಮೌಲ್ಯವೆಲ್ಲವೂ ನನ್ನ ಮೌಲ್ಯ ಎಂದು ಯಾರೂ ತಿಳಿಯಬೇಕಾಗಿಲ್ಲ. ಬದಲು ಅಷ್ಟನ್ನೆಲ್ಲಾ ಚಿಕ್ಕವರಲ್ಲಿ ಹಾಕಿದರೆ ತುಂಬಾ ಕೃತ್ರಿಮ ವಾಗುತ್ತದೆ. ಯಾಕೆಂದರೆ ಅಷ್ಟು ಸಮಯದ ಒಳಗೆ ಅಷ್ಟು ಅನುಭವ, ತಿಳಿವು ಹೇಗೆ, ಬಂತು ಎನ್ನುವ ಸಮಸ್ಯೆ ಉತ್ಪನ್ನವಾಗುತ್ತದೆ."

ವೃದ್ಧೆಯರನ್ನು ಆರಿಸಿಕೊಳ್ಳಲು ಇದೊಂದೇ ಕಾರಣವಾದರೆ, ವಯಸ್ಸಾದ ಅನುಭವಸ್ಥ ವೃದ್ಧರನ್ನೇ ಆರಿಸಿಕೊಳ್ಳಬಹುದಾಗಿತ್ತು, ಹೆಮಿಂಗ್‌ವೇನ 'ಓಲ್ಡ್ ಮ್ಯಾನ್ ಅಂಡ್ ದಿ ಸೀ'ಯ ಮುದುಕನಂತೆ. ಆದರೆ ಕಾರಂತರು ಇದನ್ನು ಬಿಟ್ಟು, ವೃದ್ಧೆಯರನ್ನೇ ಏಕೆ ಆರಿಸಿಕೊಂಡಿದ್ದಾರೆ ಎಂಬ ಸಣ್ಣ ಪ್ರಶ್ನೆಯನ್ನು ನಾವು ಇಲ್ಲಿ ಕೇಳಿಕೊಳ್ಳಬಹುದೇನೋ.

ನನ್ನ ಪ್ರಬಂಧದ ವಸ್ತುವಾದ ವೃದ್ಧೆಯರ ಪಾತ್ರವನ್ನು ಕಾರಂತರ ಕೆಲವು ಪ್ರಾತಿನಿಧಿಕ ಕಾದಂಬರಿಗಳಿಂದ ಆಯ್ದುಕೊಂಡಿದ್ದೇನೆ. ಅವು : 'ಚೋಮನ ದುಡಿ (1933), ಮರಳಿ ಮಣ್ಣಿಗೆ, ಸಮೀಕ್ಷೆ, ಕರುಳಿನ ಕರೆ, ನಂಬಿದವರ ನಾಕ ನರಕ, (1958), ಅಳಿದ ಮೇಲೆ (1960), ಇನ್ನೊಂದೇ ದಾರಿ (1968), ಹಾಗೂ 'ಮೂಕಜ್ಜಿಯ ಕನಸುಗಳು' (1968). ಇವುಗಳಲ್ಲಿ ಬರುವ ವೃದ್ಧೆಯರ ಪಾತ್ರ ವನ್ನು ಒಂದು ದೃಷ್ಟಿಯಿಂದ ಅರ್ಥೈಸಲು ಪ್ರಯತ್ನಿಸುತ್ತೇನೆ.

ಮೂಕಜ್ಜಿ ತನ್ನ ಪಾತ್ರದ ಸಂಕೀರ್ಣತೆಯಿಂದ ಕಾರಂತರ ವೃದ್ಧೆಯರಲ್ಲೆಲ್ಲಾ ತುಂಬಾ ಮುಖ್ಯವಾಗುತ್ತಾಳೆ. ಮೂಕಜ್ಜಿಯನ್ನು ಒಂದು ಕೇಂದ್ರ ಬಿಂದುವಾಗಿ ಅಥವಾ 'core' ಆಗಿ ಪರಿಗಣಿಸಿ, ಮಿಕ್ಕೆಲ್ಲ ವೃದ್ಧೆಯರ ಪಾತ್ರಗಳನ್ನು ಈ ಪಾತ್ರಕ್ಕೆ ಸಂಬಂಧ ಪಟ್ಟಂತೆ ವಿಶ್ಲೇಷಿಸುವುದು ಈ ಪ್ರಬಂಧದ ಒಂದು ಗುರಿ. ಮೂಕಜ್ಜಿ ವೃತ್ತದ ಅತ್ಯಂತ ಮೂಲಭೂತವಾದ ಬಿಂದುವಾದರೆ, ಆ ವೃತ್ತದ ತೀರ ಆಚೆಗಿನ ಪರಿಧಿಯಲ್ಲಿ ಇರುವವಳು 'ಚೋಮನ ದುಡಿಯಲ್ಲಿ' ಬರುವ ಸಂಕಪ್ಪಯ್ಯನವರ ತಾಯಿ. ಕಾದಂಬರಿ ಯಲ್ಲಿ ಅವಳಿಗಾಗಿ ಮೀಸಲಿಟ್ಟಿರುವ ಪುಟಗಳು ಕೂಡ ಆ ಪಾತ್ರದ ತೆಳು ಸ್ವಭಾವ ವನ್ನು ಸೂಚಿಸುತ್ತವೆ. ಹಳೆಯ ಸಂಪ್ರದಾಯದ ಮುದುಕಿಯಾದ ಇವಳಿಗೆ ಹೊಲೆಯರು ಸ್ವಂತ ಬೇಸಾಯ ಮಾಡುವುದೆಂಬ ಯೋಚನೆಯೇ ನಿಷಿದ್ಧ. ಸಂಕಪ್ಪಯ್ಯ, ಚೋಮನಿಗೆ ಗೇಣಿಗೆ ಗದ್ದೆ ಕೊಡುವುದನ್ನು ಇವಳು ತಪ್ಪಿಸುತ್ತಾಳೆ. ಹೀಗೆ ತಪ್ಪಿಸುವುದಕ್ಕೆ ಯಾವ ಘನವಾದ ಕಾರಣವೂ ಅವಳಲ್ಲಿಲ್ಲ. ಕೇವಲ ಕುರುಡು ಸಂಪ್ರದಾಯಬದ್ಧತೆ ಹಾಗೂ ತನ್ನ ಮಗನ ಶ್ರೇಯಸ್ಸಿನ ಬಗ್ಗೆ ಕಳಕಳಿ ಅವಳ ಈ ಕ್ರಿಯೆಗೆ ಕಾರಣವಾಗುತ್ತವೆ. ಇದು

ಅವಳು ಹೇಳುವ ಈ ಮಾತುಗಳಲ್ಲಿ ನಮಗೆ ತಿಳಿದು ಬರುತ್ತದೆ: "ಬೇರೆ ಯಾರಾದರೂ ಹಾಗೆ ಮಾಡಿದ್ದಾರೆಯೇ? ನೀನು ಮಾಡು. ಮೊದಲಿಗೆ ನೀನು ಹೊಲೆಯರಿಗೆ ಉಪವೀತ ಕೊಡುವುದು ಬೇಡ. ನಾಳೆ ನಿಂಗೆ ಬಂದೀತು ಅಪಕೀರ್ತಿ."

ಇವಳನ್ನು ಬಿಟ್ಟು ಮಿಕ್ಕೆಲ್ಲ ವೃದ್ಧೆಯರ ಪಾತ್ರಗಳಲ್ಲೂ ನಾವು ಕಾರಂತರಿಗೆ ಅತ್ಯಂತ ಆಪ್ತವಾದ ಪ್ರಾಮಾಣಿಕತೆ, ಕೃತಜ್ಞತೆ, ಸಹಾನುಭೂತಿ, ಔದಾರ್ಯ, ಪ್ರೇಮ ಮುಂತಾದ ಮಾನವೀಯ ಮೌಲ್ಯಗಳನ್ನೇ ಕಾಣುತ್ತೇವೆ. ಈ ಪಾತ್ರಗಳಲ್ಲಿ ಕೆಲವು ನಮ್ಮ ವೃತ್ತದ ಕೇಂದ್ರವಾದ ಮೂಕಜ್ಜಿಗೆ ಸಮೀಪದ ಪರಿಧಿಯಲ್ಲಿ, ಇನ್ನು ಕೆಲವು ಸ್ವಲ್ಪ ದೂರದಲ್ಲಿರುತ್ತವೆ. ಆದರೆ ಈ ಎಲ್ಲಾ ಪಾತ್ರಗಳು ಬದುಕನ್ನು ಒಪ್ಪಿಕೊಂಡು ಎದುರಿಸುವಂತಹವು. ತಮ್ಮನ್ನೇ ತಮ್ಮ ಪರಿಸರಗಳಿಗೆ ಹೊಂದಿಸಿಕೊಳ್ಳುತ್ತಾ ಹೋಗುವಂತಹವು.

'ಮರಳಿ ಮಣ್ಣಿಗೆ' ಕಾದಂಬರಿಯ ಸರಸೋತಿ, ಪಾರೋತಿಯರನ್ನೇ ತೆಗೆದು ಕೊಳ್ಳಿ. ಇವರು ಬದುಕಿ ಬಾಳಿದ ಸಮಾಜ ನಿರ್ದಿಷ್ಟವಾದ ಆರ್ಥಿಕ ಮತ್ತು ಸಾಮಾಜಿಕ ವ್ಯವಸ್ಥೆಯನ್ನು ಹೊಂದಿದ, ಶಾಶ್ವತ ಮೌಲ್ಯಗಳನ್ನು ನಂಬಿದ ಸಮಾಜ ಪರಂಪರೆ. ಅದನ್ನು ಪ್ರಶ್ನಿಸುವ, ಹೋರಾಟ ನಡೆಸುವ, ಅವಕಾಶವೇ ಇಲ್ಲ. ಸರಸೋತಿ ಪಾರೋತಿಯರು, ಇಲ್ಲಿನ ಎಲ್ಲ ಹೊಡೆತಗಳನ್ನು ತಡೆದುಕೊಂಡು, ಸ್ಥೈರ್ಯ ಉಳಿಸಿ ಕೊಳ್ಳಬಲ್ಲವರು. ಹೀಗೆ ಹೊಂದಿಕೊಂಡು ಹೋಗುವುದರಲ್ಲೇ ಎಲ್ಲ ಅರ್ಥವನ್ನೂ ಕಾಣುವ ಇವರು, ಈ ಕಾರಣದಿಂದಾಗಿಯೇ, ಮುಂದೆ ನಾಗವೇಣಿಯ ಬಾಳಿಗೆ ಒಂದು ಪ್ರೇರಕವಾಗುವ, ಸ್ಫೂರ್ತಿಯಾಗಿ ನಿಲ್ಲುವ ಅರ್ಹತೆ, ಶಕ್ತಿ ಪಡೆಯುತ್ತಾರೆ.

ಇನ್ನು 'ಸಮೀಕ್ಷೆ' ಕಾದಂಬರಿಯಲ್ಲಿ ಬರುವ ಗಂಗಮ್ಮ, ಕಥಾನಾಯಕ ಶ್ರೀನಿವಾಸನ ಹೆಂಡತಿಗೆ ದೊಡ್ಡಮ್ಮ. ಇವಳೂ ಸರಸೋತಿಯಂತೆ ಸಣ್ಣ ವಯಸ್ಸಿನಲ್ಲೇ ವಿಧವೆಯಾಗಿ, ತನ್ನದೆಂಬ ಸಂಸಾರವಿಲ್ಲದೆ, ತಂಗಿಯ ಮಕ್ಕಳನ್ನು ನೋಡಿಕೊಳ್ಳುತ್ತ ಬಂದವಳು. ಸಂಪ್ರದಾಯವನ್ನು ಪೂರ್ಣವಾಗಿ ಒಪ್ಪಿಕೊಂಡ ಈಕೆ, ಶ್ರೀನಿವಾಸನ ಮನೆಯ ಪ್ರತಿಯೊಂದು ಕಷ್ಟಕ್ಕೂ, ಸುಖಕ್ಕೂ ಆಗುವ ಹಿರಿಮೆ. ರಾಮಚಂದ್ರನಿಗೆ ಹುಚ್ಚು ಹಿಡಿದಾಗ, ಶಾರದೆ ಅಪೂರ್ವವಾಗಿ ಬಸುರಿಯಾದಾಗ, ಆ ಮನೆಗೆ ಆಧಾರ ವಾಗಿ ನಿಲ್ಲುವಂಥವಳು. ಎಂದೇ ಶ್ರೀನಿವಾಸ, ಬೇರೆ ಜಾತಿಯಲ್ಲಿ ಹುಟ್ಟಿದ ತನ್ನ ಸಾಕು ಮಗಳನ್ನು ಬಾಣಂತನಕ್ಕೆ ಕರೆದು ತರಲು ಅಳುಕುತ್ತಾನೆ. ಆದರೆ ಅವನ ಮನ ವನ್ನರಿತ ಗಂಗಮ್ಮ "ನಿಮ್ಮ ಸಂತೋಷ ಬಿಟ್ಟು ಬೇರುಂಟೆ ನನಗೆ?" ಎಂದು ಹೇಳಿ, ಶ್ರೀನಿವಾಸ ಅವಳ ತಮ್ಮನನ್ನು ಅವನ ಖಾಯಿಲೆಯ ಸಮಯದಲ್ಲಿ ನೋಡಿ ಕೊಂಡದ್ದನ್ನು ನೆನೆಯುತ್ತಾಳೆ. ಈ ಪ್ರತಿಕ್ರಿಯೆ ಅವಳ ಔದಾರ್ಯವನ್ನು, ಕೃತಜ್ಞತೆ ಯನ್ನು ತೋರಿಸುತ್ತದೆ. ಎಂದೇ ಶ್ರೀನಿವಾಸ "ಹಳೆಯ ಬೆಳಕನ್ನು ತಿರುತಿರುಗಿ ಕಾಣು ವವರೂ ಇದ್ದಾರೆ" ಎಂದುಕೊಳ್ಳುತ್ತಾನೆ.

ಸಂಪ್ರದಾಯಬದ್ಧಳಾಗಿದ್ದೂ, ಒಂದು ವಿಶೇಷ ಸಂದರ್ಭ ಬಂದಾಗ, ಆ ಕಟ್ಟನ್ನು ಬಿಡಿಸಿಕೊಂಡು ಆಕೆ ಬಂದು, ಇತರರಿಗೂ, ತನಗೂ ಸಹಾಯಕವಾಗಿ ನಿಲ್ಲುವ ಚಿತ್ರಣವನ್ನು ಗಂಗಮ್ಮನಲ್ಲಿ ಕಂಡರೆ, ಇದೇ ಕಾದಂಬರಿಯಲ್ಲಿ ಬರುವ ವಾಸುದೇವನ ತಾಯಿ-ನರಸಜ್ಜಿ, ಇವಳಿಗೆ ವೈದೃಶ್ಯ (contrast) ಆಗಿ ನಿಲ್ಲುತ್ತಾಳೆ. ಬೇರೆ ದಿಕ್ಕಿಲ್ಲದ ಇವಳ ಸೊಸೆ ಕುಸುಮ ಹಾಗೂ ಮೊಮ್ಮಗಳು ಇವರ ಮನೆಗೆ ಆಶ್ರಯ ಬೇಡಿ ಬಂದಾಗ, ನರಸಜ್ಜಿ ಹಿಂದು ಮುಂದು ನೋಡುತ್ತಾಳೆ. ಸೊಸೆ ಬೇರೆ ಜಾತಿ ಯವಳೆಂದು ತಿಳಿದಾಗ, ಅವಳ ಬಗ್ಗೆ ಇನ್ನೂ ಕಠೋರಳಾಗುತ್ತಾಳೆ. ಇವಳ ಈ ಸ್ವಭಾವವು ತಿಳಿದಿದ್ದರಿಂದಲೇ ವಾಸುದೇವ ತನ್ನ ಮದುವೆಯ ವಿಷಯವನ್ನು ಇವಳಿಗೆ ತಿಳಿಸದೆ, ದೂರವೇ ಇದ್ದದ್ದು. ಕೊನೆಗೆ, ಕುಸುಮ ಅಪಮೃತ್ಯುವಿಗೆ ಒಳಗಾದದ್ದು ನರಸಜ್ಜಿಯ ಜೀವನವನ್ನೇ ಕಲಕಿಬಿಡುತ್ತದೆ. ವಾತ್ಸಲ್ಯ ಮತ್ತು ಸಂಪ್ರದಾಯದ ಜಂಜಾಟದಲ್ಲಿ ಇವಳು ತೀರ ನುಗ್ಗುನುರಿಯಾಗುತ್ತಾಳೆ. ಸಂಪ್ರದಾಯದ ಸಂಕೋಲೆ ಯಿಂದ ಈಚೆ ಬರಲು ಸಾಧ್ಯವಾಗದ ಈಕೆ ಬೇರೆಯವರಿಗೆ ನೋವುಂಟುಮಾಡು ವುದು ಮಾತ್ರವಲ್ಲ, ತಾನೇ ಈ ಬೇಗೆಯಲ್ಲಿ ಬೇಯುತ್ತಾಳೆ. ಹೀಗೆ ಈ ಕಾದಂಬರಿಯಲ್ಲಿ ಬರುವ ಎರಡು ವೃದ್ಧೆಯರ ಪಾತ್ರಗಳೂ ತಾವು ಒಪ್ಪಿಕೊಂಡು ಬಂದ ಮೌಲ್ಯ ಗಳನ್ನು ಪ್ರಶ್ನಿಸಬೇಕಾದ ಅಪರೂಪದ ಸಂದರ್ಭವನ್ನು ನಾವು ಇಲ್ಲಿ ಕಾಣುತ್ತೇವೆ.

'ಕರುಳಿನ ಕರೆ'ಯಲ್ಲಿ ಬರುವ ಭಾಗೀರಥಿ, ವೆಂಕಮ್ಮ ಇವರ ಪಾತ್ರಗಳು, ಮೇಲೆ ಚಿತ್ರಿಸಿದ ಮಾದರಿಗಳಲ್ಲಿನ ಬೇರೆ ಬೇರೆ ಉದಾಹರಣೆಗಳು. ಬಾಳಿನಲ್ಲಿ ಬಡತನ, ದುಃಖ, ದೈನ್ಯವೇ ಗಾಳಿ ನೀರಾಗಿದ್ದರೂ, ಇವರು ಈ ಕಾದಂಬರಿಯ ಇತರ ಪಾತ್ರ ಗಳಾದ ಶ್ಯಾಮ, ಲಕ್ಷ್ಮಣರಂತೆ ಓಡಿ ಹೋಗುವುದಿಲ್ಲ. ಆತ್ಮಹತ್ಯೆಯ ಯೋಚನೆಯನ್ನು ಕೂಡ ಮಾಡುವುದಿಲ್ಲ. ಭಾಗೀರಥಿ, ಗಾಂಧಾರಿಯ ಸ್ಥಿತಿಯನ್ನು ವಿವರಿಸುತ್ತಾ ವೆಂಕಮ್ಮನಿಗೂ, ತನಗೂ ಸಮಾಧಾನ ಹೇಳಿಕೊಳ್ಳುತ್ತಾಳೆ. ಇಂತಹ ಪಡಬಾರದ ಕಷ್ಟಗಳನ್ನು ಪಟ್ಟೂ, ದೇವರಲ್ಲಿ, ಧರ್ಮದಲ್ಲಿ, ತಮ್ಮ ನಂಬಿಕೆಗಳಲ್ಲಿ ನಿಷ್ಠೆಯಿಟ್ಟು, ಯಾವ ರೀತಿಯ ರಾಜಿಯನ್ನೂ ಮಾಡಿಕೊಳ್ಳದೆ, ಅದರಂತೆಯೇ ನಡೆಯುವ, ನಡೆದುದರಲ್ಲೇ ತೃಪ್ತಿ ಕಾಣುವ ಜೀವಿಗಳನ್ನು ನೋಡಿದರೆ, ನಿಜಕ್ಕೂ ಒಂದು ತರಹದ ದಿಗ್ಭ್ರಮೆಯೇ ಹುಟ್ಟುತ್ತದೆ.

'ಸಮೀಕ್ಷೆ'ಯ ಗಂಗಮ್ಮನಂತಹ ಇನ್ನೊಂದು ಜೀವವೆಂದರೆ 'ನಂಬಿದವರ ನಾಕ ನರಕ' ಕಾದಂಬರಿಯ ಸಾವಿತ್ರಮ್ಮ. ಉಸಿರಿರುವತನಕ ಕರ್ತವ್ಯ ಮರೆಯದ ಹೆಂಗಸು ಈಕೆ. ನಾಲ್ಕು ದಿನ ಇಲ್ಲಿದ್ದು, ಆ ದೇವರು ಕರೆದ ದಿನ ಹೊರಡಬೇಕು, ಎಂದು ನಂಬಿ, ಬಾಳಿದ್ದ ಅಧ್ಯಾತ್ಮ ಜೀವಿ. ಕರ್ತವ್ಯವೆಂದು, ಕೆಟ್ಟಿದ್ದ ಮಗನ ಸಂಸಾರವನ್ನು ಸರಿಪಡಿ ಸಲು ಕೈಲಾದ ಪ್ರಯತ್ನ ಮಾಡುತ್ತಾಳೆ. ಸೋತಾಗ, ಬಳಲಿದ ಸೊಸೆಯನ್ನು ಅನು ಕಂಪದಿಂದ ಕಾಣುತ್ತಾಳೆ. ಆದರೆ ಯಾವುದೋ ಕೆಟ್ಟ ಗಳಿಗೆಯಲ್ಲಿ, ತನ್ನ ಸೊಸೆಗೆ ನೀಲಿ

ಕಣ್ಣಿನ ಆರು ಬೆರಳಿನ ಮಗುವೊಂದು ಹುಟ್ಟಿದಾಗ, ಅವಳನ್ನು ಸಂಶಯಿಸಿ, ಕೋಪ, ತಾಪ, ಉದ್ವೇಗಗಳಲ್ಲಿ ಬೇಯುತ್ತಾಳೆ; ನರಳುತ್ತಾಳೆ. ಬುದ್ಧಿ ಸ್ವಾಸ್ಥ್ಯ ಕೆಡಿಸಿಕೊಂಡು ಬಾಳನ್ನು ನರಕ ಮಾಡಿಕೊಳ್ಳುತ್ತಾಳೆ. ಕೊನೆಗೆ ಇಷ್ಟೆಲ್ಲಾ ಆದದ್ದು ತನ್ನ ಅವಿವೇಕದಿಂದ, ಅಜ್ಞಾನದಿಂದ ಎಂದು ತಿಳಿದಾಗ ಪಶ್ಚಾತ್ತಾಪದಿಂದ ಕುಸಿಯುತ್ತಾಳೆ. "ತನ್ನ ತಪ್ಪು ತಿಳಿದ ಮೇಲೆ, ಹಟ ಸಾಧಿಸಿ, ಸೊಸೆಯನ್ನು ಗೆಲ್ಲಬೇಕೆಂಬ ಹೆಮ್ಮೆಯಾಗಲಿ, ತಾನು ಸೋತೆನೆಂಬ ನೋವಾಗಲೀ ಅವಳಿಗಿಲ್ಲ—ಬದಲಾಗಿ, ಅವಳ ಮನಸ್ಸಿನಲ್ಲಿ ಕಾಣುತ್ತಿರುವುದು ಪಾಪ ಪುಣ್ಯಗಳ ವಿವೇಚನೆ" ಈ ವಿವೇಚನೆಯೇ ಅವಳನ್ನು ಸೊಸೆಯ ಬಳಿ ಕ್ಷಮೆ ಬೇಡಲು ಪ್ರೇರೇಪಿಸುತ್ತದೆ. ತಾನು ತನ್ನ ನಂಬಿಕೆಗೆ ತಕ್ಕ ಹಾಗೆ ಬದುಕಿದ್ದೇನೆ ಎಂಬ ಅರಿವೇ ಸಾಯುವ ಗಳಿಗೆಯಲ್ಲಿ ಅವಳಿಗೆ ತುಂಬು ತೃಪ್ತಿ ಆನಂದ ಕೊಡುತ್ತದೆ.

1960ರ ಈಚೆಗೆ ಬಂದ 'ಅಳಿದ ಮೇಲೆ' ಹಾಗೂ 'ಇನ್ನೊಂದೇ ದಾರಿ'ಯಲ್ಲಿ ಬರುವ ವೃದ್ಧೆಯರ ಪಾತ್ರಗಳು, ನಾವು ಇದುವರೆಗೆ ನೋಡಿದ ಪಾತ್ರಗಳಿಗಿಂತ ಮೂಕಜ್ಜಿಗೆ ಹತ್ತಿರವಾಗುತ್ತವೆ. 'ಅಳಿದ ಮೇಲೆ' ಕಾದಂಬರಿಯ ಪಾರ್ವತಮ್ಮ, ಹಾಗೂ ಮೂಕಾಂಬಿಕಾ ಇಬ್ಬರೂ 85 ವರ್ಷದ ಕಣ್ಣು ಮಂಜಾದ ಮುದುಕಿಯರು. ಎರಡು ದೇಹ, ಒಂದು ಜೀವವಾಗಿದ್ದೂ, ಒಬ್ಬರನ್ನೊಬ್ಬರು ಕಾಣದೆ ಬದುಕಬೇಕಾದ ಪರಿಸ್ಥಿತಿಯಲ್ಲಿರುವವರು. ಯಶವಂತರ ನಿಜವಾದ ತಾಯಿ ಪಾರ್ವತಿಯೇ. ಈ ಮಾತನ್ನು ಕಾದಂಬರಿಕಾರರೇ ಸ್ಪಷ್ಟ ಪಡಿಸುತ್ತಾರೆ. ಯಶವಂತರು ಬರೆದ ಒಂದು. ಚಿತ್ರವನ್ನು ನೋಡಿ, "ತನ್ನದಲ್ಲದ ಕರುವನ್ನು ತನ್ನದಾದುದಕ್ಕಿಂತಲೂ ಹೆಚ್ಚಿನ ಮಮತೆಯಿಂದ ಕಂಡ ಪಾರ್ವತಮ್ಮನ ವಾತ್ಸಲ್ಯ ಭಾವಕ್ಕೆ ಋಣಿಯಾಗಿ ಹೀಗೆ ಬರೆದರು ಎನಿಸಿತು"

ಧರ್ಮ, ದೇವರುಗಳ ಬಗ್ಗೆ ಸಾಂಪ್ರದಾಯಿಕ ನಿಲುವು ಏನೆಂಬುದನ್ನು ಪಾರ್ವತಿಯ ಪಾತ್ರ ಹೆಚ್ಚು ನಿಚ್ಚಳವಾಗಿ ಕಾಣಿಸುತ್ತದೆ. ಒಮ್ಮೆ ಹೇಳುತ್ತಾಳೆ : "ನಾನೂ ನೀನೂ ಇಲ್ಲವಾದರೂ, ನಾವು ನಂಬಿದ್ದು ಮಾತ್ರ ಉಳಿದುಕೊಳ್ಳುತ್ತದೆ." ಇನ್ನೊಮ್ಮೆ—"ನಮ್ಮಲ್ಲಿಯೂ, ಇನ್ನೊಂದು ಜೀವದಲ್ಲಿಯೂ ದೇವರಿದ್ದಾನೆ ಎಂದು ನಂಬಿ, ಹಾಗೆ ನಡೆದರೆ, ಅದು ನಂಬಿದ್ದಕ್ಕೆ ಸಾರ್ಥಕ. ಬರಿದೆ ಬಾಯಲ್ಲಿ ಇದ್ದಾನೆ ಎಂದರೆ ಆಗಲಿಲ್ಲ." ಎನ್ನುತ್ತಾಳೆ. ಇವಳ ದಿಟ್ಟತನದ ಮಾತುಗಾರಿಕೆಯಲ್ಲಿ ನಾವಾಗಲೇ ಮೂಕಜ್ಜಿ ವಿಕಾಸವಾಗುತ್ತಾ ಇರುವುದನ್ನು ಕಾಣುತ್ತೇವೆ.

ಪಾರ್ವತಿ ಈ ವಿಕಾಸದ ಒಂದು ಹಂತದಲ್ಲಿದ್ದರೆ, 'ಇನ್ನೊಂದೇ ದಾರಿ' ಕಾದಂಬರಿಯ ಹೊನ್ನಜ್ಜಿ ಇವಳಿಗಿಂತ ಒಂದು ಹಂತ ಮೇಲೇರುತ್ತಾಳೆ. ಹೊನ್ನಜ್ಜಿಗೆ ಅತಿ ಮುಖ್ಯವಾದ ಮೌಲ್ಯವೆಂದರೆ ಜೀವನದಲ್ಲಿ ಸುಖಕ್ಕಿಂತ ಕರ್ತವ್ಯ ಮುಖ್ಯ ಎಂಬುದು. "ದೇವರು ಕೊಟ್ಟರೆ ಉಂಟು, ಇಲ್ಲವಾದರೆ ಇಲ್ಲ" ಎಂಬುದು ಇವಳ

ಗಾಢವಾದ ನಂಬಿಕೆ. ಈ ಹೇಳಿಕೆಗೆ ಸಾಕಷ್ಟು ಸ್ಪಷ್ಟನೆ ಅವಳ ಜೀವನದಲ್ಲೂ ದೊರೆಯುತ್ತದೆ. 'ಅಳಿದ ಮೇಲೆ' ಕಾದಂಬರಿಯಲ್ಲಿ ಪಾರ್ವತಿಯ ಮೌಲ್ಯಗಳ ಬಗ್ಗೆ ಅವಳ ಬಾಯಿಂದಲೇ ಕೇಳಿ ತಿಳಿದರೆ, ಇಲ್ಲಿ ಹೊನ್ನಜ್ಜಿಯ ಮೌಲ್ಯಗಳನ್ನು ಒಂದೆರಡು ಘಟನೆಗಳ ಮೂಲಕ ನೋಡಿ ತಿಳಿಯುತ್ತೇವೆ.

ಈ ಮುಂಚೆ ನಾನು 'ಮಾದರಿ' ಎನ್ನುವ ಒಂದು ಶಬ್ದವನ್ನು ಬಳಸಿದೆ. ಈಗ ನಾವು ಇದುವರೆಗೂ ವಿಶ್ಲೇಷಿಸಿದ ಪಾತ್ರಗಳಲ್ಲಿ ಸಾಮಾನ್ಯವಾದ ಅಂಶಗಳು ಯಾವುವು, ಈ ಅಂಶಗಳನ್ನೊಳಗೊಂಡ ಪಾತ್ರಗಳನ್ನು ಮೂಕಜ್ಜಿಗೆ ಹೇಗೆ ಸಂಬಂಧಿಸಬಹುದು ಎಂಬುದನ್ನು ನೋಡೋಣ.

ನಾವು ಈವರೆಗೆ ನೋಡಿದ ಸುಮಾರು ಪಾತ್ರಗಳು—ಸರಸೋತಿ, ಪಾರ್ವತಮ್ಮ, ಮೂಕಾಂಬಿಕಾ, ಗಂಗಮ್ಮ, ತಿಪ್ಪಜ್ಜಿ, ವೆಂಕಮ್ಮ ಮುಂತಾದವರೆಲ್ಲ—ಬಾಲವಿಧವೆಯರು; ಅವರಿವರನ್ನು ಆಶ್ರಯಿಸಿ ಬಾಳಿದವರು, ಇವರನ್ನುಳಿದು ಇತರರು ಮಧ್ಯ ವಯಸ್ಸಿನಲ್ಲಿ ಗಂಡನನ್ನು ಕಳೆದುಕೊಂಡು, ಸಂಸಾರದ ಇಡೀ ಭಾರವನ್ನು ನಿರ್ವಹಿಸುವ ಹೊಣೆ ಹೊತ್ತವರು. ಕಷ್ಟ ಎದುರಿಸುವುದೇ ಜೀವನ ಕ್ರಮವಾದವರು. ಇದಕ್ಕೆ ಅಲ್ಲೊಂದು ಇಲ್ಲೊಂದು ಅಪವಾದ ಇರುವುದು ನಿಜ. ಉದಾ: ನಂಬಿದವರ ನಾಕ ನರಕ ಕಾದಂಬರಿಯ ಶಿಂಗಾರಮ್ಮ. ಇನ್ನೆಲ್ಲಾ ಪಾತ್ರಗಳೂ ಎಂತಹ ಕಡುಬಡತನದಲ್ಲೂ ಮನಸ್ಸಿನ ಔದಾರ್ಯವನ್ನು ಕಳೆದುಕೊಳ್ಳದವರು. ಈ ಅಂಶವನ್ನು ದಿನದಿನದ ಬದುಕಿನ ವಿವರಗಳಿಂದ ಹಿಡಿದು ಮಹತ್ತರ ನಂಬಿಕೆಯ ಸ್ತರಗಳಲ್ಲೂ ನಾವು ಕಾಣುತ್ತೇವೆ. ಅತಿಥಿ, ಅಭ್ಯಾಗತರು ಮನೆಗೆ ಬಂದಾಗ ಇವರು ನೀಡುವ ಆತಿಥ್ಯದಿಂದ ಹಿಡಿದು, ನೈತಿಕ ರೀತಿಯಲ್ಲಿ ಸಹ ಇವರ ಔದಾರ್ಯ ಅಭಿವ್ಯಕ್ತ ಪಡೆಯುತ್ತದೆ. ಈ ಪಾತ್ರಗಳಿಗೆಲ್ಲ ಸಾಮಾನ್ಯವಾಗಿರುವ ಮತ್ತೊಂದು ಅಂಶವೆಂದರೆ ದೇವರು, ಧರ್ಮ—ಇವುಗಳ ಬಗ್ಗೆ ಇವರಿಗಿರುವ ಶ್ರದ್ಧೆ ಹಾಗೂ ಸಾಂಪ್ರದಾಯಿಕ ಚೌಕಟ್ಟಿನಲ್ಲಿ ಇವರಿಗಿರುವ ಪ್ರಶ್ನಿಸಲಾಗದ ನಂಬಿಕೆ. ಹೀಗೆ ಕಾರಂತರು ಗೌರವಿಸುವ ಅನೇಕ ಮೌಲ್ಯಗಳ ಪ್ರತಿನಿಧಿಗಳಾಗಿ ಈ ಪಾತ್ರಗಳನ್ನು ನಾವು ಕಾಣುತ್ತೇವೆ.

ನನ್ನ ಈ ಅಧ್ಯಯನಕ್ಕೆ ಬಿಂದುವಾಗಿ ನಿಂತ ಮೂಕಜ್ಜಿ ಕೂಡ ಒಂದು ಮಟ್ಟದವರೆಗೂ ಇವರಂತೆಯೇ. ಅವಳ ಕನಸುಗಳನ್ನು ಬಿಟ್ಟರೆ, ಅವಳೂ ಇವರೆಲ್ಲರಂತೆ. ಮೂಕಜ್ಜಿಯೂ ಬಾಲ್ಯದಲ್ಲೇ ವಿಧವೆಯಾದವಳು. ತಂದೆ, ಅಣ್ಣಂದಿರನ್ನು ಆಶ್ರಯಿಸಿ ಬದುಕಿದವಳು. ಔದಾರ್ಯ, ಕಷ್ಟ ಸಹಿಷ್ಣುತೆ, ಪ್ರೀತಿ, ವಿಶ್ವಾಸ ಉಳಿಸಿ ಬೆಳೆಸಿಕೊಂಡವಳು. ಇವರೆಲ್ಲರಷ್ಟೇ ಮಾನವೀಯವಾದ, ಕರುಣಾಳುವಾದ ವ್ಯಕ್ತಿ ಇವಳು ಕೂಡ. ಆದರೆ ಕೆಲವು ಮುಖ್ಯವಾದ ವಿಷಯಗಳಲ್ಲಿ ಮೂಕಜ್ಜಿ ಇವರೆಲ್ಲರಿಗಿಂತ ಭಿನ್ನ. ಅದೆಂದರೆ ಅವಳ ವೈಚಾರಿಕತೆ; ಧರ್ಮ, ದೇವರು, ಸೃಷ್ಟಿ ಇವುಗಳ ಬಗೆಗೆ ಅವಳು ತಾಳುವ

ಧೋರಣೆಗಳು; ಇದನ್ನು ಸಾಧ್ಯವಾಗಿಸುವ ಅವಳ ಅತೀಂದ್ರಿಯ ಜ್ಞಾನ. ಮೂಕಜ್ಜಿ 'ಇನ್ನೊಂದೇ ದಾರಿ' ಕಾದಂಬರಿಯಲ್ಲಿ ಬರುವ ಹೊನ್ನಜ್ಜಿಯ ಸಾಂಪ್ರದಾಯಿಕ ಮೌಲ್ಯಗಳ ಹಾಗೂ ಅವಳ ಮೊಮ್ಮಗ ಜಯರಾಮ ಪ್ರತಿನಿಧಿಸುವ ಹೊಸ ಪ್ರಜ್ಞೆಯ, ಹೊಸ ಸಂದೇಹಗಳ ಒಂದುಗೂಡಿದ ಸ್ವರೂಪ ಎಂದು ಹೇಳಬಹು ದೇನೋ. ಅವಳಿಗೆ ನಮ್ಮೆಲ್ಲರ ಭೂತ ಭವಿಷ್ಯಗಳನ್ನು ಕಾಣುವ ಆ ಶಕ್ತಿಯೊಂದು ಇಲ್ಲದೆಯೇ, ಕೇವಲ ತನ್ನ ವಯಸ್ಸಿನಿಂದ, ಅನುಭವದಿಂದ, ವೈಚಾರಿಕತೆಯಿಂದ ಅವಳು ತನ್ನ ಕಾಣ್ಕೆಗಳನ್ನು ವ್ಯಕ್ತಪಡಿಸಿದ್ದರೆ, ಬಹುಶಃ ಆ ಪಾತ್ರ ನಮಗೆ ಇನ್ನೂ ಹತ್ತಿರವಾಗುತ್ತಿತ್ತೇನೋ ಎಂದು ಕೆಲವೊಮ್ಮೆ ಅನ್ನಿಸುತ್ತದೆ.

ಕಾರಂತರ ಕಾದಂಬರಿಗಳಲ್ಲಿ ಬರುವ ಕೆಲವು ವೃದ್ಧೆಯರ ಪಾತ್ರದ ಈ ಸಮೀಕ್ಷೆಯ ನಂತರ, ಈ ಬಗ್ಗೆ ನನ್ನ ಒಂದೆರಡು ಪ್ರತಿಕ್ರಿಯೆಗಳನ್ನು ವ್ಯಕ್ತಪಡಿಸುವ ಪ್ರಯತ್ನ ಮಾಡುತ್ತೇನೆ.

ಈ ಕಾದಂಬರಿಗಳ ಬಗ್ಗೆ ಇದುವರೆಗೂ ಬಂದಿರುವ ವಿಮರ್ಶೆಗಳಲ್ಲಿ, ಈ ಪಾತ್ರಗಳನ್ನು ಚಿತ್ರಿಸುವಲ್ಲಿ ಕಾರಂತರು ಹೇಗೆ ಎರಡು ಅತಿರೇಕಗಳನ್ನು ಮುಟ್ಟುತ್ತಾರೆ ಎಂಬ ವಿಷಯ ಮಂಡಿತವಾಗಿದೆ. ಅಂದರೆ, ಜೀವನವನ್ನು ಒಪ್ಪಿಕೊಂಡು ಎದುರಿಸುವ ಪಾತ್ರಗಳೆಲ್ಲಾ ಒಳ್ಳೆಯವು ಅಥವಾ 'ಬಿಳಿ', ಮಿಕ್ಕವೆಲ್ಲಾ ಕೆಟ್ಟವು ಅಥವಾ 'ಕರಿ', ಎಂಬ ಟೀಕೆಯಿದೆ. ಇದರಿಂದಾಗಿ ಪಾತ್ರಗಳು ಬಹಳ ತೆಳುವಾಗಿ ಡಿ. ಆರ್. ನಾಗರಾಜ್ ಹೇಳಿದಂತೆ 'ಕಾರ್ಡ್‌ಬೋರ್ಡ್' ಪಾತ್ರಗಳಾಗುತ್ತವೆ. ಈ ಮಾತು ನಿಜ ಅಂತ ನನಗೂ ಅನಿಸುತ್ತದೆ. ಇಲ್ಲಿ ಸಾಮಾನ್ಯವಾದ ಒಂದು ಅಳತೆಗೋಲು ನಮಗೆ ಒಂದು perspective ಕೊಡಬಹುದೇನೋ. ಈಗ ನೋಡಿ, ನಮ್ಮ ಜನಪ್ರಿಯ ಕಾದಂಬರಿ ಗಳಲ್ಲಿ ಕೂಡ ಅನೇಕ ವೃದ್ಧೆಯರ ಪಾತ್ರಗಳು ಬರುತ್ತವೆ. ಉದಾಹರಣೆಗೆ ಉಷಾ ನವರತ್ನರಾಮ್, ಆರ್ಯಾಂಬ ಪಟ್ಟಾಭಿ, ಕೆ. ಸರೋಜಾ ರಾವ್, ಬಿ.ಎ., ಮುಂತಾದವರ ನಾಯಿಕೆಯೇ ಕೇಂದ್ರವಾಗಿರುವ ಕಾದಂಬರಿಗಳಲ್ಲಿ ಅಲ್ಲಿಯ ಮುದುಕಿಯರು ಯಾವಾಗಲೂ ಕೋಡುಬಳೆ, ಚಕ್ಕುಲಿ, ರವೆ ಉಂಡೆ ಮಾಡುತ್ತಾ ಕೂತಿರುತ್ತಾರೆ. ಇದು ಮಾಡದೆ ಇದ್ದಾಗ, ನಮ್ಮ ಸುಕೋಮಲೆಯಾದ ನಾಯಿಕೆಗೆ ದೃಷ್ಟಿ ತೆಗೆದು ಹಾಕೋದೋ ಇಲ್ಲ ಗಂಡು ಹುಡುಕೋದೋ ಮಾಡುತ್ತಿರುತ್ತಾರೆ. ಕಾರಂತರ ಪಾತ್ರಗಳನ್ನು ನಾವು 'ಕಾಡ್‌ಬೋರ್ಡ್' ಅಂದರೆ, ಇವೆಲ್ಲಾ ಪಾತ್ರಗಳು ಬರೀ ಜಲ್ಲಿ ಕಾಗದ.

ಆದರೆ ಕಾರಂತರ ವೃದ್ಧೆಯರನ್ನು, 'ಪಥೇರ್ ಪಾಂಚಾಲಿ' ಚಿತ್ರದ ಅಥವಾ 'ಮಹಾಯಾತ್ರಿಕ' ಬಂಗಾಲಿ ಕಾದಂಬರಿಯ ಮುದುಕಿ ಪೀಶಿಯೊಂದಿಗೆ ಹೋಲಿಸಿದಾಗ ನಮಗೆ ಕಾರಂತರ ಪಾತ್ರ ಚಿತ್ರಣದ ಇತಿಮಿತಿ ಅರಿವಾಗುತ್ತದೆ. ಪೀಶಿ ದೈಹಿಕವಾಗಿ,

ಆರ್ಥಿಕವಾಗಿ ಅವಳ ದೂರದ ಸಂಬಂಧಿಯಾದ ಸರ್ವಜಯಾಳ ಗಂಡನನ್ನು ಅವಲಂಬಿಸಿದವಳು. ಸರ್ವಜಯಾಳು ಬಡತನದ ಬೇಗೆ ತಡೆಯದೆ, ಇನ್ನೊಂದು ಬಾಯಿಗೆ ಕೂಳು ಹಾಕಲು ಹಿಂಜರಿದಾಗ, ಪೀಶಿ ತನ್ನ ಮನೆ, ನೆಲ ಎನ್ನುತ್ತಾ ಕೂಡದೆ, ಇನ್ನೊಬ್ಬ ಸಂಬಂಧಿಯ ಮನೆಗೆ ಹೋಗುತ್ತಾಳೆ. ತಿರುಗಿ ಸರ್ವಜಯಾಳ ಗಂಡ ಬಂದು ಕರೆದಾಗ, ಎಲ್ಲವನ್ನೂ ಬಿಟ್ಟು ಅವನ ಮನೆಗೇ ಮತ್ತೆ ಬರುತ್ತಾಳೆ. ಇಲ್ಲಿ ಅವಳಿಗೆ ಆಯ್ಕೆಯ ಪ್ರಶ್ನೆಯಾದರೂ ಎಲ್ಲಿದೆ? ಇದು ಅವಳ ಉಳಿವಿನ ಪ್ರಶ್ನೆ. ಅವಳಿಗೆ ಧರ್ಮ, ನಿಷ್ಠೆ, ದೇವರಲ್ಲಿನ ನಂಬಿಕೆ – ಇವು ಯಾವುವೂ ಪ್ರಶ್ನೆಗಳಲ್ಲ. ಅವಳದು ಮುಖ್ಯವಾಗಿ ಹೊಟ್ಟೆಯ ಪ್ರಶ್ನೆ. ಈ ಸಂದರ್ಭದಲ್ಲಿ ಅವಳ ಅಸಹಾಯಕತೆ, ದುರ್ಗಾ ಅಪೂ ಅವರ ಬಗ್ಗೆ ಇವಳು ತೋರುವ ವಿಶ್ವಾಸ, ಮತ್ತೆ ಸಮಯಕ್ಕೆ ಸರಿಯಾಗಿ ಮಾತನಾಡಿ ಸರ್ವಜಯಾಳನ್ನು ಒಲಿಸಿಕೊಳ್ಳುವ ನರಿಯ ಸೂತ್ರ – ಹೀಗೆ ಅವಳ ಪಾತ್ರದ ಅನೇಕ ಮುಖಗಳನ್ನು ನೋಡುತ್ತೇವೆ. ಆದಕ್ಕೇ ಪೀಶಿ ಪಾತ್ರ ಮೂಡಿ ಬಂದಷ್ಟು ಗಟ್ಟಿಯಾಗಿ ಸ್ಫುಟವಾಗಿ, ನೈಜವಾಗಿ, ಕಾರಂತರ ಪಾತ್ರಗಳು ಮೂಡಲ್ಲ ಅಂತ ನನ್ನ ಭಾವನೆ.

ಎರಡನೆಯದಾಗಿ, ಕಾರಂತರ ಪಾತ್ರಗಳ ಬಗ್ಗೆ ಇನ್ನೊಂದು ಮಾತು ಹೇಳಿದೆ. ಅನಂತಮೂರ್ತಿ ಅವರು ತಮ್ಮ ಪ್ರಬಂಧದಲ್ಲಿ "ಕಾರಂತರು ಮನುಷ್ಯನ ಎಲ್ಲಾ ಭಾವನೆಗಳನ್ನೂ ಚಿಕಿತ್ಸಕ ದೃಷ್ಟಿಯಿಂದ, ನೋಡ್ತಾರೆಯೇ ವಿನಾ, ಈ ಭಾವನೆಗಳ ಸುಳಿಗೆ ಸಿಕ್ಕವರು ಎಷ್ಟೊಂದು ತೀವ್ರವಾಗಿ, ನೈಜವಾಗಿ ಸುಖದುಃಖದ ಒತ್ತಡಕ್ಕೆ ಗುರಿಯಾಗುತ್ತಾರೆ ಅಂತ ಅವರ ದೃಷ್ಟಿಯಿಂದ ಬರೆಯಲ್ಲ." ಎಂದು ಹೇಳಿದ್ದಾರೆ. ಈ ಮಾತನ್ನು ನಾನು ಒಪ್ಪುತ್ತೇನೆ. ಮುಂದೆ ಇದೇ ಲೇಖನದಲ್ಲಿ, ಅನಂತಮೂರ್ತಿ ಹೇಳಿದಾರೆ: "ಈ ರೀತಿಯ ಭಾವಪರವಶತೆ ಕಾರಂತರ ಧೋರಣೆ, ವಸ್ತು ಇವುಗಳ ಜತೆ ಹೊಂದಿಕೊಳ್ಳುವುದಿಲ್ಲ, ಅವುಗಳ ಅಭಿವ್ಯಕ್ತಿಗೆ ಆ ರೀತಿಯ ತನ್ಮಯತೆ ಬೇಕಿಲ್ಲ" ಅಂತ. ನನ್ನ ಮಟ್ಟಿಗೆ, ಇದನ್ನ ಒಪ್ಪಿಕೊಳ್ಳುವುದು ಕಷ್ಟ ಆಗುತ್ತದೆ. ಈಗ ನೋಡಿ, ಪಿ. ಲಂಕೇಶರ 'ರೊಟ್ಟಿ' ಕತೆಯಲ್ಲಿ ಒಬ್ಬ ಮುದುಕಿ ಬರ್ತಾಳೆ. ಒಂದು ಸಣ್ಣ ಘಟನೆಯ ಸಂದರ್ಭದಲ್ಲಿ ಅವಳು ಅನುಭವಿಸುವ ಭಯ, ಸಿಟ್ಟು, ಅಭದ್ರತೆ, ನಾಚಿಕೆ, ವ್ಯಸನ- ಎಲ್ಲವನ್ನೂ ಎಷ್ಟು ಸೂಕ್ಷ್ಮವಾಗಿ, ಸ್ಪಷ್ಟವಾಗಿ ಪುನರ್ ಸೃಷ್ಟಿ ಮಾಡುತ್ತೆ, ಆ ಕಥೆ. ಮೂಲತಃ ಆಕೆ ಒಳ್ಳೆಯವಳೇ, ಬಡವರ ಬಗ್ಗೆ ಅನುಕಂಪ ಇದ್ದವಳೇ. ಆದರೆ ಜರುಗಿದ ಆ ಘಟನೆ ಅವಳಲ್ಲಿ ಗೊಂದಲ ಉಂಟುಮಾಡುತ್ತದೆ. ಇಂತಹ ಪಾತ್ರಗಳು-ಎಂದರೆ ಎಲ್ಲಿ ಕಾದಂಬರಿಕಾರ ಹೊರಿಸಿರುವ ವ್ಯಾಖ್ಯೆಗಳ ಮೂಲಕವಲ್ಲವೆ, ಪಾತ್ರದ ಅನಿಸಿಕೆಗಳ, ಅದರ ಹೊಯ್ದಾಟಗಳ, ನೋವುಗಳ ಮೂಲಕ ಪಾತ್ರಸೃಷ್ಟಿ ಆಗಿರುತ್ತದೋ– ಅಂಥವು ನನಗೆ, ನನ್ನ ಮಟ್ಟಿಗೆ ಹೆಚ್ಚು ಮೌಲ್ಯ ಉಳ್ಳವು.

ಈ ರೀತಿಯ ಅತೀ ಒಳ್ಳೆಯ ಪಾತ್ರಗಳ ಬಗ್ಗೆ ಒಂದು ತುಂಬಾ ವೈಯಕ್ತಿಕವಾದ ಅನಿಸಿಕೆ. ಕಾರಂತರ ಕಾದಂಬರಿಗಳಲ್ಲಿ ಬರುವ ವೃದ್ಧೆಯರ ಪಾತ್ರಗಳು ಔದಾರ್ಯ,

ಸಹಾನುಭೂತಿ, ಪ್ರಾಮಾಣಿಕತೆ, ಪ್ರೇಮ, ಉಪಕಾರ ಮುಂತಾದ ಅನೇಕ ಮೌಲ್ಯಗಳ, ಆದರ್ಶಗಳ ಆಗರ. ಬೇರೆ ಕನಸುಗಾರ ಕಾದಂಬರಿಕಾರರನ್ನು ಬಿಡಿ. ಕಾರಂತರಂತಹ ವಾಸ್ತವವಾದಿಗಳೇ ಇಷ್ಟೆಲ್ಲಾ ಪರಿಪೂರ್ಣವಾದ, ಆದರ್ಶವಾದಿ ಪಾತ್ರಗಳನ್ನು ಸೃಷ್ಟಿಸಿದ್ದಾರೆ. ಇದನ್ನೆಲ್ಲಾ ಓದಿದಾಗ ನಂಗೆ ಸ್ವಲ್ಪ ಭಯವಾಗುತ್ತೆ. ಹೀಗೆ ಸಕಲ ಸುಗುಣಗಳನ್ನೂ ನಾವು ಹೆಂಗಸರಿಂದ ನಿಜ ಜೀವನದಲ್ಲೂ ನಿರೀಕ್ಷಿಸುವುದಾದರೆ, ನನ್ನಂತಹ ಹುಲು ಮಾನವಿಯರಿಗೆ ಇದು ಎಂಥಹ ಕಷ್ಟದ ಸಿದ್ಧಿ ! ಅಲ್ಲದೆ, ಈ ಪಾತ್ರಗಳ ಬಗ್ಗೆ ಹುತಾತ್ಮತೆಯ ಒಂದು ವಾತಾವರಣವಿದೆ. ನನಗೆ ಈ ಕೀರ್ತೀಕರಣದ, ಆದರ್ಶೀಕರಣದ ಭಾರ ಹೊರುವುದು ಬೇಕಾಗಿಲ್ಲ.

ಇದಕ್ಕೆ ಸಂಬಂಧಪಟ್ಟಂತೆ ಇನ್ನೊಂದು ಪ್ರಶ್ನೆ. ಈ ವೃದ್ಧೆಯರು ಪ್ರತಿನಿಧಿಸುವ ಹಲವು ಮೌಲ್ಯಗಳು ನಮ್ಮ ಇಂದಿನ ಬದುಕಿಗೆ ಎಷ್ಟು ಅರ್ಥಪೂರ್ಣವಾಗುತ್ತೆ? ಇವುಗಳನ್ನು ಅಳವಡಿಸಿಕೊಳ್ಳಲು ಸಾಧ್ಯವೆ? ಎಂಬುದು. 'ಇನ್ನೊಂದೇ ದಾರಿ' ಕಾದಂಬರಿಯಲ್ಲಿ ಮೂರನೆಯ ತಲೆಮಾರಿಗೆ ಸೇರಿದ ಜಯರಾಮನ ಅನಿಸಿಕೆ ಇಲ್ಲಿ ಬಹಳ ಪ್ರಸ್ತುತ ಆಗತ್ತೆ. "ಅವನಿಗೆ ಒಂದು ಸಂಗತಿ ಮಾತ್ರ ಚೆನ್ನಾಗಿ ಗೊತ್ತಾಗುತ್ತೆ. ಅದೆಂದರೆ ತಮ್ಮ ತಲೆಮಾರು ಬೇರೆಯೇ ತಲೆಮಾರೆಂದು...ಹಳೆಯ ಸಾಂಪ್ರದಾಯಿಕ ಸಂಸ್ಕಾರಗಳನ್ನು ನೆನೆದಾಗ, ಆಚರಣೆ ನಿಷ್ಠೆಗಳನ್ನು ನೆನೆದಾಗ, ಅವನ ಮನಸ್ಸಿಗೆ ತಾವು ಒಂದಿಷ್ಟು ಲೇಸು ಎನಿಸುವುದೂ ಉಂಟು. ತಮ್ಮಲ್ಲಿ ಬುದ್ಧಿ ಪ್ರಚೋದನೆಯ ಅಂಶ ಅಧಿಕವಾಗಿ ಕಾಣಿಸುತ್ತದೆ, ನಂಬಿಕೆಯ ಅಧಿಕಾರ ಹಿಮ್ಮೆಟ್ಟುತ್ತಿರುವಂತೆ ಕಾಣಿಸುತ್ತದೆ."

ಈ ವೃದ್ಧೆಯರ ಮೌಲ್ಯಗಳ ಬಗ್ಗೆ ಅವರ ಮೂರನೆಯ ತಲೆಮಾರಿನ ಜಯರಾಮನಿಗೇ ಹೀಗೆನ್ನಿಸಿದ ಮೇಲೆ, ಆರು ಏಳನೆಯ ತಲೆಮಾರಿನವರಾದ ನಮಗೆ ಈ ಕಂದಕ ಇನ್ನೂ ದೊಡ್ಡದಾಗಿಯೇ ಕಾಣುವುದರಲ್ಲಿ ಆಶ್ಚರ್ಯವಿಲ್ಲ. ಅಂದಿನಿಂದ ಇಂದಿಗೆ ಅಷ್ಟು ಬದಲಾಗಿರುವ ಸಮಾಜದಲ್ಲಿ, ಅವಿಭಕ್ತ ಕುಟುಂಬವೇ ಸಾಮಾಜಿಕ ಜೀವನ ಕ್ರಮವಾಗಿದ್ದು ಇಂದು ಬಿಡಿ (nuclear) ಕುಟುಂಬಗಳ ಕಡೆ ಚಲಿಸುತ್ತಿರುವ, ಅಂದರೆ ಕುಟುಂಬವಲ್ಲದೆ, ವ್ಯಕ್ತಿಯೊಬ್ಬನೇ ಬೆಳವಣಿಗೆಯ ಕೇಂದ್ರವಾಗುತ್ತಿರುವ ಈ ಕಾಲದಲ್ಲಿ, ಪಾರೋತಿ, ಸರಸೋತಿಯರು, ಸಾವಿತ್ರಿ, ಗಂಗಮ್ಮ ಇವರು ನಂಬಿಕೊಂಡು ಬಂದ ನಂಬಿಕೆಗಳು ನಮ್ಮ ನಂಬಿಕೆಗಳಾಗಲು ಸಾಧ್ಯವಿಲ್ಲ. ಐತಾಳರು ಎರಡನೆಯ ಮದುವೆ ಮಾಡಿಕೊಳ್ಳಲು ಹೊರಡುವ ಬಗ್ಗೆ ಪಾರೋತಿ ಸರಸೋತಿಯರ ಅಸಮಾಧಾನ-ತಮ್ಮನ್ನು ಕೇಳದೆಯೇ ನಿರ್ಧಾರ ಮಾಡಿದರಲ್ಲಾ ಎಂದೇ ಹೊರತು, ಪಾರೋತಿಯನ್ನು ಕಡೆಗಣಿಸಿ, ಅವಳ ಅಸ್ತಿತ್ವವನ್ನೇ ಗಣನೆಗೆ ತಾರದೆ ಹೋದರಲ್ಲಾ ಎಂದಲ್ಲ. 'ಹುಟ್ಟಿಸಿದ ದೇವರು ಹುಲ್ಲು ಮೇಯಿಸಿಯಾನೆ' ಎಂದು ಇಲ್ಲದ ಆ ದೇವರಲ್ಲಿ ಬಂಡೆಯಂತಹ ನಂಬಿಕೆ ಇಟ್ಟು ಬದುಕು ನಡೆಯಿಸುವ ಸಮಾ

ಧಾನ, ವಿಶ್ವಾಸಗಳಿಲ್ಲದವರು ನಾವು. ಈ ಮೌಲ್ಯಗಳ ಬದಲಿಗೆ ಇನ್ಯಾವ ಖಚಿತ ಮೌಲ್ಯಗಳನ್ನೂ ಒಪ್ಪಿಕೊಳ್ಳಲಾರದ ತ್ರಿಶಂಕು ಸ್ಥಿತಿಯಲ್ಲಿದ್ದು, ಅನುಕೂಲ ಸಿಂಧುತ್ವ ವನ್ನೇ ಜೀವನ ತತ್ವವನ್ನಾಗಿಸಿಕೊಂಡಿರುವ ನಮ್ಮ ಬದುಕಿಗೆ, ಈ ವೃದ್ಧೆಯರು ಚಿತ್ರಿ ಸುವ ಮೌಲ್ಯಗಳು ಗಗನ ಕುಸುಮವೇ ಸರಿ.

ಈ ಕಾರಣಕ್ಕಾಗೇ ಮೂಕಜ್ಜಿ ಪ್ರತಿನಿಧಿಸುವ ಮೌಲ್ಯಗಳ ಸಂಪದ–ಮಾನ ವೀಯತೆ, ವಾಸ್ತವಿಕತೆಯ ಅರಿವು, ವೈಚಾರಿಕತೆ; ಮತ್ತೆ ಇವೆಲ್ಲಾ ಕೂಡಿ ನೀಡುವ ಒಂದು ಸಮತೋಲ-ನನಗೆ ಬಹಳ ಮಹತ್ವದ್ದಾಗೋದು. ಮತ್ಸರ, ದ್ವೇಷ, ಕೃತಘ್ನತೆ ಗಳಂತಹ ಶಕ್ತಿಗಳಿಗೆ ಬಲಿಯಾಗಿಯೂ, ದೇವರಲ್ಲಿ ವಿಶ್ವಾಸವಿಲ್ಲದೆಯೂ, ಮನುಷ್ಯ ಮಾನವೀಯ ಮೌಲ್ಯಗಳಲ್ಲಿ ವಿಶ್ವಾಸ ಕಳಕೊಳ್ಳದೆ ಮನುಷ್ಯನಾಗಿ ಬಾಳೋದು ಸಾಧ್ಯ ಎನ್ನುವ ಅವಳ ನಂಬಿಕೆ ಮನಸ್ಸಿಗೆ ಗೆಲುವು, ಧೈರ್ಯ ತಂದುಕೊಡುತ್ತೆ. ಕಾದಂಬರಿಯಲ್ಲಿ ಒಂದು ಕಡೆ ಅವಳು ಹೇಳುತ್ತಾಳೆ :

"ನನ್ನ ಲೆಕ್ಕಾಚಾರ ಇದು-ಹುಟ್ಟಿದ್ದೇವೆ; ನಾವು ಬದುಕಿದ್ದೇವೆ. ಯಾಕೆ ಅಂತ ನಮಗೆ ಗೊತ್ತಿಲ್ಲ. ಇರುವಷ್ಟು ದಿವಸ ನಮಗೂ ಹಿತವಾಗಿ, ನಾಲ್ಕು ಜನರಿಗೂ ಹಿತವಾಗಿ ಬಾಳುವುದಷ್ಟ...ಇನ್ನೊಬ್ಬರಿಗೆ ಹಿತವನ್ನು ಮಾಡಲು ನಮ್ಮಲ್ಲಿ ತ್ರಾಣ ವಿಲ್ಲದೆ ಹೋಗಬಹುದು. ನೂರಾರು ಜನರಿಗೆ ತಮ್ಮ ಹೊಟ್ಟೆಯನ್ನು ತುಂಬಿಸಿ ಕೊಳ್ಳುವುದೇ ದೊಡ್ಡ ಕೆಲಸವಾಗುತ್ತದೆ. ಅಂಥವರಲ್ಲಿ ಹೊರಗಿನವರ ಹಿತದ ಮಾತೇನು ಬಂತು? ಆಗ ಇಷ್ಟನ್ನಾದರೂ ಮಾಡಬಹುದು...ಇನ್ನೊಬ್ಬರಿಗೆ ಅನ್ಯಾಯ ವಾಗದ ರೀತಿಯಲ್ಲಿ ಬದುಕುವುದು. ಪರರಿಗೆ ಸುಖ ಕೊಡಲು ಬಾರದೆ ಹೋದರೆ, ದುಃಖ ಕೊಡದೆ ಇರುವುದಷ್ಟ."

ಇದು ನನಗೆ ಸಕಾರಣವಾದದ್ದು ಅನಿಸುತ್ತೆ. ನಾವೂ ನೀವೂ ಸ್ವಲ್ಪ ಕಾಲೆಟುಕಿ ನಿಂತು, ಕೈ ಚಾಚಿದರೆ ಸಿಗೋ ಅಂತ ಗುರಿ ಅನಿಸತ್ತೆ. ಈ ಕಾಣ್ಕೆಗಾಗಿ ಕಾರಂತರಿಗೆ ನಾನು ಋಣಿ.

# ಕಾರಂತರ ಕಾದಂಬರಿಗಳಲ್ಲಿ ಮಹಿಳೆ : ಗ್ರಾಮೀಣ ಮಹಿಳೆಯರು

ಡಿ. ವಿಜಯ

ಒಬ್ಬ ಲೇಖಕ ಬದುಕನ್ನು ಗ್ರಹಿಸುವ, ಅದಕ್ಕೆ ಪ್ರತಿಕ್ರಿಯಿಸುವ ಬಗೆ ಯಾವುದೆಂಬುದನ್ನು ಆ ಲೇಖಕನ ಚಿಂತನದ್ರವ್ಯ ಯಾವ ದಿಕ್ಕಿಗೆ ವಾಲಿದೆ ಎಂಬುದರ ಮೇಲಿಂದ ಗ್ರಹಿಸಬಹುದು. ಕಾರಂತರು ಯಥಾಸ್ಥಿತಿ ನೆಲೆಯಲ್ಲಿ ನಿಲ್ಲದವರು ಎಂಬುದು ಮೇಲುನೋಟಕ್ಕೇ ಅನಿಸುವಂಥದು. ಆದರೆ ಅವರು ಬಯಸುವ ಬದಲಾವಣೆಯ ಸ್ವರೂಪ ಎಂಥದು ಎನ್ನುವಾಗ ಮಾತ್ರ ಅನೇಕ ಸಂದರ್ಭಗಳಲ್ಲಿ ಅವರ ಕಾದಂಬರಿಗಳ ಪ್ರಬಂಧಧ್ವನಿ ಆಮೂಲಾಗ್ರ ಬದಲಾವಣೆಗಳಿಗಿಂತ ಸುಧಾರಣೆಯ ಕಡೆ ವಾಲಿದೆ ಎಂದೇ ತೋರುತ್ತದೆ. ಆದ್ದರಿಂದ ಅವರ ಕಾದಂಬರಿಗಳಲ್ಲಿ ನಾವು ಕಾಣುವ ಗ್ರಾಮೀಣ ಮಹಿಳೆಯರ ಬದುಕಿನ ಸ್ವರೂಪ ಮತ್ತು ಮೌಲ್ಯಗಳಲ್ಲಿ ಹಳೆಯದರಲ್ಲಿರುವ ಒಳಿತನ್ನು ಉಳಿಸುವ ಕಾಳಜಿ, ಅನಿವಾರ್ಯ ಸಂದರ್ಭಗಳಲ್ಲಿ ಹೊಸತರೆಡೆಗೆ ಕೈಚಾಚುವ ಪ್ರಯತ್ನ ಕಂಡುಬರುತ್ತದೆ. ಕಾದಂಬರಿಕಾರ ಕಾರಂತರಿಗೆ ಖಚಿತವಾದ ಮೌಲಿಕ ನೆಲೆಯಿದೆ. ಈ ನೆಲೆಯಿಂದ ನಿರ್ಣಯವಾಗುವ ಒಳಿತು-ಕೆಡಕುಗಳ ಬಗ್ಗೆ ಸ್ಪಷ್ಟವಾದ ಪ್ರತಿಕ್ರಿಯೆ ಇದೆ. ಇಂಥ ಸಂದರ್ಭಗಳಲ್ಲಿ ಬರವಣಿಗೆ 'ಸ್ಯಾದ್ವಾದಿತ್ವ'ವನ್ನು ಕಳೆದುಕೊಳ್ಳುತ್ತದೆ. ಆದರಿಂದಾಗಿ ಅನೇಕ ಗ್ರಹಿಕೆಗಳು ಏಕಪಕ್ಷೀಯ ರಭಸದಲ್ಲಿ ಉಳಿದ ಸ್ವರಗಳ ಅಸ್ತಿತ್ವವನ್ನು ಮರೆಮಾಡುತ್ತವೆ. ಗ್ರಾಮೀಣ ಮಹಿಳೆಯರನ್ನು ಕುರಿತಾದ ಕಾರಂತರ ಕಾದಂಬರಿಗಳ ಗ್ರಹಿಕೆ ಕೂಡ ಹಲವೆಡೆ ವಸ್ತುಸ್ಥಿತಿಯ ಇತರ ಮುಖಗಳನ್ನು ತನ್ನ ಲಕ್ಷ್ಯದಿಂದಾಚೆ ಇರಿಸಿದಂತೆ ತೋರುತ್ತದೆ. ಹೀಗಿದ್ದೂ ಕಾರಂತರ ಗ್ರಾಮೀಣ ಮಹಿಳೆಯರು ಅವರ ಕಾದಂಬರಿಗಳ ಅತ್ಯಂತ ಕಸುವುಳ್ಳ ಪಾತ್ರಗಳಾಗಿವೆ. ಈ ಮಹಿಳೆಯರ ಬದುಕಿನ ಅತ್ಯಂತ ದಾರುಣ ಮತ್ತು ಸತ್ವಯುತ ಮುಖಗಳನ್ನು ಕಾಣಿಸುತ್ತಾ ಅವರ ಪ್ರಪಂಚವನ್ನು ಹೀಗೆ ಕಾಣಿಸಿದವರು ಕಾರಂತರು ಎಂಬುದನ್ನೂ ಕನ್ನಡ ಕಾದಂಬರಿಗಳ ಇತಿಹಾಸದಲ್ಲಿ ಇದು ತುಂಬ ಮಹತ್ತ್ವದ ಅಂಶ ಎಂಬುದನ್ನೂ ನನ್ನ ಗಮನದಲ್ಲಿಟ್ಟುಕೊಂಡು ಈ ಲೇಖನವನ್ನು ಪ್ರಾರಂಭಿಸುತ್ತೇನೆ.

ಕಾರಂತರ ಕಾದಂಬರಿಗಳ ಗ್ರಾಮೀಣ ಮಹಿಳೆಯರು ಸಾಮಾನ್ಯವಾಗಿ ಔಪಚಾರಿಕ ಶಿಕ್ಷಣವನ್ನು ಪಡೆಯದಿದ್ದವರು. ನಾಗರಿಕತೆಯ ಗಾಳಿಗೆ ನೇರವಾಗಿ ಸಿಕ್ಕದಿದ್ದವರು. 'ನೈದಿಲೆ ಪ್ರತಿನಿಧಿಸುವ ಮೌಲ್ಯಗಳಲ್ಲಿ ಗೌರವ'ವಿರುವ ಕಾರಂತರು

ಮೆಚ್ಚಬಲ್ಲ ರೀತಿಯಲ್ಲಿ ಬದುಕಿದವರು. ಅಪ್ರಾಮಾಣಿಕತೆ, ಬೇಜವಾಬ್ದಾರಿತನಗಳಿಗೆ ಹೆಂಗಸು—ಗಂಡಸೆಂಬ ಭೇದವಿಲ್ಲದಿದ್ದರೂ ಅಪ್ರಾಮಾಣಿಕತೆ, ಬೇಜವಾಬ್ದಾರಿಕೆಯಿಂದ ಕೂಡಿದ ಗಂಡಸರು ಕಾರಂತರ ಕಾದಂಬರಿ ಪ್ರಪಂಚದಲ್ಲಿ ಸಾಕಷ್ಟಿರುವುದರಿಂದ ಸಂಸಾರದ ತಕ್ಕಡಿಯನ್ನು ತೂಗಿಸುವ ಸಹನಶೀಲೆಯರು, ಶ್ರದ್ಧಾವಂತೆಯ ಎದ್ದು ಕಾಣುತ್ತಾರೆ. ಇಲ್ಲಿನ ಅನೇಕರು ತಮ್ಮ ವೈಯಕ್ತಿಕ ಜೀವನ ಸಂತೋಷವನ್ನು ಬಲಿ ಕೊಟ್ಟವರು, ಸುಖಕ್ಕಿಂತ ಕರ್ತವ್ಯ ಮುಖ್ಯ ಎಂಬ ಧೋರಣೆ ತಳೆದವರು. ಇನ್ನೊಂದೇ ದಾರಿಯ ಹೊನ್ನಜ್ಜಿ, ಮುಗಿದ ಯುದ್ಧದ ಲಕ್ಷ್ಮಿ, ಶನೀಶ್ವರನ ನೆರಳಿನಲ್ಲಿಯ ಕಾವೇರಮ್ಮ, ಅಳಿದಮೇಲೆ ಕಾದಂಬರಿಯ ಮೂಕಾಂಬು, ಪಾರೋತಿ, ಕರುಳಿನಕರೆಯ ಭಾಗೀರಥಿ, ವೆಂಕಮ್ಮ-ಇವರೆಲ್ಲರ ಬದುಕಿನ ಹೋರಾಟ, ಪರಂಪರಾಗತ ಜೀವನ ಕ್ರಮದ ಬಗೆಗಿನ ನಿಷ್ಠೆ ಬೇಡಿದ ತ್ಯಾಗ ಸಣ್ಣದಲ್ಲ.

ಗ್ರಾಮೀಣ ಹಿನ್ನೆಲೆಯಲ್ಲಿ ಬರುವ ಬಹುತೇಕ ಮಹಿಳೆಯರು ಬದುಕಿನ ಆಘಾತ, ವೈಪರಿತ್ಯಗಳನ್ನು ಎದುರಿಸುತ್ತಾ ಗಟ್ಟಿಕೊಂಡವರು. ಬದುಕಿಗೆ ಹೆದರಿ ಓಡುವ ಸಾಯುವ ಚಿಂತೆ ಮಾಡುವ, ವಿರಕ್ತಿಯ ಮುಸುಕಿನಲ್ಲಿ ಅಲೆಯುವ, ವಿಲಾಸದಲ್ಲಿ ಕರ್ತವ್ಯ ಮರೆತ ಗಂಡಸರಿಗೆ ಕಾರಂತರ ಕಾದಂಬರಿಗಳಲ್ಲಿ ಬರವಿಲ್ಲ. ಆದರೆ ಇಲ್ಲಿನ ಮಹಿಳೆಯರು ಇದಕ್ಕೆ ವಿರುದ್ಧವಾಗಿ ಜೀವನಾಭಿಮುಖಿಗಳು, ಕರ್ತವ್ಯಶೀಲೆಯರು. ಕೆಲವು ಮಹಿಳೆಯರು ಸಾಯುವ ಪ್ರಯತ್ನ, ಯೋಚನೆ ಮಾಡಿದರೂ ಅವರ ಮಕ್ಕಳ ಅಥವಾ ಅವಲಂಬಿತರ ಒಳಿತಿನ ಸೆಳೆತ ಅವರನ್ನು ಹಿಂದಕ್ಕೆಳೆದಿದೆ. ಆಶ್ಚರ್ಯಕರ ವಾದ ಛಲದಿಂದ ಗಂಡಸರು ಹದಗೆಡಿಸಿದ ಸಂಸಾರವನ್ನು ಕಟ್ಟಿ ಉಳಿಸುತ್ತಾರೆ. ಕಾರಂತರ ಕಾದಂಬರಿಗಳ ಸ್ತ್ರೀ ಪುರುಷ ಪಾತ್ರಗಳ ಈ ಸ್ವಭಾವ ವೈರುಧ್ಯ ಎದ್ದು ಕಾಣುವಂಥದು. ಈ ವೈರುಧ್ಯ ಕೇಂದ್ರುವೇ ಇಬ್ಬರನ್ನೂ ಉಜ್ಜಿ ನೋಡುವ ನಿಕಷವೂ ಆಗಿದೆ. ಜೀವನ ಪರವಾದ, ನಿಷ್ಠಾವಂತ ಹೋರಾಟದ ಪರವಾದ ಲೇಖಕರ ಮಾನ ದಂಡದಲ್ಲಿ ಇಂಥ ಮಹಿಳೆಯರು ಗೆದ್ದಿದ್ದಾರೆ. ಕಾರಂತರ ಗೌರವ, ಪ್ರೀತಿ ಈ ತ್ಯಾಗ ಮೂಲ ಹೋರಾಟಕ್ಕೆ, ಜೀವಸ್ಪಂದಿ ಅಂತಃಕರಣಕ್ಕೆ ಸಂದಿದೆ ಎಂಬುದು ಸ್ಪಷ್ಟವೇ ಇದೆ.

ಗ್ರಾಮೀಣ ಮಹಿಳೆಯರ ಬದುಕಿನ ಸ್ವರೂಪವನ್ನು ನಿರ್ಣಯಿಸುವಂಥದು ಮುಖ್ಯವಾಗಿ ಅವರ ವೈವಾಹಿಕ ಚೌಕಟ್ಟು. ವಿವಾಹದ ಚೌಕಟ್ಟಿನ ಒಳಗೆ ಬರುವ ವರ್ಗ ಒಂದಿರುವಂತೆ ಅದರ ಹೊರಗಿರುವ ಒಂದು ವರ್ಗವೂ ಇದೆ. ಸಾಂಪ್ರದಾಯಿಕ ಶಬ್ದಗಳಲ್ಲಿ ಅವರನ್ನು 'ಗರತಿ'ಯರು ಮತ್ತು 'ವೇಶ್ಯೆ'ಯರು ಎನ್ನಬಹುದು. ಇದು ಸಾಮಾನ್ಯವಾಗಿ ವೈಯಕ್ತಿಕ ಆಯ್ಕೆಯ ಸಂಗತಿಯಲ್ಲ. ಹುಟ್ಟಿನಿಂದ ಒಬ್ಬ ಮಹಿಳೆ ಈ ಎರಡು ವರ್ಗಗಳಲ್ಲಿ ಎಲ್ಲಿಗೆ ಸೇರುತ್ತಾಳೆ ಎಂಬುದೇ ಅವಳ ಜೀವನಕ್ರಮವನ್ನು ನಿರ್ಣಯಿಸುತ್ತದೆ. ಹಾಗೆಂದ ಮಾತ್ರಕ್ಕೆ ಈ ವರ್ಗದ ಕಟ್ಟನ್ನು ಯಾರೂ ಮೀರಿಲ್ಲ

ವೆಂದಲ್ಲ. ಕನ್ಯಾಬಲಿಯ ಮಾಲತಿಯಂಥವರು ಹುಟ್ಟಿನಿಂದ ವೇಶ್ಯೆಯಲ್ಲದಿದ್ದರೂ ವೇಶ್ಯೆಯಾದುದುಂಟು. ಇನ್ನೊಂದೇ ದಾರಿಯ ಉಮಾ, ಉಕ್ಕಿದ ನೊರೆಯ ಗುಲಾಬಿಯ ಮಗಳು, ಮೈಮನಗಳ ಸುಳಿಯಲ್ಲಿನ ಮಂಜುಳೆಯ ಮೊಮ್ಮಗಳು- ಇವರೆಲ್ಲರೂ ತಮ್ಮ ವೇಶ್ಯಾಕುಲದ ಜೀವನಕ್ರಮವನ್ನು ಅಪೇಕ್ಷೆ ಪಡದವರು, ಅದರಿಂದ ಈಚೆ ಬಂದವರು. ಇಂಥ ಕೆಲವು ಅಪವಾದಗಳನ್ನು ಬಿಟ್ಟರೆ ಈ ಮಹಿಳಾ ಜಾತಿಗಳು ಭಾರತದ ಜಾತಿವ್ಯವಸ್ಥೆಯಂತೆ ಬಹಳ ಸ್ಥಗಿತವಾದವು. ಇದನ್ನು ಬಿಟ್ಟರೆ ಮತ್ತೊಂದು ವರ್ಗವೂ ಇದೆ. ಅದೆಂದರೆ ವೈವಾಹಿಕ ಚೌಕಟ್ಟನ್ನು ಒಪ್ಪಿಯೂ ಏಕಪತಿತ್ವದ ಜಾಡನ್ನು ಒಪ್ಪದವರು. ಹೆತ್ತಳಾ ತಾಯಿಯ ಕುಸುಮಾ, ಮುಗಿದ ಯುದ್ಧದ ಸುಬ್ಬಿ ಮೊದಲಾದವರನ್ನು ಈ ಗುಂಪಿಗೆ ಸೇರಿಸಬಹುದು. ವಿವಾಹೇತರ ಸಂಬಂಧಗಳನ್ನು ಹೊಂದಿರುವವರಲ್ಲಿ ಅನೇಕರು ಅಬ್ರಾಹ್ಮಣರು ಎಂಬುದು ಗಮನಾರ್ಹ. ಆದರೆ ಇದನ್ನು ವೇಶ್ಯಾವೃತ್ತಿಯೆನ್ನಲಾಗುವುದಿಲ್ಲ. ಕುಸುಮಾ ಮತ್ತು ಸುಬ್ಬಿ ತಮ್ಮ ದೇಹಗಳನ್ನು ಮಾರಲಿಲ್ಲ. ಸುಬ್ಬಿ ಮತ್ತು ಅಚ್ಚುತನ ಸಂಬಂಧ ಒಡೆಯ ಮತ್ತು ಆಳಿನ ಸಂಬಂಧವೂ ಆಗಿದೆಯಾದರೂ ಅಲ್ಲಿ ಆರ್ಥಿಕ ಅಂಶ ಮುಖ್ಯವಾಗಿಲ್ಲ, ಮೈ ಮನಗಳ ಸೆಳೆತವೇ ಮುಖ್ಯವಾಗಿದೆ ಎಂಬುದು ಸ್ಪಷ್ಟವಾಗಿದೆ. ಇಂಥ ಕೆಲವು ಮಹಿಳೆಯರನ್ನು ಹೊರತುಪಡಿಸಿದರೆ ಉಳಿದವರೆಲ್ಲ ಗರತಿ ಅಥವಾ ವೇಶ್ಯಾಪಟ್ಟದ ಸಿಹಿಕಹಿಗಳನ್ನು ಉಂಡವರು.

ಏಕಪತಿತ್ವವನ್ನು ಮಾತ್ರ ಕಡ್ಡಾಯಗೊಳಿಸುವ, ಬಹುಪತ್ನಿತ್ವವನ್ನು ಘೋಷಿತ ಅಘೋಷಿತ ನೆಲೆಗಳಲ್ಲಿ ಒಪ್ಪುವಂಥ ಸಮಾಜದಲ್ಲಿ ಮಹಿಳೆಯರು ಸುಖಕ್ಕಿಂತ ಹೆಚ್ಚಾಗಿ ದುಃಖವನ್ನೇ ನಿರೀಕ್ಷಿಸುವುದು ಹೆಚ್ಚು ಸಹಜ. ಇಂಥ ಸಮಾಜದಲ್ಲಿ ವಿವಾಹ ಮಹಿಳೆಯರ ಪಾಲಿನ ಬದುಕನ್ನು ಆತ್ಯಂತಿಕವಾಗಿ ನಿರ್ಣಯಿಸುತ್ತದೆ. ನಂತರದ ಇಡಿಯಾದ ಜೀವನ ಈ ವಿವಾಹದ ಸುತ್ತ ಹೆಣೆಯಲ್ಪಡುವಂಥದು. ಕೈಹಿಡಿದವನು ಏನಾಗಿದ್ದಾನೆ, ಎಂಥ ಪರಿಸರದಲ್ಲಿ ಬದುಕುತ್ತಾನೆ ಎಂಬುದರಿಂದಲೇ ಈ ಮಹಿಳೆಯರ ಜೀವನದ ದಿಕ್ಕು ನಿರ್ಣಯವಾಗುತ್ತದೆ. ಕೈಹಿಡಿದವನು ಬದುಕಿರಲಿ, ಬಿಡಲಿ, ಬದುಕಿದ್ದೂ ಇಲ್ಲದಂತಿರಲಿ ಈ ಕೈಹಿಡಿದಿದ್ದರ ಪರಿಣಾಮ ಈ ಮಹಿಳೆಯರ ಮೇಲೆಯೇ ಹೆಚ್ಚಾಗಿ ಬೀಳುವಂಥದು. ಬೆಟ್ಟದ ಜೀವದ ಗೋಪಾಲಯ್ಯ, ಉಕ್ಕಿದ ನೊರೆಯ ಶೀನಭಟ್ಟ, ಇನ್ನೊಂದೇ ದಾರಿಯ ನರಸಿಂಹಯ್ಯ ಇಂಥ ಜೀವನ ಸಂಗಾತಿಗಳು ದೊರೆತಾಗ ಶಂಕರಿ, ಮೀನಾಕ್ಷಿ, ಜಾನಕಮ್ಮನಂಥ ಮಹಿಳೆಯರು ಎಲ್ಲ ಮಿತಿಗಳ ಒಳಗೂ ನೆಮ್ಮದಿಯ ಮುಖ ಕಾಣಬಹುದು. "ಅವಳ ದೀರ್ಘ ಜೀವನದಲ್ಲಿ ತನಗಾಗಿ ಇದು ಬೇಕು ಅದು ಬೇಕು ಎಂದು ಬೇಡಿದವಳಲ್ಲ. ಅವಳಿಗೂ ಅವಳ ಅತ್ತಿಗೆಗೂ ಮನೆಯ ಯಜಮಾನನಲ್ಲಿ ಅಖಂಡ ವಿಶ್ವಾಸ. ಅವರು 'ಸಲ್ಲದ ದಾರಿಯನ್ನು ತುಳಿಯುವವರಲ್ಲ, ಇಲ್ಲದ ಆಸೆಯನ್ನು ಹಿಡಿವವರಲ್ಲ. ಕೈಯಲ್ಲಿದ್ದೂ ಇಲ್ಲ ಎಂಬುವರಲ್ಲ' ಎಂಬ ವಿಷಯದಲ್ಲಿ ನಂಬಿಕೆ" (ಉಕ್ಕಿದ ನೊರೆ, ಪು. 87) ಎಂಬ ಮಾತು ಇಂಥವರ ವಿಷಯಕ್ಕೆ ಒಟ್ಟಾಗಿ ಅನ್ವಯಿಸುತ್ತದೆ. ಈ ನಂಬಿಕೆಯನ್ನು ಅವರ ಜೀವನ ಸಂಗಾತಿಗಳು ಅವರಲ್ಲಿ ಹುಟ್ಟಿ

ಸಿದ್ದರಿಂದಲೇ ಅವರ ಬದುಕು ವಿಶೇಷವಾದ ಅಲ್ಲೋಲಕಲ್ಲೋಲಕ್ಕೆ ಒಳಗಾಗಿಲ್ಲ. ಆದರೆ ಇಂಥವರು ಕಾರಂತರ ಕಾದಂಬರಿಗಳ ಗ್ರಾಮೀಣ ಮಹಿಳೆಯರಲ್ಲಿ ಅಲ್ಪ ಸಂಖ್ಯಾತರೆಂದೇ ಹೇಳಬೇಕು. ಈ ಮಹಿಳೆಯರು ಬದುಕನ್ನು ಜತೆಯಾಗಿಯೇ ಎದುರಿಸುವುದರಿಂದ, ಅವರ ಗಂಡಂದಿರು ಸಾಂಸಾರಿಕ ಕಷ್ಟ ಸುಖಗಳನ್ನು ಸಮನಾಗಿಯೇ ಹೊರುವುದರಿಂದ ಅವರ ವ್ಯಕ್ತಿತ್ವದ ಒಳಪದರದ ವಿಶೇಷ ಗುಣಗಳು ವ್ಯಕ್ತವಾಗುವಂಥ ಸಂದರ್ಭಗಳು ಕಡಿಮೆ.

ಈ ಅಲ್ಪಸಂಖ್ಯಾತರನ್ನು ಬಿಟ್ಟರೆ ಕಾರಂತರ ಉಳಿದ ಗ್ರಾಮೀಣ ಮಹಿಳೆಯರು ವಿವಾಹದ ಹೆಬ್ಬಾಗಿಲಿನಿಂದ ಕಷ್ಟಪರಂಪರೆಗಳೊಳಕ್ಕೆ ಬಂದಿದ್ದಾರೆ. ಅನೇಕರ ಪಾಲಿಗೆ ಈ ಹೆಬ್ಬಾಗಿಲು ಇವರು ಒಳಗೆ ಬಂದ ಮೇಲೆ ಮುಚ್ಚಿಬಿಡುವುದರಿಂದ ಇನ್ನು ಮುಂದಿನ ಅವರ ಬದುಕೆಲ್ಲ ಅದರೊಳಗೇ. ಸಾಂಪ್ರದಾಯಿಕ ಜೀವನಕ್ರಮದಲ್ಲಿ ಗೋತ್ರ, ಜಾತಕ, ಚಿಹ್ನಗಳೇ ಮದುವೆಯನ್ನು ನಿರ್ಣಯಿಸುವುದರಿಂದ ಇವುಗಳೆಲ್ಲ ಸೇರಿ ಹುಡುಗಿಯನ್ನು ಎಲ್ಲಿಗೆ ಎಸೆಯುತ್ತವೋ ಅಲ್ಲಿ ಹೋಗಿ ಬಿದ್ದು ನಿಧಾನವಾಗಿ ಕಣ್ತೆರೆದು ತಾನೆಲ್ಲಿ ಬಿದ್ದಿದ್ದೇನೆಂದು ನೋಡಿ, ತಿಳಿದು ಎದುರಿಸಬೇಕು. ಇನ್ನೊಂದೇ ದಾರಿಯ ಹೊನ್ನಜ್ಜಿ, ಮರಳಿಮಣ್ಣಿಗೆಯಲ್ಲಿನ ಪಾರೋತಿ, ನಂಬಿದವರ ನಾಕನರಕದ ವಾಗ್ದೇವಿ, ಸತ್ಯಭಾಮೆ, ಸ್ವಪ್ನದ ಹೊಳೆಯ ರುಕ್ಮಿಣಿ—ಇಂಥ ಎಲ್ಲ ಪಾತ್ರಗಳೂ ನಾಳೆ ಯಾವ ಪ್ರಸಂಗಗಳನ್ನು ಎದುರಿಸಿಯಾವು ಎಂಬುದನ್ನು ವಿವಾಹಪೂರ್ವದಲ್ಲಿ ನಿಶ್ಚಯಿಸುವುದು ಕಷ್ಟ. ಹುಟ್ಟು, ಸಾವಿನಷ್ಟೇ ಅನಿಶ್ಚಿತ-ನಿಶ್ಚಿತ ಸಂಗತಿ ವಿವಾಹೋತ್ತರ ಕಾಲದ್ದು. ಈ ಅನಿಶ್ಚಯತೆ, ಸಾಮಾನ್ಯವಾಗಿ ಬರುವ ಕಠಿಣ ಪ್ರಸಂಗಗಳನ್ನು ಈ ಮಹಿಳೆಯರು ತಮ್ಮ ಅನುಭವದಿಂದ ತಿಳಿದಿದ್ದಾರೆ. ಅಂತೆಯೇ ತಮ್ಮ ಹೆಣ್ಣು ಮಕ್ಕಳನ್ನು ಈ ಎಲ್ಲ ತಾಯಂದಿರೂ ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಸಿದ್ಧಗೊಳಿಸಿದ್ದಾರೆ. ಮುಗಿದ ಯುದ್ಧದ ಸೀತೆಯಾಗಲೀ, ಸ್ವಪ್ನದ ಹೊಳೆಯ ತುಂಗಮ್ಮನಾಗಲೀ ತಮ್ಮ ಹೆಣ್ಣುಮಕ್ಕಳನ್ನು ಮುಂದಿನ ಬದುಕಿಗೆ ಅಣಿಗೊಳಿಸುವುದು ಹೀಗೆ : 'ನೀನು ಮಾಣಿ; ಅವಳು ಹೆಣ್ಣು' ಎಂಬ ವಿಷಾದ, ಎಚ್ಚರಿಕೆಯ ಪಲ್ಲವಿ ಎಲ್ಲೆಲ್ಲೂ ಅನುರಣನಗೊಂಡಿದೆ. ಅವರು ಬೆಳೆದು ಬಂದದ್ದು ಹಾಗೆ, ತಮ್ಮ ಹೆಣ್ಣುಮಕ್ಕಳನ್ನು ಬೆಳೆಸಬೇಕಾಗಿರುವುದು ಹಾಗೆ.

ಬದುಕಿನ ಕಹಿಗಳನ್ನೆಲ್ಲ ನುಂಗಿ ಬದುಕಿನುದ್ದಕ್ಕೂ ನಿಷ್ಕಪಟ ಹೋರಾಟವನ್ನು ನಡೆಸಿದ ಅನೇಕರು ಇಲ್ಲಿದ್ದಾರೆ. ಇಂಥ ಹೋರಾಟಕ್ಕೆ ಬೇಕಾದ ಬಲವನ್ನು,ಸಮತೋಲನವನ್ನು ಅವರು ತಮ್ಮ ಆಳವಾದ ಧಾರ್ಮಿಕ ನಂಬಿಕೆ, ಜೀವನಶ್ರದ್ಧೆಯ ಊರುಗೋಲಿನಿಂದ ಪಡೆದಿದ್ದಾರೆ. ಕೊನೆಯವರೆಗೂ ಸಮಾಧಾನವನ್ನು ಕಾಯ್ದುಕೊಂಡಿದ್ದಾರೆ. ಕಾವೇರಮ್ಮ, ಹೊನ್ನಜ್ಜಿ, ರುಕ್ಮಾಯಿಯಂಥವರು ಸಾವನ್ನು ಈ ಸಮಾಧಾನದಿಂದಲೇ ಎದುರಿಸಿದ್ದಾರೆ. ಆದರೆ ಆ ಮಹಿಳೆಯರೂ ಮನುಷ್ಯ ನೆಲೆಯಲ್ಲಿ ಬದುಕಿದವರು

ಅವರ ಮೈಮನದ ಆಕಾಂಕ್ಷೆಗಳು ಅವರನ್ನೂ ಕಾಡುತ್ತವೆ. 'ಆದರೆ ಬಲ್ಲಳು-ವಿಧವೆಯು ಬಾಳು ಹೀಗೆಯೇ ಕಳೆಯಬೇಕಾದುದು ಎಂದು. ಪಾಲಿಗೆ ಬಂದುದನ್ನು ಕಣ್ಮುಚ್ಚಿ ಅನುಭವಿಸತೊಡಗಿದಳು. ಈಗ ಅವಳಿಗೆ ದೇಹದ ಬಯಕೆಯೆಂಬುದಿಲ್ಲ; ಅದರ ನೆನಪೂ ಹೊಳೆಯುವುದಿಲ್ಲ' (ಸ್ವಪ್ನದ ಹೊಳೆ, ಪು. 231) ಎಂಬುದರ ಯತಾರ್ಥತೆ ಹೇಗೆ ಸಂಭವನೀಯವೋ ಸತ್ಯಭಾಮೆ ತನ್ನ ದೇಹದ ಬಯಕೆಗೆ ಮೈದುನನಾದ ಪರಮನನ್ನು ಬಳಸಿಕೊಳ್ಳಲು ಯತ್ನಿಸಿದ್ದೂ ಸಂಭವನೀಯವೇ. ಸಾಂಪ್ರದಾಯಿಕ ಜಾಡನ್ನು ತಿರಸ್ಕರಿಸಿದ, ವೈಯಕ್ತಿಕ ನೆಲೆಯಲ್ಲಿ ಅದನ್ನು ಪ್ರತಿಭಟಿಸಿದ ಮಹಿಳೆಯರೂ ಈ ಹಿನ್ನೆಲೆಯಲ್ಲಿದ್ದಾರೆ. ಅಪನಂಬಿಕೆಯ ಅಗ್ನಿಯಲ್ಲಿ ಬೆಂದು ರೋಸಿಹೋದ ನಂಬಿದವರ ನಾಕ ನರಕದ ಸತ್ಯಭಾಮೆ ವಿನಾಯಕನೊಡನೆ ಓಡಿಹೋಗಿ ಮರು ಮದುವೆಯಾಗಿದ್ದು ಇಂಥ ಒಂದು ಪ್ರತಿಭಟನೆ. ಅವಳ ವೈಯಕ್ತಿಕ ಸುಖವನ್ನು ಕಸಿದು ಕೊಳ್ಳಲು ಹವಣಿಸುವ ಸಮಾಜ ತನ್ನ ಕ್ರೌರ್ಯಕ್ಕೆ ನಾಲಿಗೆ ನೀಡಿದೆ. ತನ್ನ ಪಾಲಿಗೆ ಬಂದ ನರಕದ ವಿರುದ್ಧ ಪ್ರತಿಭಟಿಸಿದ ಮತ್ತೊಬ್ಬಾಕೆ ಧರ್ಮರಾಯನ ಸಂಸಾರದ ಸರಸ್ವತಿ. ಅವಳ ಪ್ರತಿಭಟನೆಯಲ್ಲಿ, ದಿಟ್ಟತನದಲ್ಲಿ ಸೇಡು, ಪ್ರೇಮ, ಕಾಮಗಳೆಲ್ಲ ಬೆರೆತಿವೆ. ಮಹಾಬಲ ಬದುಕಿದ್ದರೆ ಸರಸ್ವತಿಯ ಪ್ರತಿಭಟನೆಗೆ ಮತ್ತಾವ ರೀತಿಯ ಪ್ರತಿಭಟನೆ, ಗೆಲುವು ಸೋಲುಗಳು ಬರುತ್ತಿದ್ದವೋ. ಆದರೆ ಅವನ ಸಾವಿನಿಂದ ಅದು ತಪ್ಪಿತು. ಆದರೆ ಈ ಪ್ರತಿಭಟನೆಗೆ ಮಹಾಲಕ್ಷ್ಮಿಯಿಂದಾಗಲೀ ಸ್ವತಃ ಸರಸ್ವತಿಯಿಂದಾಗಲೀ ಮುಕ್ತ ಮನಸ್ಸಿನ ಮನ್ನಣೆ ದೊರಕಿತೆಂದು ಇದರ ಅರ್ಥವಲ್ಲ. ವಿವಾಹದ ಚೌಕಟ್ಟಿನ ಹೊರಗಿನ ಈ ಸಂಬಂಧವನ್ನು ಸಹಜವಾಗಿ ಅಪರಾಧಭಾವವಿಲ್ಲದೆ ಒಪ್ಪಿಕೊಳ್ಳುವ ಸ್ಥಿತಿ ಇದಲ್ಲ. ಸರಸ್ವತಿ ಅನುಭವಿಸಿದ ನರಕದ ಹಿನ್ನೆಲೆಯಲ್ಲಿ, ಮನುಷ್ಯ ಸಹಜ 'ದೌರ್ಬಲ್ಯ'ದ ಹಿನ್ನೆಲೆಯಲ್ಲಿ ಇದೊಂದು ಕ್ಷಮಾರ್ಹ ಘಟನೆ ಎಂಬ ನೆಲೆಯಲ್ಲಿ ನಿಲ್ಲುತ್ತದೆ. ಇಂಥ ಅಪರೂಪದ ಸಿಡಿತಗಳನ್ನು ಕಾರಂತರು ಮುಜುಗರವಿಲ್ಲದೆ ಎದುರಿಸಿದ್ದಾರೆಯೇ ಎಂಬ ವಿಷಯದಲ್ಲಿ ನನಗೆ ಅನುಮಾನವಿದೆ. ಸತ್ಯಭಾಮೆ ಸದ್ದಿಲ್ಲದೆ ಓಡಿ, ಬೇರೊಂದು ಹೊಸದಾದ, ದೂರದ ಪರಿಸರದಲ್ಲಿ ಬದುಕುತ್ತಾಳೆ. ಏನು, ಎತ್ತ, ಹೇಗೆ ಎಂದರೆ ಮೌನಕ್ಕೆ ಅನೇಕ ಅರ್ಥಗಳು ಸಾಧ್ಯ. ಮಹಾಬಲ ಸತ್ತು ಸರಸ್ವತಿಯ ಸಮಸ್ಯೆ ಸ್ವಲ್ಪ ತಿಳಿಯಾಗಿದೆ. ಇದೊಂದು ಘೋಷಿತ ನಿಲುವಾಗಿ ಪರಿಸರವನ್ನು ಆಕೆ ಎದುರಿಸಿದಳೆ? ಗೊತ್ತಿಲ್ಲ, ಕಾದಂಬರಿ ಅಲ್ಲಿಗೆ ಮುಗಿದಿದೆ. ಸರಸಮ್ಮನ ಸಮಾಧಿಯಲ್ಲಿ ಎದುರಾಗಬಹುದಾಗಿದ್ದ ಇಂಥ ಒಂದು ಸಮಸ್ಯೆಯನ್ನು ಕಥೆಯ ಚೌಕಟ್ಟೇ ಪರಿಹರಿಸಿದೆ.

ತಮ್ಮ ಒಳಗಿನ ಕುದಿಯನ್ನು ಬಹಿರಂಗವಾಗಿ ಚೆಲ್ಲುವ ಶಕ್ತಿ ಇಲ್ಲದ ಹೊತ್ತಿನ ಜಕ್ಕಣಿಯೋ ಮತ್ತಾವುದೋ ರೂಪದಲ್ಲಿ ಈ ಅತೃಪ್ತಿ ವ್ಯಕ್ತವಾಗುತ್ತದೆ. ಧರ್ಮ

ರಾಯನ ಸಂಸಾರದ ಮಹಾಲಕ್ಷ್ಮಿ, ನಂಬಿದವರ ನಾಕನರಕದ ವಾಗ್ದೇವಿಯರನ್ನು ಹಿಡಿದ ಜಕ್ಕಣಿಗಳು ಅವರ ಸುಪ್ತಮನಸ್ಸಿನ ಕುದಿಗೆ ಹಿಡಿದ ಕನ್ನಡಿಗಳೇ ಆಗಿವೆ.

ಗಂಡನೊಡನೆ ನೇರವಾಗಿ ರಣರಂಗಕ್ಕಿಳಿದದ್ದು ಕರುಳಿನಕರೆಯ ಭಾಗೀರಥಿ. ಅವಳ ವ್ಯಕ್ತಿತ್ವದ ಸ್ವಂತಿಕೆ ರೂಪು ಪಡೆದದ್ದೇ ಈ ಪ್ರತಿಭಟನೆಯಿಂದ. "ಏನು ಈ ಬೆಕ್ಕು ಹುಲಿಯಾಗುತ್ತದೆ ಅಂತೇನು?...ಛೀ ಅದು ಇಷ್ಟು ಹೆಡ್ಡು ಎಂದು ನಾನು ತಿಳಿಯೆ...ಏನು? ನನ್ನ ಭಾಗೀರಥಿ ನನ್ನನ್ನು ಮೀರುವಳೇನು? ಇಲ್ಲಿ ಮನೆಯಲ್ಲಿ ದನವಾಗಿದ್ದಳು. ಅವಳನ್ನು ನಾನು ತಿಳಿಯದವನೆ?'' (ಕರುಳಿನ ಕರೆ, ಪು. 48, 49) ಎಂದುಕೊಂಡು ಕರೆಯಲು ಬಂದ ಸುಬ್ರಾಯರು 'ಒಳ್ಳೆಯ ಮಾತಿನಿಂದ ಬಂದರಾಯಿತು ಇಲ್ಲವಾದರೆ ಬಿಗಿದು ಕಟ್ಟಿ, ಕರೆದುಕೊಂಡು ಹೋಗುತ್ತೇನೆ' (ಪು. 53) ಎಂದು ಗುಡುಗಿದರೆ '...ಬರುವಾಗಲೇ ಯೋಚಿಸಿ ಬಂದಿದ್ದೆ, ನಿಮ್ಮ ಮನೆಯ ಋಣ ಕಡಿದೇ ಬಂದಿದ್ದೆ' (ಪು. 54) ಎಂಬುದು ಭಾಗೀರಥಿಯ ದಿಟ್ಟ ಉತ್ತರ. ಇದರ ಗಂಭೀರವಾದ ಪರಿಣಾಮವನ್ನು ಆಕೆ ಎದುರಿಸಿದಳು. ಅದರ ಸಲುವಾಗಿ ಆಕೆಗೆ ಅಂಜಿಕೆಯೂ ಇಲ್ಲ, ಪಶ್ಚಾತ್ತಾಪವೂ ಇಲ್ಲ. ಆದರೆ ಹೀಗೆ ಗಂಡನನ್ನು ಎದುರು ಹಾಕಿಕೊಂಡಾಗ ಆಕೆಗೆ ತೌರಿನ ಬೆಂಬಲವಿತ್ತು ಎಂಬುದನ್ನೂ ಈ ವೈಯಕ್ತಿಕ ಭಿನ್ನಾಭಿಪ್ರಾಯ ಪರಂಪರಾಗತ ಧೋರಣೆಗೆ ತಾತ್ತ್ವಿಕ ನೆಲೆಯಲ್ಲಿ ಅಂಥ ಅಪಚಾರವಲ್ಲ ಎಂಬುದನ್ನೂ ಇಲ್ಲಿ ಗಮನಿಸಬೇಕು.

ಕಾರಂತರ ಸ್ತ್ರೀ ಪಾತ್ರಗಳು ರೂಢಿಗತ ಲೈಂಗಿಕ ನಡವಳಿಕೆಯ ಚೌಕಟ್ಟನ್ನು ಸಾಮಾನ್ಯವಾಗಿ ಮೀರುವುದಿಲ್ಲ ಎಂಬ ಮಾತು ಕೆಲವು ಅಪವಾದಗಳ ಹೊರತಾಗಿ ಗ್ರಾಮೀಣ ಮಹಿಳೆಯರಿಗೂ ಅನ್ವಯಿಸುವಂಥದು. ಕಾರಂತರು ಅವರನ್ನು ರಕ್ಷಣೆ ಮಾಡಲು ಮುಂದಾಗುವುದರಿಂದ ಹೀಗಾಗುತ್ತದೆಂಬ ವಿವರಣೆಯೊಂದಿದೆ. ಆದರೆ ಇಷ್ಟರಿಂದಲೇ ಈ ಅಂಶವನ್ನು ವಿವರಿಸುವುದು ಸರಿಯಾಗಲಾರದು. ಲೈಂಗಿಕ ಸಂಬಂಧ ಹೆಣ್ಣಿನ ಮೇಲೆ ಬೀರುವ ಪರಿಣಾಮದ ಬಗ್ಗೆ ಈ ಕಾದಂಬರಿಗಳ ಸಮಾಜ ಹುಟ್ಟಿಸಿದ್ದ ಭಯ ಕಡಿಮೆಯೇನಲ್ಲ; ಸಾಮಾಜಿಕ ನಿಷೇಧಗಳ ಬಿಗಿಯಲ್ಲಿ ಕುಗ್ಗಿದ ಮನಸ್ಸು ಈ ಮಹಿಳೆಯರದು. ಶಿಷ್ಟ ಪರಿಸರ ಮಹಿಳೆಯರ ಮೇಲೆ ವಿಶೇಷವಾಗಿ ಹೊರಿಸಿದ ನಡಾವಳಿ ಸಂಹಿತೆ; ಶರೀರದ ಬಯಕೆಗಳು ಮನಸ್ಸಿನಿಂದ ತೀರ ಹೊರತಲ್ಲ; ಆ ಪರಿಸರಗಳಲ್ಲಿದ್ದ ಪ್ರಚೋದಕ ಅಂಶಗಳ ಪ್ರಮಾಣ ಮೊದಲಾದ ಅನೇಕ ಸಂಗತಿಗಳ ಹಿನ್ನೆಲೆಯಲ್ಲಿ ಈ ಅಂಶವನ್ನು ನೋಡಬೇಕಾಗಿದೆ.

ಕಾರಂತರ ಕಾದಂಬರಿಗಳ ಬಹುತೇಕ ಗ್ರಾಮೀಣ ಮಹಿಳೆಯರಿಗೆ ದುಡಿಮೆ ಅನಿವಾರ್ಯವಾಗಿದೆ. ಇನ್ನೊಂದೇ ದಾರಿಯ ಜಾನಕಿ, ಬೆಟ್ಟದ ಜೀವದ ಶಂಕರಿ, ಮೈಮನಗಳ ಸುಳಿಯುಲ್ಲಿನ ಮಂಜುಳಾ, ಲಕ್ಷ್ಮಮ್ಮ, ಕರುಳಿನ ಕರೆಯ ಜಾನಕಿ ಇಂಥ

ಕೆಲವರನ್ನು ಬಿಟ್ಟರೆ ಉಳಿದವರೆಲ್ಲ ಬಡತನದ ರುಚಿಯನ್ನು ಕಂಡವರು, ಅದರ ವಿರುದ್ಧ ಸೆಣಸಿದವರು. 'ಈಚೆಗೆ ಎಳೆದರೆ ಆಚೆಗಿಲ್ಲ, ಆಚೆಗೆ ಎಳೆದರೆ ಈಚೆಗಿಲ್ಲ' ಎನ್ನುವುದು ಇವರ ಸಾಮಾನ್ಯ ಸ್ಥಿತಿ. ಬದುಕಿನ ಸವಾಲನ್ನು ಎದುರಿಸುವ ಈ ಮಹಿಳೆಯರು ಬೆವರು ಸುರಿಸಿ ಬದುಕಿದರು, ಬದುಕಿಸಿದರು. ಹೊಲಮನೆಗಳ ಬದುಕಿಗೆ ಅಂಜಿದವರಲ್ಲ, ಐಷಾರಾಮದ ಬದುಕಿಗಾಗಲೀ ಡೌಲಿಗಾಗಲೀ ಆಸೆ ಮಾಡಿದವರಲ್ಲ. ಅವರ ದುಡಿತ, ಛಲಗಳಿಲ್ಲದಿದ್ದರೆ ಅವರ ಕುಟುಂಬಗಳು ಜೀವನಕ್ಕೆ ಎಂದೋ ತರ್ಪಣ ಕೊಡ ಬೇಕಾಗಿತ್ತು. ಮರಳಿ ಮಣ್ಣಿಗೆ, ಮುಗಿದ ಯುದ್ಧ, ಇನ್ನೊಂದೇ ದಾರಿ, ಕರುಳಿನ ಕರೆ ಇಂಥ ಕಾದಂಬರಿಗಳಲ್ಲಿ ಈ ಮಹಿಳೆಯರ ದುಡಿತದ ಬದುಕು ಇಲ್ಲಿನ ಜೀವನದ ಜೀವನಾಡಿಯಾಗಿದೆ. ಇಲ್ಲಿನ ಅನೇಕರು ತಮ್ಮ ಗಂಡ ಅಥವಾ ಮಕ್ಕಳಿಂದ ದೂರ ವಾಗಿದ್ದು ಸಂಸಾರದ ಹೊರೆ ಹೊತ್ತವರು. ಬೆಳ್ಳಿ (ಚೋಮನದುಡಿ), ವಾಗ್ದೇವಿಯ ಸೋದರಿಯರಂಥ (ನಂಬಿದವರ ನಾಕ ನರಕ) ಅವಿವಾಹಿತರೇ ಇರಲಿ, ಪಾರೋತಿ (ಅಳಿದ ಮೇಲೆ), ಸರಸೋತಿ (ಮರಳಿ ಮಣ್ಣಿಗೆ), ಲಕ್ಷ್ಮಿ (ಮುಗಿದ ಯುದ್ಧ), ರುಕ್ಮಿಣಿ (ಸ್ವಪ್ನದ ಹೊಳೆ) ಯಂಥ ವಿಧವೆಯರೇ ಇರಲಿ, ನಾಗವೇಣಿ, ಸೀತೆ, ಸರಸಿ ಯರ ಹಾಗೆ ಗಂಡಂದಿರಿಂದ ದೂರವಿದ್ದವರಾಗಲೀ ತಮ್ಮ ತಮ್ಮ ದುಡಿಮೆಯನು ನೆಚ್ಚಿ ಬದುಕಿದ್ದಾರೆ.

ಕಾರಂತರ ಗ್ರಾಮೀಣ ಮಹಿಳೆಯರು ಹೆಚ್ಚು ಗಟ್ಟಿಯಾಗಿರುವುದಕ್ಕೆ ಕಾರಣ ಈ ಜೀವನಪ್ರೀತಿ ಮೂಲವಾದ ಶ್ರಮವೇ ಆಗಿದೆ. ಪಟ್ಟಣದ ಚಂಪೆ, ಕುಸುಮಾ ಮೊದಲಾದ ಪಾತ್ರಗಳು ಶ್ರದ್ಧೆ, ಶ್ರಮದಿಂದ ದೂರವಿದ್ದು ತೂಕವಿಲ್ಲದ ಪಾತ್ರ ಗಳಾಗಿವೆ. ಬಹುತೇಕ ಗ್ರಾಮೀಣ ಮಹಿಳೆಯರ ಮನಃಪೂರ್ವಕವಾದ ಶ್ರದ್ಧೆ, ಪ್ರೀತಿ ಗಳಿಗೆ ಈ ದುಡಿತವೇ ನಿಕಷವಾಗಿದೆ.

ಸತತವಾಗಿ ತಾವು ದುಡಿಯುವುದಷ್ಟೇ ಅಲ್ಲದೆ, ಪಟ್ಟಾಂಗ ಪ್ರವೀಣರಷ್ಟೇ ಆದ ತಮ್ಮ ಗಂಡ, ಮಕ್ಕಳನ್ನು ದುಡಿಮೆಯಲ್ಲಿ ತೊಡಗಿಸಿಕೊಳ್ಳುವುದು ಮತ್ತೊಂದು ಸಾಹಸ. ಮುಗಿದ ಯುದ್ಧದ ಸೀತೆಯಂಥ ಅಪೂರ್ವ ಸಾಹಸಿಗಳು ಇದಕ್ಕೆ ಮುಂದಾ ಗುತ್ತಾರೆ, ಆಗಲೇ ಬೇಕಲ್ಲ. "ಮನೆಯೆಲ್ಲಿಯೆಂದು ನೋಡಿ ಬನ್ನಿ. ಇನ್ನು ತಿಂಗಳಿಗೆ ಮೀರಿ ನಾನು ಈ ಮನೆಯಲ್ಲಿರಲಿಕ್ಕಿಲ್ಲ, ಪ್ರಾಣ ತೆಗೆದುಕೊಂಡೇನು" (ಪು. 98) 'ನಿಮ್ಮ ಜತೆಗೇನೆ ಮರ್ಯಾದೆಯಿಂದ ಬದುಕಬೇಕೆಂದಿದ್ದರೆ ಇಲ್ಲಿಂದ ಬಿಡಾರ ತೆಗೆಯಿಸಿ' (ಪು 125) ಎಂದು ಬೆದರಿಸಿ, ಕಾಡಬೇಕು. "ಅಮ್ಮ ಒಬ್ಬಂಟಿಯಾಗಿ ಮಾಡುವಷ್ಟು ಕೆಲಸ ನಮ್ಮಿಬ್ಬರಿಂದಾಗದೇ" (ಪು 127) ಎಂದು ಗಂಡನ ಅಹಂಕಾರವನ್ನು ಚುಚ್ಚಿ ನುಡಿಯಬೇಕು. ಆಗಲೇ ಏನಾದರೂ ಒಂದಿಷ್ಟು ಚಲನೆ ಕಂಡೀತು.

ತಾಯಂದಿರ ಈ ದುಡಿಮೆ, ಶ್ರಮ ಅವರ ಮಕ್ಕಳ ಮೇಲೆ ಗುಣಾತ್ಮಕ ಪರಿಣಾಮವನ್ನು ಬೀರದೆ ಹೋಗಿಲ್ಲ. ಕರುಳಿನಕರೆಯ ವೆಂಕಮ್ಮ, ಮುಗಿದ ಯುದ್ಧದ ಲಕ್ಷ್ಮಿ, ಸೀತೆ, ಮರಳಿ ಮಣ್ಣಿಗೆಯಲ್ಲಿನ ಸ್ತ್ರೀ ಪಾತ್ರಗಳು, ಇನ್ನೊಂದೇ ದಾರಿಯ ಹೊನ್ನಜ್ಜಿ, ಶನೀಶ್ವರನ ನೆರಳಿನಲ್ಲಿನ ಕಾವೇರಮ್ಮ ಮೊದಲಾದವರು ಅವರ ಮುಂದಿನ ಪೀಳಿಗೆಯಿಂದ ಪ್ರೀತ್ಯಾದರಗಳನ್ನು ಪಡೆಯುವುದಷ್ಟೇ ಅಲ್ಲದೆ ಅವರ ಬದುಕಿನ ಮೇಲೆ ಇವರ ಪರಿಶ್ರಮದ ಪ್ರಭಾವವಿದೆ. ಆದರೆ ಇದು ವಿರುದ್ಧ ದಿಕ್ಕಿನಲ್ಲಿ ಫಲನೀಡಬಾರದೆಂದೇನೂ ಇಲ್ಲ. ಶ್ಯಾಮ, ಶಂಭು, ಸುಬ್ರಾಯ, ನಾರಾಯಣರೈ ಇದಕ್ಕೆ ನಿದರ್ಶನ.

ಈ ಗ್ರಾಮೀಣ ಮಹಿಳೆಯರು ಪರಂಪರಾಗತವಾಗಿ ಬಂದ ಸಾಮಾಜಿಕ ಮೌಲ್ಯಗಳನ್ನು ಒಪ್ಪಿದವರು. ಸ್ವಇಚ್ಛೆಯಿಂದಲ್ಲದಿದ್ದರೂ ಸಾಮಾಜಿಕ ಒತ್ತಡಗಳಿಂದ ಹಾಗೆ ಒಪ್ಪಬೇಕಾಗಿ ಬಂದಿದೆ. ವೈವಾಹಿಕ ಜೀವನದಲ್ಲಿ ಕಹಿಯನ್ನೇ ಹೆಚ್ಚಾಗಿ ಉಂಡಿದ್ದರೂ ತಮ್ಮ ಹೆಣ್ಣು ಮಕ್ಕಳಿಗೆ ಹನ್ನೆರಡೋ ಹದಿನಾಲ್ಕೋ ವಯಸ್ಸಾಗುವ ಮುಂಚೆಯೇ ಅವರ ಮದುವೆಗೆ ಚಡಪಡಿಸಬೇಕಾಗುತ್ತದೆ. ಮಕ್ಕಳ ಮೇಲೆ ಇನ್ನಿಲ್ಲದ ಪ್ರೀತಿಯಿದ್ದರೂ ಅವರು ಅಂತರ್ಜಾತೀಯ ವಿವಾಹವಾದರೆ ತಮ್ಮ ಸಂಬಂಧಗಳನ್ನು ತಾತ್ಕಾಲಿಕವಾಗಿಯಾದರೂ ಕಡಿದುಕೊಂಡವರಿದ್ದಾರೆ. ತಮ್ಮ ಪ್ರಾಮಾಣಿಕತೆ, ದಿಟ್ಟತನದಿಂದ ಊರಿನ ಹುಲಿಯಂತಿದ್ದ ಶಂಕರ ಜೋಯಿಸರನ್ನು ಎದುರಿಸಬಲ್ಲ ಏಕೈಕ ವ್ಯಕ್ತಿ ತಾನೆನಿಸಿದ್ದರೂ ಶನೀಶ್ವರನ ನೆರಳಿನಲ್ಲಿಯ ಕಾವೇರಮ್ಮ ಕತ್ತಲಲ್ಲಿ, ಕಂಬದ ಮರೆಯಲ್ಲಿ ಕೂತು ಯಕ್ಷಗಾನ ಪ್ರಸಂಗ ಕೇಳಬೇಕಾಗಿದೆ. ತತ್ಕಾಲೀನ ಸಾಮಾಜಿಕ ರೂಢಿಗಳನ್ನು ಸಾಮಾನ್ಯವಾಗಿ ಅವರು ಅಲ್ಲಗಳೆಯಲು ಹೋಗಿಲ್ಲ. ಆದರೆ ಕೆಲವು ಸಂದರ್ಭಗಳಲ್ಲಿ ತಮ್ಮ ಈ ನಂಬಿಕೆಯನ್ನು ಸೀಳಿಕೊಂಡು ಹೋಗುವಂಥ ಕೆಚ್ಚನ್ನು ಅವರ ಮಾನವೀಯ ಸಂಬಂಧಗಳ ಮೂಲದಿಂದ ಪಡೆದಿದ್ದಾರೆ. ಅಂತರ್ಜಾತೀಯ ವಿವಾಹದ ಫಲವಾದ, ತಾಯಿ ಬಿಟ್ಟುಹೋದ ಮೊಮ್ಮಗುವನ್ನು ಸಾಕಲು ಇನ್ನೊಂದೇ ದಾರಿಯ ಜಾನಕಿ ಹಿಂದೆಗೆಯುವುದಿಲ್ಲ. ಶಿವಣ್ಣಯ್ಯ-ಸೀತೆಯ ಅಸಾಂಪ್ರದಾಯಿಕ ವೆನ್ನಬಹುದಾದ ಸಂಬಂಧವನ್ನು ವಿರೋಧಿಸದೆ ಅವರಿಗೆ ಅನುಕೂಲ ಕಲ್ಪಿಸಿಕೊಟ್ಟಾಕೆ ಶನೀಶ್ವರನ ನೆರಳಿನಲ್ಲಿನ ಕಾವೇರಮ್ಮ. ತಮ್ಮ ಮಗ ಬೇರೊಂದು ಜಾತಿಯಾಕೆಯನ್ನು ವರಿಸಿ ಬಂದಾಗಲೂ ಎಂದಿನಂತೆ ಉಪಚರಿಸಿ 'ಎಲ್ಲ ಋಣಾನುಬಂಧ' ಎನ್ನುತ್ತಾರೆ, ಸ್ವಪ್ನದ ಹೊಳೆಯ ತುಂಗಮ್ಮ. ಇಂಥ ಅನೇಕ ಸಂದರ್ಭಗಳಲ್ಲಿ ಗೆಲ್ಲುವುದು ಅವರ ಆಳವಾದ ಪ್ರೀತಿ, ವಾತ್ಸಲ್ಯಗಳೇ ಹೊರತು ಸಾಮಾಜಿಕ ಪದ್ಧತಿಯಲ್ಲ. ಆದರೆ ಪ್ರಜ್ಞಾಪೂರ್ವಕವಾಗಿ ಅಂಥ ಪದ್ಧತಿಯನ್ನು ಮುರಿದು ಮುಂದೆ ಹೋಗುವಂಥ ಸ್ಥಿತಿಯಲ್ಲಿಯೂ ಅವರಿಲ್ಲ.

ಸಾಮಾಜಿಕ ವಿಧಿ ನಿಷೇಧಗಳ ವಿಷಯದಲ್ಲಿ ಗಂಡಸರ ಸ್ಥಿತಿಗಿಂತ ಹೆಂಗಸರ ಸ್ಥಿತಿ ತುಂಬ ಬೇರೆಯಲ್ಲ. ಮುಕ್ತವಾಗಿಲ್ಲದ ಸಾಮಾಜಿಕ ಪದ್ಧತಿಯಲ್ಲಿ ಬೆಳೆದು ಬಂದ ಮಹಿಳೆಯರು ಸಾಮಾಜಿಕ ಬದಲಾವಣೆಗೆ ತೆರೆದುಕೊಂಡಿಲ್ಲದಿರುವಾಗ ವಸ್ತುಸ್ಥಿತಿಯ ಮುಂದುವರಿಕೆಯನ್ನು ಅವರು ಬೆಂಬಲಿಸುವುದು ಸಹಜವಾಗಿದೆ. ಇರುವ ಸ್ಥಿತಿಯನ್ನು ಕಲಕಿ ಇನ್ನೂ ಹೆಚ್ಚಾಗಿ ವೈಯಕ್ತಿಕವಾಗಿ ತೊಂದರೆಗಳನ್ನು ತಂದುಕೊಳ್ಳಲು ಹೆದರುತ್ತಾರೆ. ಬದಲಾವಣೆಯ ಅಪೇಕ್ಷೆ ಹುಟ್ಟಿಸುವಂಥ ಬೌದ್ಧಿಕ ಪರಿಸರವೂ ಅದಲ್ಲ. ಚೋಮ ಬೇಸಾಯಕ್ಕೆ ಭೂಮಿಯನ್ನು ಕೇಳಿದಾಗ ಅದಕ್ಕೆ ಅನುಮತಿಸದೆ "ಅಪ್ಪಾ ಈ ಹೊಲೆಯರಿಗೆ ಬಂದ ಸೊಕ್ಕೇ" (ಚೋಮನ ದುಡಿ, ಪು. 22) ಎನ್ನುವವಳು ಸಂಕಪ್ಪಯ್ಯನ ತಾಯಿ. "ಅಪ್ಪಾ, ನಾವು ನಮ್ಮ ಯೋಗ್ಯತೆಗೂ ಮೀರಿ ಆಸೆ ಮಾಡಿದರೆ ನಡೆದೀತೇ? ಬೇಸಾಯ ಮಾಡಬೇಕಾದರೆ ಬ್ರಾಹ್ಮಣರಾಗಿಯೋ ಬಂಟರಾಗಿಯೋ ಗೌಡರಾಗಿಯೋ ಹುಟ್ಟಬೇಡವೇ? ಹಾಳಾದ ಹೊಲೆಯರಾಗಿ ಹುಟ್ಟಿ ಬೇಸಾಯ ಮಾಡಬೇಕು ಅಂದರೆ ಆಗುತ್ತದೆಯೇ?..." (ಚೋಮನ ದುಡಿ ಪು. 46) ಎನ್ನುತ್ತಾಳೆ, ಬೆಳ್ಳಿ. ಏಕಲವ್ಯನ ಕಥೆ ಕೇಳಿ ಕಣ್ಣೀರು ಹಾಕಿದರೂ ಮಾದನ ತಾಯಿಯ ತೀರ್ಪು ಏಕಲವ್ಯನ ಪರವಾಗಿಲ್ಲ; 'ಆ ಬೇಡರ ಮಗನ ಕತೆ ಮುಗಿಯುತ್ತಲೇ ಅಮ್ಮನಿಗೂ ಕಣ್ಣೀರು ಬಂದಿತು; ನನಗೂ ಕಣ್ಣೀರೇ ನೋಡು ಮಗು, ಅವರವರ ಕಸುಬು ಅವರವರಿಗೆ...... ಆ ಮಗು ಬಿಲ್ಲು ಬಾಣ ಬಿಡುವುದು ಯಾವ ಮಣ್ಣಿಗೆ? ಅವನೇನು ಅರಸು ಮಗನೆ' (ಸ್ವಪ್ನದ ಹೊಳೆ, ಪು. 3)

ಆಳವಾಗಿ ಬೇರೂರಿದ ಈ ಸಾಮಾಜಿಕ ಕಟ್ಟಳೆ, ನಂಬಿಕೆಗಳು ಈ ಮಹಿಳೆಯರ ಬದುಕನ್ನು ಆಹುತಿಯಾಗಿಸಿಕೊಳ್ಳಬಲ್ಲವು ಎಂಬುದಕ್ಕೆ ನಂಬಿದವರ ನಾಕನರಕದ ವಾಗ್ದೇವಿ ಜ್ವಲಂತ ನಿದರ್ಶನ. ತಾನು ಮದುವೆಯಾದದ್ದು ತನ್ನ ಜಾತಿಯವನನ್ನಲ್ಲ ಎಂಬ ಸತ್ಯ ತಿಳಿದದ್ದು ಅವಳ ದಾರುಣ ಯಾತನೆಯ ನಾಂದಿಯಾಗಿದೆ. ಅವಳ ಪಾಲಿಗೆ ಅವಳ ಯಾತನೆ ಪ್ರಾಮಾಣಿಕವಾದದ್ದು. ಇದರಿಂದಾಗಿ ಸೃಷ್ಟಿಯಾದ ನರಕದಿಂದ ಅವಳಿಗೆ ಬಿಡುಗಡೆ ದೊರೆತಿದ್ದು ಅವಳ ಸಾವಿನಲ್ಲಿಯೆ. ಇಂಥ ಸಂದರ್ಭಗಳಲ್ಲಿ ಮೌಲ್ಯಗಳ ಅಪಮೌಲ್ಯೀಕರಣದತ್ತ ಕಾರಂತರು ಲಕ್ಷ್ಯ ಹರಿಸುವುದಕ್ಕಿಂತ ಆ ಮೌಲಿಕ ಚೌಕಟ್ಟಿನೊಳಗಿನ ಜೀವನಾನುಭವವನ್ನು ಹಿಡಿಯುವಲ್ಲಿ ಅವರ ಲಕ್ಷ್ಯ ಕೇಂದ್ರೀಕೃತವಾಗಿದೆ.

ಈ ಮಹಿಳೆಯರ 'ಇಹಪರ'ವಾದ ಬದುಕನ್ನು ಅನೇಕ ಸಂದರ್ಭಗಳಲ್ಲಿ ಅವರ 'ಪರ' ದೃಷ್ಟಿ ತನ್ನ ಅಧೀನದಲ್ಲಿಟ್ಟುಕೊಂಡಿದೆ. ಈ 'ಪರ'ದೃಷ್ಟಿಯನ್ನು ರೂಪಿಸಿದ್ದು ಪರಂಪರಾಗತ ಧಾರ್ಮಿಕ ಶ್ರದ್ಧೆ. ಈ ಧಾರ್ಮಿಕ ನಂಬಿಕೆ ವೈಯಕ್ತಿಕ ಶೋಧದ ಫಲವಲ್ಲದಿರುವುದರಿಂದ ಜೀವನದ ಈ ಮುಖಕ್ಕೆ ಸಂಬಂಧಿಸಿದ ಅವರ ಅನ್ವೇಷಣೆಗೆ

ಅವಕಾಶ ದೊರಕುವುದಿಲ್ಲ. ಆದರೆ ಈ ಗಾಢ ನಂಬಿಕೆಯಿಂದ ಅವರು ಅನೇಕ ಸಂಕಷ್ಟ ಗಳನ್ನು ಗೆಲ್ಲಲು ಬೇಕಾದ ಮನೋಬಲವನ್ನು ದೊರಕಿಸಿಕೊಂಡಿದ್ದಾರೆ.

ಗ್ರಾಮೀಣ ಮಹಿಳೆಯರ ಬದುಕಿನ ಇತ್ಯಾತ್ಮಕ, ನೇತ್ಯಾತ್ಮಕ ಮುಖಗಳನ್ನು ಕಾರಂತರ ಕಾದಂಬರಿಗಳು ಪ್ರತಿಬಿಂಬಿಸುತ್ತವೆ. ಬದಲಾಗುತ್ತಿರುವ ಪರಿಸ್ಥಿತಿ ಮತ್ತು ಮನೋಭಾವಗಳನ್ನು ಕಾರಂತರು ಗಮನಿಸುತ್ತಾರಾದರೂ ಹಿಂದಿನ ತಲೆಮಾರುಗಳ ಮಹಿಳೆಯರ ಜೀವನ ಶ್ರದ್ಧೆ ಅವರಿಗೆ ಮೆಚ್ಚು. ಈ ಜೀವನ ಶ್ರದ್ಧೆ, ಮೌಲಿಕ ಸ್ಥಿರತೆ ತೆಳುವಾಗುತ್ತಿರುವುದನ್ನೂ ಅದರ ಸ್ಥಳದಲ್ಲಿ ಬೇರೊಂದು ಶ್ರದ್ಧೆ, ನಂಬಿಕೆ, ವಿಚಾರ ಆಳವಾಗಿ ಬೇರು ಬಿಡದಿರುವುದನ್ನೂ ವ್ಯಥೆಯಿಂದ ಕಾಣುವ ಕಾರಂತರು ಗ್ರಾಮೀಣ ಹಿನ್ನೆಲೆಯ ವೃದ್ಧೆಯರ ಬಗ್ಗೆ ತೋರುವ ನಂಬಿಕೆ, ಆದರಗಳನ್ನು ಈಚಿನ ತಲೆಮಾರು ಗಳ, ನಾಗರಿಕತೆಯ ಗಾಳಿಗೆ ಮೈಯೊಡ್ಡಿದವರ ಬಗ್ಗೆ ವಿಶೇಷವಾಗಿ ತೋರುವುದಿಲ್ಲ; ಕಾವೇರಮ್ಮ, ಭಾಗೀರಥಿ, ಪಾರೋತಿ, ಲಕ್ಷ್ಮಿ, ವೆಂಕಮ್ಮ, ರುಕ್ಮಾಯಿ, ಮಂಜುಳಾ ಇಂಥವರನ್ನು ಸರಿಗಟ್ಟಬಲ್ಲ ಈಚಿನ ತಲೆಮಾರಿನವರು ಎಷ್ಟು ಜನರಿದ್ದಾರೆ?

ಈ ಎಲ್ಲ ಗ್ರಾಮೀಣ ಮಹಿಳೆಯರು ಪ್ರತಿಮಿಸುವ ಅನೇಕ ಮೌಲ್ಯಗಳು ಸಾಂದರ್ಭಿಕ ಮಿತಿಯನ್ನು ದಾಟಿ ಬಾಳುವಂಥವು. ಸಹನೆ, ತ್ಯಾಗ, ಶ್ರದ್ಧೆಗಳು ಒಟ್ಟು ಮನುಕುಲದ ಮೌಲ್ಯಗಳಾಗಿ ಬದುಕನ್ನು ಶ್ರೀಮಂತಗೊಳಿಸುವ ಅನಿವಾರ್ಯ ಅಗತ್ಯಗಳು. ಆದರೆ ಈ ಮೌಲ್ಯಗಳನ್ನು ಮಹಿಳೆಯರ ಬದುಕಿನಿಂದ ಮಾತ್ರ ನಿರೀಕ್ಷಿ ಸುವ ಸ್ಥಿತಿ ಆರೋಗ್ಯಕರವಾದುದಲ್ಲ. ಆ ಮೌಲ್ಯಗಳ ಮೂರ್ತ ರೂಪಗಳಂತೆ ಬಾಳಿದ ಮಹಿಳೆಯರ ಬದುಕು ದೊಡ್ಡದಿದ್ದೀತು, ಅದರಿಂದ ಸಮಾಜ ಪ್ರಯೋಜನ ಪಡೆದೀತು. ಆದರೆ ಜೀವನ ಸುಖವನ್ನು ಬಲಿಗೊಟ್ಟು ಈ ಮೌಲ್ಯಗಳನ್ನು ಕಾಯ ಬೇಕಾಗಿ ಬರುವ ಸಂದರ್ಭ ನಮ್ಮ ಬದುಕಿನ ಕ್ರೂರ, ಅಸಹ್ಯ ಮುಖಗಳನ್ನು ಕಾಣಿಸು ತ್ತದೆ. ಕಾರಂತರ ಕಾದಂಬರಿಗಳಲ್ಲಿ ಗ್ರಾಮೀಣ ಮಹಿಳೆಯರ ಬದುಕಿನ ಇಂಥ ಮೌಲ್ಯಗಳು ವೈಭವೀಕರಣಗೊಳ್ಳುವಾಗ ಅವುಗಳ ಈ ನೇತ್ಯಾತ್ಮಕ ಮುಖ ಕಾಣಿಸದೆ ಹೋಗುವ ಸಾಧ್ಯತೆ ಇದ್ದೀತೆಂಬ ಸಂಶಯ ನನಗಿದೆ. ಜೀವ ಸವೆಸಿ ಮನೆಯುಳಿಸಿದ್ದು ಸಾಲದೆ, ಉಂಡಾಡಿ ಶ್ಯಾಮನಂಥ ಗಂಡನನ್ನು, "ಈವರೆಗೆ ಆದದ್ದಾಯಿತು. ನನ್ನ ತಪ್ಪೆಷ್ಟಿದ್ದರೂ ಕ್ಷಮಿಸಬೇಕು" (ಕರುಳಿನಕರೆ, ಪು. 274) ಎಂದು ನಿರ್ದೋಷಿ ಪತ್ನಿ ಕೇಳುವಂಥ ಸ್ಥಿತಿ ಸ್ಥಾಯಿಯಾಗಲಿ ಎನ್ನುವುದು ಕಾರಂತರ ಉದ್ದೇಶವಲ್ಲದಿದ್ದರೂ ಇಂಥ ಪಾತ್ರಗಳನ್ನು 'ಕುಸುಮಿಸಿದ ಹಿಂದಿನ ಸಂಸ್ಕೃತಿ ಎಷ್ಟು ಸಾರವತ್ತಾದುದು' ಎಂಬ ಮೆಚ್ಚುನೋಟದೆಡೆಗೆ ಮಾತ್ರ ಓದುಗರು ಸೆಳೆಯಲ್ಪಡುವ ಸಾಧ್ಯತೆ ಈ ಮೌಲ್ಯಗಳ ಉದಾತ್ತೀಕರಣದಿಂದ ಉಂಟಾಗಬಹುದು.

# ಕಾರಂತರ ಕಾದಂಬರಿಗಳಲ್ಲಿ ಮಹಿಳೆ : ನಗರದ ವಿದ್ಯಾವಂತ ಮಹಿಳೆಯರು

ಬಿ. ಎಸ್. ವೆಂಕಟಲಕ್ಷ್ಮಿ

ನನ್ನ ಪಾಲಿಗೆ ನಗರ ಜೀವನ ನನ್ನ ಹುಟ್ಟಿನಷ್ಟೆ ಹಳೆಯದು. ಇಲ್ಲಿನ ಬದುಕು ದಿನಕ್ರಮೇಣ ಹೇಗೆ ಸಂಕೀರ್ಣಗೊಳ್ಳುತ್ತ ಹೋಗುತ್ತಿದೆ ಎಂಬ ಬಗ್ಗೆ ನನಗೆ ಎಚ್ಚರ ವಿದೆ. ನಿನ್ನೆ ಕಂಡಿರದಿದ್ದ ಸಮಸ್ಯೆಗಳನ್ನು ಇಂದು, ಇಂದು ಕಾಣದ ಸಮಸ್ಯೆಗಳನ್ನು ನಾಳೆ, ಹೀಗೆ ತನ್ನ ಕಬಂಧ ಬಾಹುಗಳಿಗೆ ಸಮಸ್ಯೆಗಳ ಸರಮಾಲೆಯನ್ನೇ ಸೆಳೆದು ಕೊಳ್ಳುತ್ತ ಬೆಳೆಯುತ್ತಿರುವ ನಗರವನ್ನು ಕಂಡಾಗ ಈ ಜಟಿಲತೆಯ ಸಿಕ್ಕಿನಿಂದ ಪಾರಾಗಬೇಕೆಂಬ ಹಾತೊರಿಕೆ ಉಂಟಾಗುತ್ತದೆ.

ಆದರೆ ನನ್ನ ಈ ಹಂಬಲ ಅನೇಕ ಆಮಿಷಗಳಂತೆ ಕೇವಲ ತಾತ್ಕಾಲಿಕ. ಯಂತ್ರಕ್ಕೆ ಒಡ್ಡಲ್ಪಟ್ಟ ಒಂದು ವಸ್ತು ಸಂಪೂರ್ಣ ಪರಿಷ್ಕರಣಗೊಳ್ಳುವವರೆಗೂ ಅನೇಕ ಹಂತಗಳನ್ನು ಎದುರಿಸುತ್ತ ಹೇಗೆ ಸಾಗುತ್ತದೆಯೋ ಹಾಗೆಯೇ ನಾನೂ ಈ ಸಮಸ್ಯೆಗಳೊಂದಿಗೇ ಮುಪ್ಪಾಗುವುದನ್ನು ಕಲಿತಿದ್ದೇನೆ.

ನಗರದಲ್ಲಿರುವ ನನ್ನಂಥ ಅನೇಕರಿಗೆ ಇಂಥದ್ದೇ ಅನುಭವ ಆಗಿರಬಹುದು. ಆದರೆ ಆಶ್ಚರ್ಯದ ಸಂಗತಿ ಎಂದರೆ ಈ ಯಾಂತ್ರಿಕತೆಯ ಮಧ್ಯದಲ್ಲೂ ಅದನ್ನು ಸ್ವಲ್ಪವಾದರೂ ಹದಗೊಳಿಸಿಕೊಳ್ಳಬೇಕೆಂಬ ಉದ್ದೇಶದಿಂದ ನಾವು ನಮ್ಮನ್ನು ಸುತ್ತುವರಿದ ವಾತಾವರಣವನ್ನು ಬದಲಿಸಿಕೊಳ್ಳಲು ಪ್ರಯತ್ನಿಸುತ್ತೇನೆ. ವಾತಾ ವರಣಕ್ಕೆ ಮಾದಕತೆ ತುಂಬಬಲ್ಲ ಅನೇಕ ಸಂಬಂಧಗಳನ್ನು ಬೆಸೆದುಕೊಳ್ಳುತ್ತೇವೆ. ಕುಟುಂಬದಲ್ಲಿನ ವ್ಯಕ್ತಿಗಳ ಅಧಿಕಾರವನ್ನು ಹಿಗ್ಗಿಸಲೋ, ಕುಗ್ಗಿಸಲೋ ಸೆಣಸಾಡುತ್ತೇವೆ ನಮ್ಮ ಅಭಿರುಚಿಗೆ ಅನುವಾಗುವಂತೆ ನಮ್ಮ ಆಸೆಗಳನ್ನು ಪೂರೈಸುವಂತೆ ನಾವು ನಮ್ಮ ವಾತಾವರಣದಲ್ಲಿ ಉಂಟು ಮಾಡಿಕೊಳ್ಳುವ ಮಾರ್ಪಾಟುಗಳು, ಅಂಟಿಸಿ ಕೊಳ್ಳುವ ನಂಟುಗಳು, ಸಂಸಾರವನ್ನು ಕಾಣುವ ದೃಷ್ಟಿಯಲ್ಲಿ ಉಂಟು ಮಾಡಿ ಕೊಳ್ಳುವ ಬದಲಾವಣೆಗಳು ಇವೆಲ್ಲಕ್ಕೂ ನಮ್ಮ ಸಂಸ್ಕಾರವನ್ನು ನಮ್ಮ ತಿಳುವಳಿಕೆ ಯನ್ನು ಬಳಸಿಕೊಂಡು ಬಾಳಿಗೆ ಒಂದು ಉದ್ದೇಶವನ್ನು ಇಟ್ಟುಕೊಂಡು ಬದುಕಲು ಪ್ರಯತ್ನಿಸುತ್ತೇವೆ.

ನಾಗರಿಕತೆಯ ವರ್ತುಲದೊಳಗೆ ಇರುವ ನಾನು ದೈನಂದಿನ ಜೀವನದಲ್ಲಿ ಅನೇಕ ಹೆಂಗಸರನ್ನು ಭೇಟಿಯಾಗುತ್ತೇನೆ. ಹೊಟ್ಟೆ ತುಂಬಾ ಹಿಟ್ಟೂ ಗತಿಯಿಲ್ಲದೆ

ಜೀವನದೊಂದಿಗೆ ಹೋರಾಡುತ್ತಿರುವ ಕೂಲಿ ಹೆಂಗಸರು, ತಮ್ಮ ಸಂಪಾದನೆಯಿಂದಲೇ ಸಂಸಾರವನ್ನು ಸಾಗಿಸುತ್ತಿರುವ ಮಧ್ಯಮ ವರ್ಗದ ಮಹಿಳೆಯರು, ಬಿಂಕ ಬಿನ್ನಾಣವನ್ನೇ ಬಂಡವಾಳವನ್ನಾಗಿ ಇಟ್ಟುಕೊಂಡು ಬಡಿವಾರದ ಜೀವನ ನಡೆಸುತ್ತಿರುವ ಶ್ರೀಮಂತ ಹೆಂಗಸರು–ಇವರೆಲ್ಲರನ್ನೂ ಕುತೂಹಲದ ಕಣ್ಣಿಗಳಿಂದ ನೋಡುತ್ತೇನೆ. ಜೀವನದ ವೈವಿಧ್ಯತೆ ನನ್ನನ್ನು ಅನೇಕ ವೇಳೆ ಬೆರಗುಗೊಳಿಸುತ್ತದೆ. ಸ್ವಭಾವ ವೈಚಿತ್ರ್ಯಗಳು ನನ್ನನ್ನು ಚಕಿತಳನ್ನಾಗಿಸುತ್ತವೆ; ನನ್ನನ್ನು ಕಾಡುತ್ತಲೇ ಹೋಗುತ್ತವೆ.

ಮಧ್ಯಮ ವರ್ಗದ ಕುಟುಂಬವೊಂದಕ್ಕೆ ಸೇರಿದ ನಾನು ನನ್ನ ಸಹವರ್ತಿಗಳ ಜೀವನವನ್ನು ತೀರಾ ಸಮೀಪದಿಂದ ನೋಡುತ್ತ ಬಂದಿದ್ದೇನೆ. ನೇರ್ಪಾಗಿರದ ಸಂಸಾರದಲ್ಲಿ ತಮ್ಮ ಯಾವ ತಪ್ಪೂ ಇಲ್ಲದೆ ಹುಟ್ಟಿ ತಮ್ಮ ಸ್ವಂತಿಕೆ, ಸ್ವಾತಂತ್ರ್ಯವನ್ನು ಅದುಮಿಟ್ಟುಕೊಂಡು ಬದುಕುತ್ತಿರುವ ಹುಡುಗಿಯರು, ಸಂಸಾರ ನೆಟ್ಟಗಿದ್ದರೂ ಅದರಿಂದ ಜಿಗಿದು ಹೊರಗೆ ಹೋಗಿ ಬವಣೆಗೆ ಒಳಗಾಗಿರುವ ಹೆಂಗಸರು, ತಮ್ಮ ಸ್ವಾರ್ಥ ಲಾಲಸೆಗಾಗಿ ತಮಗೆ ತೀರಾ ಹತ್ತಿರದವರನ್ನು ನೋಯಿಸಿಯೂ ಭಂಡ ಬಾಳನ್ನು ನಡೆಸುತ್ತಿರುವ ಮಹಿಳೆಯರು–ಹೀಗೆ ನಾನಾ ಸ್ವಭಾವಗಳ ಹೆಂಗಸರನ್ನು, ನಾನಾ ನಿಲುವುಗಳ, ಅಭಿರುಚಿಗಳ ಮಹಿಳೆಯರನ್ನು ನನ್ನ ಅನುಭವದ ತೆಕ್ಕೆಯೊಳಕ್ಕೆ ಸೇರಿಸಿಕೊಳ್ಳುತ್ತ ಹೋಗಿದ್ದೇನೆ. ಹೆಣ್ಣೊಬ್ಬಳು ಕ್ರೌರ್ಯಕ್ಕೆ ಒಳಗಾದಾಗ, ಹಿಂಸೆಗೆ ತುತ್ತಾದಾಗ ನನ್ನ ಮನಸ್ಸು ನೋವಿನಿಂದ ಕವುಚಿಕೊಳ್ಳುವಂತೆಯೇ, ಬಿಡುಬೀಸಾದ ಜೀವನ ನಡೆಸುತ್ತ ಹೃದಯ ಶ್ರೀಮಂತಿಕೆಯನ್ನು ಗಾಳಿಗೆ ತೂರುತ್ತ, ಮತ್ತೊಬ್ಬರ ಬದುಕನ್ನು ಭಗ್ನಗೊಳಿಸುವ ಹೆಂಗಸರನ್ನು ಕಂಡಾಗಲೂ ನನ್ನ ಮನಸ್ಸು ಜಿಗುಪ್ಸೆಯಿಂದ ಕುಗ್ಗುತ್ತವೆ.

ನಾನು ಕಂಡ ಇಂಥ ಮಹಿಳೆಯರನ್ನು ಕಾರಂತರು ಕಾದಂಬರಿಕಾರರಾಗಿ ಯಾವ ದೃಷ್ಟಿಕೋನದಿಂದ ನೋಡಿದ್ದಾರೆ ಎನ್ನುವುದನ್ನು ಕಳೆದ ದಿನಗಳಲ್ಲಿ ಓದಿಕೊಂಡಿದ್ದೇನೆ. ಜೀವನದಲ್ಲಿ ತುಂಬಾ ಮಾಗಿರುವ ಬದುಕಿನಲ್ಲೆ ಅಲ್ಲದೆ ಅನುಭವದಲ್ಲೂ ತುಂಬಾ ದೂರ ಸಾಗಿರುವ ಕಾರಂತರು ತಮ್ಮ ದೀರ್ಘ ಜೀವನದುದ್ದಕ್ಕೂ ಮಹಿಳೆಯರನ್ನೂ ಒಳಗೊಂಡಂತೆ ಅಸಂಖ್ಯಾತ ವ್ಯಕ್ತಿಗಳನ್ನು ಭೇಟಿಯಾಗಿದ್ದಾರೆ. ಜಗತ್ತಿನ ಪ್ರತಿಯೊಂದನ್ನೂ ಆಸಕ್ತಿಯಿಂದ ವೀಕ್ಷಿಸಬಲ್ಲ ಕಾರಂತರು ಮಹಿಳೆಯರನ್ನು ಕುರಿತಂತೆ ತಮ್ಮದೇ ಆದ ತತ್ತ್ವಗಳನ್ನು ರೂಢಿಸಿಕೊಂಡಿದ್ದಾರೆ. ಅವರ ಬದುಕಿಗೆ ತಮ್ಮದೇ ಆದ ಅರ್ಥವನ್ನು ನೀಡಿದ್ದಾರೆ. ಅವರ ಸೋಲು ಗೆಲವುಗಳಿಗೆ ಸಾಕ್ಷಿಯಾಗಿ ನಿಂತಿದ್ದಾರೆ. ಹೆಂಗಸರನ್ನು ಅನುಕಂಪ-ಅನುಮಾನ ದೃಷ್ಟಿಗಳಿಂದ ಕಂಡ ಕಾರಂತರು ತಮ್ಮ ಕಾದಂಬರಿಗಳಲ್ಲಿ ಅವರ ಮೇಲೆ ಯಾವ ಸದ್ಗುಣಗಳನ್ನು ಆರೋಪಿಸಿದ್ದಾರೆ, ಯಾವ

ಅಹವಾಲುಗಳನ್ನು ಹೊರಿಸಿದ್ದಾರೆ. ಈ ಆಧಾರದ ಮೇಲೆ ಮಹಿಳೆಯನ್ನು ಕುರಿತಂತೆ ಅವರ ಒಟ್ಟು ನಿಲುವನ್ನು ನಾವು ದೊರಕಿಸಿಕೊಳ್ಳಬಹುದಾಗಿದೆ.

ಕಾರಂತರು ತಮ್ಮ ಕಾದಂಬರಿಗಳಲ್ಲಿ ನಗರದ ಮಹಿಳೆಯರನ್ನು ಜೀವನದ ಅನೇಕ ಸ್ಥಿತ್ಯಂತರಗಳಿಗೆ ಸಿಲುಕಿಸಿ ಅವರು ಅದನ್ನು ಮೆಟ್ಟಿ ಹೇಗೆ ಮೇಲೇಳುತ್ತಾರೆ. ಅಥವಾ ಅದರ ಉಗ್ರತೆಯಲ್ಲಿ ಹೇಗೆ ಕುಸಿಯುತ್ತಾರೆ ಎನ್ನುವುದನ್ನು ನಿರೂಪಿಸಿದರೂ ಸಾಮಾನ್ಯ ಎಲ್ಲ ಪುಸ್ತಕಗಳಲ್ಲೂ ನನ್ನ ಮನಸ್ಸನ್ನು ಮುಟ್ಟಿರುವ ಅಂಶ ಅವರು ಗಂಡು-ಹೆಣ್ಣುಗಳ ನಡುವಣ ಸಂಬಂಧವನ್ನು ಬೆಳೆಸುವ ಬಗೆ. ಮಾನವ ಕುಲದ ಮುಂದು ವರಿಕೆಗೆ ಹೆಣ್ಣೇ ಪ್ರಧಾನ ಎಂಬ ವಾಸ್ತವತೆಯ ಪ್ರಜ್ಞೆ ಇರುವ ಕಾರಂತರು ಗಂಡು ಹೆಣ್ಣುಗಳನ್ನು ಪರಸ್ಪರರಿಗೆ ಎಟುಕಿಸುತ್ತ, ಒಬ್ಬರ ಜೀವನವನ್ನು ಮತ್ತೊಬ್ಬರ ಜೀವ ನಕ್ಕೆ ಪೂರಕವಾಗಿಸುತ್ತ, ಈ ಸಂಬಂಧದ ಹಾದಿಯಲ್ಲಿ ಎದುರಾಗಬಹುದಾದ ಎಡರು ತೊಡರುಗಳು, ಮೂಡಬಹುದಾದ ಸರಸ–ವಿರಸಗಳು, ಕ್ಷೋಭೆ - ಕ್ಷುಲ್ಲಕತೆಗಳು ಎಲ್ಲ ವನ್ನೂ ತಮ್ಮ ಕಾದಂಬರಿಗಳ ಕಕ್ಷೆಯೊಳಕ್ಕೆ ತಂದುಕೊಳ್ಳುತ್ತಾರೆ. ನಗರದ ಮಹಿಳಾ ಪಾತ್ರಗಳಂತೂ ಇಂಥದೊಂದು ಸಂಬಂಧದಿಂದಲೇ ಬೆಳಗುತ್ತವೆ ಅಥವಾ ಈ ಒಂದು ಸಂಬಂಧದೊಂದಿಗೇ ಸೆಣಸಾಡುತ್ತವೆ. ಕಾರಂತರ ಪುಸ್ತಕಗಳನ್ನು ಕೇವಲ ರಂಜನೆಗಾಗಿ ಓದಿಕೊಳ್ಳುತ್ತೇವೆ ಎನ್ನುವುದು ಸರಿಯಲ್ಲ. ಈತ ಮಾರುಕಟ್ಟೆ ದೃಷ್ಟಿ ಯಿಂದ ಪುಸ್ತಕವನ್ನು ಎಂದೂ ಬರೆಯಲಾರರು ಎಂಬ ಸಂಗತಿ ನಮಗೆ ಗೊತ್ತಿರುವಾಗ ಅಲಂಕಾರಿಕ ಬರವಣಿಗೆಯ ಮೂಲಕ ಮನಸ್ಸಿಗೆ ಖುಷಿ ಉಂಟುಮಾಡಿಕೊಳ್ಳುವ ಆಸೆಯಿಂದ ಇವರ ಕಾದಂಬರಿಗಳನ್ನು ಕೈಗೆತ್ತಿಕೊಂಡರೆ ನಿರಾಶೆಯೇ ಕಾದಿದ್ದೀತು. ಕಾರಂತರು ಸೃಷ್ಟಿಸುವ ಎಲ್ಲ ನಗರದ ಮಹಿಳಾ ಪಾತ್ರಗಳೂ ಸಮಗ್ರವಾಗಿವೆ ಎಂಬ ಅವಸರದ ನಿರ್ಣಯಕ್ಕೆ ನಾನು ಬರಲಾರೆ. ಪ್ರತಿ ವರ್ಷವೂ ಓದುಗರಿಗೆ ಒಂದು ಕಾದಂಬರಿಯನ್ನು ನೀಡುತ್ತೇನೆ ಎಂದು ದೀಕ್ಷೆ ಕೊಟ್ಟಂತೆ, ಇದು ಈ ವರ್ಷದ ಕಾದಂಬರಿ ಎಂದು ಮುನ್ನುಡಿಗಳಲ್ಲಿ ವಿಶದೀಕರಿಸುತ್ತ ಮುನ್ನಡೆದಿರುವ ಕಾರಂತರ ಪಾತ್ರಗಳೆಲ್ಲವೂ ಕ್ರಿಯಾಶೀಲವಾಗಿಯೇ ಇರಬೇಕು ಎಂದು ಅಪೇಕ್ಷಿಸುವುದೂ ತಪ್ಪಾಗ ಬಹುದು. ಮಹಿಳೆಯರ ಸಮಸ್ಯೆಗಳನ್ನೆಲ್ಲ ಚರ್ಚಿಸುವ ಕಾರ್ಯದಲ್ಲಿ, ಅವರ ಅಂತರಾಳ ವನ್ನು ಹೊಕ್ಕು ಅಲ್ಲಿನ ಗುಟ್ಟನ್ನು ಬಯಲಿಗೆಳೆಯುವಲ್ಲಿ ಎಷ್ಟೇ ನಿಸ್ಪೃಹತೆಯಿಂದ ತೊಡಗಿದರೂ ಸೂಕ್ತ ಸಲಕರಣೆಯಿಲ್ಲದೆ ಪಾತ್ರ ಪೋಷಣೆಯಲ್ಲಿ ಇವರೂ ಅನೇಕ ವೇಳೆ ಸೋಲುತ್ತಾರೆ ಅನ್ನಿಸುತ್ತದೆ. ಸನ್ನಿವೇಶ, ಸಂಭಾಷಣೆಗಳ ಪುನರಾವರ್ತನೆ ಯಿಂದ, ಉಪನ್ಯಾಸ ಧಾಟಿಯ ಬರವಣಿಗೆಯಿಂದ ನನ್ನನ್ನು ಬೇಸರಗೊಳಿಸುತ್ತಾರೆ. ಕೆಲವೊಮ್ಮೆ ವಿಪುಲ ಸಾಮಗ್ರಿಯಿದ್ದರೂ ಕಾದಂಬರಿಯನ್ನು ಮುಗಿಸುವ ಬಗ್ಗೆ ಗೊಂದಲಕ್ಕೆ ಒಳಗಾದವರಂತೆ ಆತುರಾತುರವಾದ ಬರವಣಿಗೆಯಲ್ಲೂ ತೊಡಗು ತ್ತಾರೆ ಎಂದೆನ್ನಿಸುತ್ತದೆ. ಆದರೂ ಕಾದಂಬರಿಕಾರ ಕಾರಂತರ ಮೇಲೆ ನನಗೆ ಗೌರವ

ಮೂಡಿರುವುದಕ್ಕೆ ಕಾರಣ ಬರವಣಿಗೆಯ ಹೆಣಿಗೆ ಯಾವ ರೀತಿಯದೇ ಆಗಿದ್ದರೂ, ವಸ್ತು ಏನೇ ಆಗಿದ್ದರೂ ಹೆಣ್ಣಿನ ಬಗ್ಗೆ ಇವರಿಗೆ ವಿಶೇಷ ಕಳಕಳಿ ಇದೆ ಎಂಬುದರಿಂದಾಗಿ; ತಮ್ಮ ವಯಸ್ಸನ್ನು ಮೀರಿ ನಿಂತು ತರುಣ ಪಾತ್ರಗಳ ತುಡಿತವನ್ನು, ತುಮುಲಿಕೆ ಯನ್ನು, ಆತಂಕಗಳನ್ನು ಅರಿಯಲು ಯತ್ನಿಸುತ್ತಾರೆ ಎಂಬುದರಿಂದಾಗಿ ; ಇವರ ಬರವಣಿಗೆಯ ಹಿಂದಿರುವ ಉದ್ದೇಶ ಯಥಾರ್ಥವಾದದ್ದು, ಉದಾತ್ತವಾದದ್ದು ಎಂಬುದಕ್ಕಾಗಿ.

ಈ ಪ್ರಸ್ತಾವನೆಯೊಂದಿಗೆ ನಾನು ನನ್ನ ಮನಸ್ಸನ್ನು ತೀರಾ ಕಲಕಿರುವ ಹಾಗೂ ನನ್ನಲ್ಲಿ ವಿವಾದಗಳನ್ನು ಎಬ್ಬಿಸಿರುವ ಕೆಲವು ಪಾತ್ರಗಳನ್ನು ಕುರಿತಂತೆ ನನ್ನ ವಿಚಾರ ಗಳನ್ನು ಇಲ್ಲಿ ಹಂಚಿಕೊಳ್ಳುತ್ತೇನೆ. ಕಾರಂತರ ಎಲ್ಲ ಕಾದಂಬರಿಗಳನ್ನು ಕುರಿತ ಸಮಗ್ರ ವಿಶ್ಲೇಷಣೆ ಇದಲ್ಲ. ನಾನು ಓದಿಕೊಂಡ ಕೆಲವು ಕಾದಂಬರಿಗಳ ನೆರವಿನಿಂದ ನಗರ ವಿದ್ಯಾ ವಂತ ಮಹಿಳೆಯರ ಬಗ್ಗೆ ಕಾರಂತರ ಆಲೋಚನೆ ಯಾವ ದಿಕ್ಕುಗಳಲ್ಲಿ ಸಾಗುತ್ತದೆ ಎಂಬ ಬಗ್ಗೆ ಸೂಕ್ಷ್ಮ ಪರಿಚಯ ಮಾಡಿಕೊಡುವುದು ಮಾತ್ರ ನನ್ನ ಗುರಿ.

ಈ ಸಂಕಿರಣಕ್ಕೆ ಒಪ್ಪಿಕೊಂಡಂದಿನಿಂದಲೂ ನನ್ನ ಮನಸ್ಸನ್ನು ತುಂಬಿಕೊಂಡಿರು ವವಳು ಕಾರಂತರ "ಒಂಟಿ ದನಿ" ಕಾದಂಬರಿಯ ಶಾಲಿನಿ. ಈ ಒಂದು ಪಾತ್ರ ನನ್ನನ್ನು ಇಷ್ಟು ಗಾಢವಾಗಿ ಆವರಿಸಿಕೊಂಡಿರುವುದಕ್ಕೆ ನನ್ನ ಒಂದು ವೈಯಕ್ತಿಕ ಅನುಭವವೂ ಕಾರಣವಿರಬಹುದು. ಗಂಡನ ಅನಾದರಣೆಯನ್ನು ಸಹಿಸದೆ ಸುಟ್ಟುಕೊಂಡು ಸತ್ತ ಶಾಲಿನಿ ನನ್ನ ಕಾಲೋನಿಯಲ್ಲಿಯೇ ಇಂಥದೇ ಒಂದು ಪ್ರಸಂಗದಲ್ಲಿ ಪ್ರಾಣ ನೀಗಿ ಕೊಂಡ ಕೋಕಿಲಾಳನ್ನು ನನಗೆ ಮತ್ತೆ ನೆನಪಿಸುತ್ತ ನನ್ನ ಸ್ಮರಣೆಯಲ್ಲಿ ಸದಾ ನಿಂತು ಕೊಂಡಿದ್ದಾಳೆ. ಹೀಗೆ ಸಾಯುವ ಮಹಿಳೆಯರನ್ನು ಕಂಡಾಗಲೆಲ್ಲ ನಾನು ನನ್ನಲ್ಲೆ ಪ್ರಶ್ನಿಸಿಕೊಂಡಿದ್ದೇನೆ—ಸ್ವತಂತ್ರವಾಗಿ ಬಾಳಬಹುದಾಗಿದ್ದ ಸವಲತ್ತಿದ್ದ ಇಂಥವರೂ ಬದುಕನ್ನೇ ತ್ಯಜಿಸುವಂತಹ ವಿಕೋಪಕ್ಕೆ ಏಕೆ ಹೋಗುತ್ತಾರೆ ಎಂದು. ಶಾಲಿನಿಯ ಸ್ಥಿತಿ ನಮಗೆ ಅರ್ಥವಾಗುವಂಥದ್ದೆ. ವೃತ್ತಿಯಲ್ಲಿ ತುಂಬಾ ಪರಿಣತರಾಗಿದ್ದೂ ಉದ್ಗ್ರಂಥಗಳನ್ನು ಓದಿಕೊಂಡಿದ್ದೂ ಮನುಷ್ಯ ಸಂಬಂಧಗಳಿಗೆ ಸಂಬಂಧಪಟ್ಟಂತೆ ಹೃದಯವನ್ನು ಕಲ್ಲಾಗಿಸಿಕೊಳ್ಳುವ ಡಾ. ಜಯಂತನಂಥವರ ಕೈಗೆ ಸಿಕ್ಕುವ ಹೆಣ್ಣು ಮಕ್ಕಳ ಪಾಡೆಲ್ಲ ಇದೇ ಏನೋ. ತಾವಿನ್ನೂ ಪ್ರಸಿದ್ಧಿಗೆ ಬರದಿದ್ದಾಗ ತಮ್ಮ ಪಾಂಡಿತ್ಯದ ಬಗ್ಗೆ ಅಹಂಭಾವ ಮೊಳೆಯದಿದ್ದಾಗ ಅವಸರದಲ್ಲಿ ಮದುವೆಯನ್ನು ಪೂರೈಸಿಕೊಳ್ಳುವ ಜಯಂತನಂಥ ಗಂಡಸರು ಬೇರೆ ಬೇರೆ ಕ್ಷೇತ್ರಗಳಲ್ಲಿನ ಮಹಿಳೆ ಯರನ್ನು ಭೇಟಿಯಾಗುತ್ತಿದ್ದಂತೆ, ತಾವು ಕೈಹಿಡಿದ ಹೆಂಡತಿ ಅಗ್ಗದ ವಸ್ತು ಎಂದು ಭಾವಿಸುವ ಪ್ರಸಂಗಗಳು ದಿನನಿತ್ಯದವು. ಕೌಮಾರ್ಯ ಕಚಕುಳಿ ಇಡುತ್ತಿರುವ ಕಾಲೇಜು ದಿನಗಳಲ್ಲಿ ತಮ್ಮ ಅಧ್ಯಾಪಕನೇ ಆರಾಧ್ಯದೈವ ಎಂದು ಬಗೆದು ತರಗತಿ ಯಲ್ಲಿ ಆತನಿಗೆ ಗೋಣಾಡಿಸಿದಂತೆಯೇ ಜೀವನದಲ್ಲೂ ಅವನಿಗೆ ಹೂಗುಟ್ಟುತ್ತ

ಬದುಕನ್ನು ಸವೆಸುವ ಶಾಲಿನಿಯಂತಹ ಮಹಿಳೆಯರು ಇಲ್ಲದಿಲ್ಲ. ಆದರೆ ಶಾಲಿನಿ ಈ ಎಲ್ಲ ಜಂಜಾಟವನ್ನೂ ಬಿಡಿಸಿಕೊಂಡು ಬದುಕುವ ಸಾಧ್ಯತೆ ಇತ್ತು ಎಂದು ನನಗೆ ಅನ್ನಿಸಿರುವುದಕ್ಕೆ ಕಾರಣ ಕಾದಂಬರಿಕಾರರು ಆಕೆಗೂ ಸ್ವತಂತ್ರ ವಿಚಾರಗಳಿದ್ದವು, ಆಕೆಗೂ ಹಿತೈಷಿಗಳು ಇದ್ದರು ಎಂದು ತೋರಿಸಲು ಪ್ರಯತ್ನಿಸಿರುವುದರಿಂದಾಗಿ. ಜಯಂತನ ಶಿಷ್ಯನೊಂದಿಗೆ ಕಲೆ-ವಿಮರ್ಶೆಯನ್ನು ಕುರಿತಂತೆ ಕಾದಂಬರಿಕಾರ ಆಕೆಯ ಬಾಯಿಂದ ದೊಡ್ಡ ದೊಡ್ಡ ಮಾತುಗಳನ್ನು ಆಡಿಸುವ ಮೂಲಕ ಈ ಅಂಶವನ್ನು ಹೇಗೆ ಸ್ಪಷ್ಟೀ ಕರಿಸುತ್ತಾರೋ ಹಾಗೆಯೇ ಶಾಲಿನಿಗೂ ಆಕೆಯ ಅಕ್ಕನಿಗೂ ಇದ್ದ ನಿಕಟ ಸಂಬಂಧ ವನ್ನು ತೋರಿಸುವ ಮೂಲಕವೂ ಇದಕ್ಕೆ ಇಂಬು ನೀಡುತ್ತಾರೆ. ಗಂಡನಿಗೆ ಎದುರುತ್ತರ ಕೊಡ ಬಲ್ಲವಳಾಗಿದ್ದ, ತನ್ನ ಸೋದರಿಯನ್ನು ಮನೆಗೆ ಕರೆಸಿಕೊಂಡು ಆಕೆಯೊಂದಿಗೆ ಗಂಡನ ವರ್ತನೆಯನ್ನೆಲ್ಲ ತೋಡಿಕೊಳ್ಳುವ ಶಾಲಿನಿ, ಸ್ವತಂತ್ರ ಜೀವನಕ್ಕೆ ಅನುವಾಗುವ ವಾತಾವರಣವಿರುವ ಮುಂಬಯಿನಂತಹ ನಗರದಲ್ಲಿ ಇದ್ದುಕೊಂಡೂ ತನ್ನ ವಿದ್ಯಾರ್ಹತೆಯನ್ನು ಉಪಯೋಗಿಸಿಕೊಳ್ಳದೆ, ಯಾರೂ ತನಗೆ ಹಿತಚಿಂತಕರು ಇಲ್ಲ ಎಂಬಂತೆ, ತನಗೆ ಬೇರಾವ ಮಾರ್ಗವೂ ಉಳಿದಿಲ್ಲ ಎಂಬಂತೆ ಆತ್ಮಹತ್ಯೆ ಮಾಡಿ ಕೊಳ್ಳುವುದು ನನಗೆ ಸಮಂಜಸ ಎನ್ನಿಸುವುದಿಲ್ಲ. ಅತ್ಯಂತ ಸೂಕ್ಷ್ಮಳಾದ ಶಾಲಿನಿ ಯನ್ನು ವಾತಾವರಣ, ವಿದ್ಯಾರ್ಹತೆ, ಬಂಧುಗಳು ಈ ಯಾವುದರಿಂದಲೂ ದೊರಕಿಸಿ ಕೊಳ್ಳಲಾಗದಂಥ ಆಸೆಯೊಂದು ಕಾಡುತ್ತಿತ್ತು ಎಂಬುದನ್ನು ಕಾರಂತರು ಸಮರ್ಥ ವಾಗಿ ಸೂಚಿಸಿದ್ದರೆ ಆಕೆಯ ವರ್ತನೆ ಸಹಜ ಎನ್ನಿಸುತ್ತಿತ್ತೇನೊ. ಕಾದಂಬರಿಕಾರರು ಒಂದೆಡೆಯಲ್ಲಿ ಮಾತ್ರ ಶಾಲಿನಿಗೆ ತಾಯಿಯಾಗುವ ಬಯಕೆ ಇತ್ತು ಎಂದು ತುಂಬಾ ಸ್ಥೂಲವಾಗಿ ಸೂಚಿಸಿ ಮತ್ತೆಲ್ಲೂ ಆ ಪ್ರಸಂಗವನ್ನೇ ಎತ್ತದಿದ್ದಾಗ, ಹೆಣ್ಣಿಗೆ ಅತ್ಯಂತ ನಿಕಟವಾದ ಇಂಥ ವಿಚಾರವನ್ನು ತುಂಬಾ ಹಗುರವಾಗಿಸುವ ರೀತಿ ನನಗೆ ತುಂಬಾ ನಿರಾಶೆಯನ್ನು ಉಂಟು ಮಾಡುತ್ತದೆ. ಗಂಡನೊಂದಿಗೆ ಲೈಂಗಿಕ ಕ್ರಿಯೆಯಲ್ಲಿ ತೊಡಗುವ ಹೆಣ್ಣು, ಆ ಕ್ರಿಯೆಯ ಫಲವಾಗಿ ಮಗುವೊಂದನ್ನು ಅಪೇಕ್ಷಿಸುವುದು ತೀರಾ ಸಹಜ. ದಿನವೆಲ್ಲ ಹೊರಗೆ ದುಡಿಯುವ, ಹಾಗೂ ತನ್ನ ಪ್ರತಿಷ್ಠೆಯನ್ನು ಸಮಾಜದಲ್ಲಿ ಬೆಳೆಸಿಕೊಳ್ಳುವ ಹಂಬಲವಿರುವ ಜಯಂತನಿಗೆ ಮಗುವನ್ನು ಹೊಂದುವ ಆಕೆಯ ಬಯಕೆ ಗೌಣವಾಗಿ ಕಂಡರೂ, ಆ ಒಂದು ಬಯಕೆಯೇ ಆಕೆಯ ಜೀವನವನ್ನು ಎತ್ತಿ ನಿಲ್ಲಿಸುವಂಥದ್ದು. ಗಂಡ ತನ್ನನ್ನು ಎಷ್ಟೇ ಉದಾಸೀನನಾಗಿ ಕಂಡರೂ, ಆತನ ವರ್ತನೆ ತನ್ನ ಹೃದಯ ಸೀಳಿದರೂ, ಮಗುವಿನಲ್ಲೆ ತನ್ನ ದುಗುಡವನ್ನು ಮರೆತು ತನ್ನ ಭವಿಷ್ಯವನ್ನು ಮಗುವಿನ ಭವಿಷ್ಯದೊಂದಿಗೆ ಹೆಣ್ಣು ತಾಳೆಯಾಗಿಸಿಕೊಳ್ಳುವಾಗ ಅವಳಿಗೆ ತನ್ನ ಜೀವನದಲ್ಲಿ ಹಾದು ಹೋಗುವ ತಾಯ್ತನದ ಹಂತ ಎಷ್ಟು ಮಹತ್ವದ್ದು ಎಂಬುದನ್ನು ಕಾದಂಬರಿಕಾರ ಮನವರಿಕೆ ಮಾಡಿಕೊಡಲು ಪ್ರಯತ್ನಿಸದಿದ್ದಾಗ ಶಾಲಿನಿಯ ಪಾತ್ರ ಅವರ ಹಿಡಿತಕ್ಕೆ ಸಿಕ್ಕಂತಾಗಲೇ ಇಲ್ಲ ಎನ್ನುವುದು ನನ್ನ ಅಭಿ ಪ್ರಾಯ. ಸೃಷ್ಟಿಯ ಬಗ್ಗೆ ಜೀವನ ವಿಕಾಸದ ಬಗ್ಗೆ ನಮ್ಮೆಲ್ಲರಿಗಿಂತಲೂ ಹೆಚ್ಚು

ವೈಜ್ಞಾನಿಕ ಜ್ಞಾನವನ್ನು ಪಡೆದಿರುವ ಕಾರಂತರಿಗೆ ತಾಯ್ತನದ ಹಿರಿಮೆ ಗೊತ್ತಿಲ್ಲ ಎನ್ನುವುದು ಮೂರ್ಖತನವಾಗಬಹುದು. ಆದರೆ ಒಟ್ಟಿನಲ್ಲಿ ಈ ಕಾದಂಬರಿಯಲ್ಲಂತೂ ಈ ಒಂದು ಪಾತ್ರಕ್ಕೆ ಸಂಬಂಧಪಟ್ಟಂತೆ ಅವರಿಗೆ ಬಹುಶಃ ಮಹಿಳೆಯ ಬಗೆಗೆ ಅನುಕಂಪವನ್ನು ಮೂಡಿಸುವುದೇ ಪ್ರಧಾನ ಗುರಿ. ಆಕೆ ಪರಿಹಾರ ಮಾರ್ಗಗಳನ್ನು ಹುಡುಕಿಕೊಂಡು ಸ್ವತಂತ್ರಳಾಗುವುದು ಈ ಕೃತಿಯಲ್ಲಂತೂ ಅವರಿಗೆ ಬೇಕಿಲ್ಲ. ಕಾದಂಬರಿಯನ್ನು ಮನರಂಜನೆಯ ಮಾಧ್ಯಮವಾಗಿ ಬಳಸಿಕೊಳ್ಳದೆ ಅದನ್ನು ಜನರ ಬದುಕನ್ನು ಹದಗೊಳಿಸುವ ಮಾಧ್ಯಮವನ್ನಾಗಿ ಬಳಸಿಕೊಳ್ಳಬಲ್ಲ ಸಾಮರ್ಥ್ಯವಿರುವ ಕಾರಂತರಂತಹವರು, ತಮ್ಮ ಕೃತಿಯನ್ನು ಹೆಣ್ಣಿನ ಬದುಕಿಗೆ ಕ್ರಿಯಾತ್ಮಕ ತಿರುವನ್ನು ಸೂಚಿಸಲು ಬಳಸಿಕೊಳ್ಳಬಹುದಾದರೆ ಹೆಂಗಸರ ಜಗತ್ತು ಅವರಿಗೆ ಹೆಚ್ಚು ಋಣಿಯಾಗಿರುತ್ತವೆ ಎಂದು ಹೇಳಿದರೆ ಅದು ಬಹುಶಃ ನನ್ನ ಉದ್ಧಟತನವಾಗಲಾರದು. ಈ ಮಾತನ್ನು ಹೇಳುವಾಗ ಕಾದಂಬರಿಯ ಚಿತ್ರಣ ಜೀವನದ ಘಟನೆಗಳಿಗೆ ಹತ್ತಿರವಾಗಿರಬೇಕು ಎಂಬ ಅಂಶವನ್ನು ನಾನು ಮರೆತಿಲ್ಲ. ಆದರೆ ಹೆಂಗಸಿನ ದೃಷ್ಟಿಕೋನದಿಂದ ಸಮಾಜವನ್ನು ನೋಡುತ್ತ ಸಾಮಾನ್ಯವಾಗಿ ಎಲ್ಲೆಡೆ ನಿರಾಶೆ-ಅಸಹಾಯಕತೆ ತಾಂಡವವಾಡುತ್ತಿರುವುದನ್ನು ಕಾಣುತ್ತಿರುವಾಗ ಕತೆ-ಕಾದಂಬರಿಗಳಿಂದಲಾದರೂ ನಮ್ಮ ಹೆಣ್ಣು ಮಕ್ಕಳಿಗೆ ಜೀವನ ನಿರ್ವಹಣೆಯ ಪ್ರೇರಣೆಯನ್ನು ನಾನಂತೂ ಅಪೇಕ್ಷಿಸುತ್ತೇನೆ.

ಕಾರಂತರ "ಬತ್ತದ ತೊರೆ" ಕಾದಂಬರಿಯಲ್ಲಿ ಹೆಣ್ಣನ್ನು ಜೀವನ ಪರ್ಯಂತ ಕಾಡುವ ಅನೇಕ ಮೂಲಭೂತ ಪ್ರಶ್ನೆಗಳು ಹುಟ್ಟಿಕೊಳ್ಳುತ್ತವೆ. ನಗರದ ವಿದ್ಯಾವಂತ ಮಹಿಳೆಯರಿಗಾಗಿಯೇ ಕಾರಂತರು ಒಂದು ಇಡೀ ಪುಸ್ತಕವನ್ನು ಮೀಸಲಿಟ್ಟಿರುವುದು ಇದೊಂದೇ ಕಾದಂಬರಿಯಲ್ಲೆ. ಐವರು ಮಹಿಳೆಯರ ಜೀವನ ಚಿತ್ರಣವಿರುವ ಇಲ್ಲಿ ಕಾರಂತರಿಗೆ ಮಹಿಳಾ ಜಗತ್ತಿನ ಜೀವನ ವಿಲಾಸಗಳನ್ನು ವಿಪುಲವಾಗಿ ಚರ್ಚಿಸುವ ಅವಕಾಶವಿದೆ. 292 ಪುಟಗಳಷ್ಟು ವಿಸ್ತಾರ ಕ್ಷೇತ್ರವನ್ನು ಕಾರಂತರು ಹೆಂಗಸಿನ ಸಾಹಸ ಪ್ರವೃತ್ತಿ, ಆಕೆಯ ಆದರ್ಶ, ಕೀಳರಿಮೆ, ನಿರಾಶೆಯ ನಿಲುವು ಎಲ್ಲವನ್ನೂ ಬಿಂಬಿಸಲು ಬಳಸಿಕೊಳ್ಳುತ್ತಾರೆ.

ಹೆಣ್ಣು ಎಷ್ಟೇ ವಿದ್ಯಾವಂತೆಯಾಗಿರಲಿ, ತನ್ನ ಸ್ವಂತಿಕೆಯ ಬಗ್ಗೆ ಅಭಿಮಾನವುಳ್ಳವಳಾಗಿರಲಿ ಅವಳಿಗೇ ತಿಳಿಯದಂತೆ ಗಂಡಿಗೆ ಸಂಬಂಧಪಟ್ಟಂತೆ ಆಕೆಯಲ್ಲಿ ಅಂಕುರಿಸುವ ಬಯಕೆಗಳು ಅವಳ ಹಿಡಿತಕ್ಕೆ ಸಿಕ್ಕದೆಯೇ ಬದುಕಿನಲ್ಲಿ ಬೃಹತ್ತಾಗುತ್ತವೆ ಎನ್ನುವುದು ಇದರಲ್ಲಿನ ವಸ್ತು.

ಹೈಸ್ಕೂಲು ನಂತರದ ಹುಡುಗಿಯರು ತಮ್ಮ ಭಾವೀ ಜೀವನವನ್ನು ಕುರಿತು ಆಲೋಚನೆ ಮಾಡುತ್ತಿರುವ ಸಂದರ್ಭದಿಂದ ಪ್ರಾರಂಭವಾಗುವ ಕಾದಂಬರಿಯಲ್ಲಿ ಕಾರಂತರು ಹುಡುಗಿಯರ ಮುಗ್ಧ ಮನಸ್ಸಿಗೆ ಮೀರಿದ ಕೆಲಸವನ್ನು ಅವರಿಂದ ಮಾಡಿಸಿ ಸಂತೋಷ ಪಟ್ಟಂತಿದೆ. ಪ್ರತಿಯೊಬ್ಬ ಹುಡುಗಿಯ ಬೆನ್ನಿಗೂ ಒಂದೊಂದು

ಸಮಸ್ಯೆ ಕಟ್ಟಿ ಉಲ್ಲಾಸಯುತವಾಗಿರಬೇಕಾದ ಆ ಹುಡುಗಿಯರ ಬದುಕಿನಲ್ಲಿ ಗಾಢಾಂಧಕಾರ ತುಂಬಿಸುತ್ತಾರೆ.

ಕಾರಂತರು ಮಂಜುಳೆ-ವಿನತೆ-ಅಂಜಲಿಯರಿಗೆ ಸಂಬಂಧಿಸಿದಂತೆ ಹೆಣೆದಿರುವ ಘಟನೆಗಳೆಲ್ಲವೂ ಎಲ್ಲಿಯೂ ನಡೆಯುವಂಥವೆ. ಯೌವ್ವನದ ಅದಮ್ಯ ಉತ್ಸಾಹದಲ್ಲಿ ಯಾವುದೋ ಒಂದು ಧ್ಯೇಯಕ್ಕೆ ಬದ್ಧರಾಗಲು ಅಪೇಕ್ಷಿಸಿಯೂ ಬೀದಿ ಪಾಲಾಗುವ ಗುರಿರಹಿತ ಜೀವನ ನಡೆಸಬೇಕಾದ ಪರಿಸ್ಥಿತಿಗೆ ಸಿಲುಕುವ ಹೆಣ್ಣುಗಳು ನಾವು ಕಾಣದವರೇನೂ ಅಲ್ಲ. ಹೆಣ್ಣಿನ ಜೀವನಕ್ಕೆ ಮಾರ್ಗದರ್ಶನ ನೀಡಬಲ್ಲಂಥ ಬರವಣಿಗೆಯನ್ನು ಕಾದಂಬರಿಕಾರ ನೀಡಬೇಕು ಎಂದು ಈ ಹಿಂದೆ ಹೇಳಿದ್ದೇನಾದರೂ ಯಾವುದೇ ಕಾದಂಬರಿಯ ವಸ್ತು ಅದು ಬರೆದ ಕಾಲಮಿತಿಯ ಚೌಕಟ್ಟಿಗೆ ಸಂಬಂಧಿಸಿದಂತೆ ವಾಸ್ತವವಾಗಿರಬೇಕು ಎನ್ನುವುದನ್ನು ನಾನು ಮರೆತಿಲ್ಲ. "ಒಂಟಿದನಿ" ಕಾದಂಬರಿಯನ್ನು ಕಾರಂತರು ಬರೆದದ್ದು 1966ರಲ್ಲಿ. ಮುಂಬಯಿ ಈ ಕಾಲದ ಹೊತ್ತಿಗೇ ನವನಾಗರಿಕತೆಯನ್ನು ಒಗ್ಗಿಸಿಕೊಂಡಿದ್ದ ಸ್ಥಳ. ಈ ಕಾಲಕ್ಕೆ ಸೇರಿದ ಶಾಲಿನಿ ತನ್ನ ಬದುಕನ್ನು ತಾನೇ ನಿರ್ವಹಿಸಿಕೊಳ್ಳದೆ ಹೋದಾಗ ನನಗೆ ನಿರಾಸೆಯಾದ್ದು ನಿಜ. ಆದರೆ ಕಾರಂತರು "ಬತ್ತದ ತೊರೆ" ಕಾದಂಬರಿಯನ್ನು ಬರೆದಿರುವುದು 1953ರಲ್ಲಿ. ಕಾರಂತರು ಈ ಕಾದಂಬರಿಗೆ ಆಯ್ದುಕೊಂಡಿರುವ ಕಾಲದಲ್ಲಿ ಪ್ರೇಮವಿವಾಹವಾಗುವ ಕಾತುರದಲ್ಲಿ ತಮ್ಮ ಆಸೆಗೆ ಅನುಗುಣವಾಗಿ ತಮ್ಮ ಬದುಕನ್ನು ರೂಪಿಸಿಕೊಳ್ಳುವಲ್ಲಿ ಊರು ಬಿಟ್ಟು ಓಡಿ ಹೋಗುವಂತಹ ಸಾಹಸ, ಕೆಚ್ಚನ್ನು ತೋರುವ ಹೆಣ್ಣು ಮಕ್ಕಳು ಮದ್ದೂರಿನಂತಹ ಸಣ್ಣ ಸ್ಥಳದಲ್ಲಿ ಇರಬಹುದಾದ ಸಾಧ್ಯತೆ ಇತ್ತೇ ಎನ್ನುವುದು ಗಮನಾರ್ಹ. ಕಾಲಮಿತಿಯ ದೃಷ್ಟಿಯಿಂದ ಈ ಕಾದಂಬರಿ ಸಮರ್ಪಕವಾಗಿದೆಯೇ ಎಂಬ ಬಗ್ಗೆ ನಾನು ಈಗಾಗಲೇ ಮೌಖಿಕವಾಗಿ ಕೆಲವರೊಂದಿಗೆ ಚರ್ಚಿಸಿದ್ದೇನೆ. ಕಾರಂತರು ತಮ್ಮ ಪಾತ್ರಗಳನ್ನು ಯಾವ ಕಾಲದಲ್ಲಿ ತೊಡಗಿಸುತ್ತಾರೋ ಆ ಕಾಲದ ಸ್ಥಿತಿಗತಿಗಳ ಬಗ್ಗೆ ಸರ್ವೇಸಾಮಾನ್ಯವಾಗಿ ತೀರಾ ಎಚ್ಚರಿಕೆಯಿಂದ ಇರುತ್ತಾರೆ. ಈ ಒಂದು ಅಂಶದ ಬಗ್ಗೆ ಆಕ್ಷೇಪ ಅಸಾಧುವಾದುದು ಎಂಬ ಅಭಿಪ್ರಾಯ ಕೇಳಿ ಬಂದಿದೆ. ನಾನು ಈ ಒಂದು ಅಂಶವನ್ನು ಚರ್ಚೆಗಾಗಿ ಸಭೆಯ ಮುಂದಿಟ್ಟು, ನನ್ನ ಆಕ್ಷೇಪಣೆಗೆ ಕಾರಣ ತಿಳಿಸುತ್ತೇನೆ. ಈ ಕಾದಂಬರಿಯ ಘಟನೆಗಳು ನಡೆದ ಕಾಲ ಎಲ್ಲೂ ನಿರ್ದಿಷ್ಟವಾಗಿ ಮೂಡಿರದಿದ್ದರೂ ಮಹಾಯುದ್ಧ ಆಗ ತಾನೆ ಮುಗಿದಿರುವ ಮಾತು ಒಂದೆರಡು ಬಾರಿ ಕಾದಂಬರಿಯಲ್ಲಿ ಸುಳಿಯುವುದರಿಂದ ಆ ಯುದ್ಧ ನಲವತ್ತರ ದಶಕದಲ್ಲಿ ಸಂಭವಿಸಿದ ಎರಡನೆ ಮಹಾಯುದ್ಧವೆಂದೂ, ಕಾರಂತರು ಮುನ್ನುಡಿಯನ್ನು 1953ರಲ್ಲಿ ಬರೆದಿರುವುದರಿಂದ 1945–52ರ ಅವಧಿಯೊಳಗೆ ಈ ಕಾದಂಬರಿಯನ್ನು ರಚಿಸಿರಬಹುದೆಂದು ಭಾವಿಸಬಹುದಾಗಿದೆ. ತಮ್ಮ ಚಿಪ್ಪನ್ನು ಕಳಚಿ ಹೊರಬರಬೇಕೆಂದು ಸಾರಿ ಸಾರಿ ಹೇಳಿ ಎಲ್ಲ ತರಹದಲ್ಲೂ ಹುರಿದುಂಬಿಸಿ, ಅಂತಹ ವಾತಾವರಣ ನಿರ್ಮಾಣ ಮಾಡಿಕೊಟ್ಟೂ, ವಿಮೋಚನೆಯ

ಹಾದಿಯನ್ನು ಹಿಡಿಯಲು ಮಹಿಳೆ ಇಂದಿಗೂ ಹಿಂದುಮುಂದು ನೋಡುತ್ತಿರುವಾಗ ಮದ್ದೂರಿನಂತಹ ಸಣ್ಣ ಊರಿನ ಶಾಲೆಯೊಂದರಲ್ಲಿ ಓದಿಕೊಂಡ ಹುಡುಗಿಯರು ಮಸಲತ್ತು ಮಾಡಿ ಮನೆ ಬಿಟ್ಟು ಹೊರಡುವುದು ನನಗಂತೂ ವಾಸ್ತವ ಎನ್ನಿಸುವುದಿಲ್ಲ.

ಈ ಕಾದಂಬರಿಯನ್ನು ಕುರಿತಂತೆ ಮೇಲೆ ಹೇಳಿದ ಖಾಸಗಿ ಚರ್ಚೆಯಲ್ಲಿ ಮದ್ದೂರು ಕರಾವಳಿಯ ಬಳಿಯಿರುವ ಸ್ಥಳವಾದ್ದರಿಂದ ಅಲ್ಲಿನ ಜನ ಬಹು ಹಿಂದೆಯೇ ಹೊರಗಿನವರ ಪ್ರಭಾವದಿಂದ ತುಂಬಾ ಪ್ರಗತಿಪರರಾಗಿ ಮಾರ್ಪಟ್ಟಿದ್ದರು, ಸಾಹಸ ಪ್ರವೃತ್ತಿ ಹೆಣ್ಣುಮಕ್ಕಳಲ್ಲಿ ಬೆಳೆದಿತ್ತು ಎಂಬ ಅಂಶ ಬಂದು ಹೋಗಿದೆ. ಪುಸ್ತಕಗಳನ್ನು ಓದಿಕೊಳ್ಳುವ ಮೂಲಕ ಕರಾವಳಿ ಪ್ರದೇಶಗಳ ಪರಿಚಯ ನಾನು ಮಾಡಿಕೊಂಡಿದ್ದೇನೆಯೇ ಹೊರತು ನನಗೆ ಆ ಸ್ಥಳಗಳು ಅಲ್ಲಿದ್ದುಕೊಂಡೇ ಪರಿಚಯವಿಲ್ಲ. ಆದರೂ ಮಹಿಳೆಯರ ಹಿಂದುಳಿದಿರುವಿಕೆ ಈ ಒಂದು ಪ್ರದೇಶಕ್ಕೆ ಅಥವಾ ಈ ಒಂದು ರಾಜ್ಯಕ್ಕೆ ಮಾತ್ರ ಸೀಮಿತವಾಗಿರದೆ ಇಡೀ ದೇಶಕ್ಕೆ ಅದು ಅನ್ವಯಿಸುವುದರಿಂದ ನನಗಂತೂ ಈ ಬಗ್ಗೆ ಅನುಮಾನವಿದೆ.

ಇದನ್ನು ಗಂಭೀರವಾಗಿ ಪರಿಗಣಿಸದೆ ಕಾದಂಬರಿ ರಚನೆಯ ಕಾಲವನ್ನು ಮರೆತು ಪಾತ್ರಗಳು ಒಂದು ನಿರ್ದಿಷ್ಟ ಸನ್ನಿವೇಶದಲ್ಲಿ ವರ್ತಿಸುವ ರೀತಿಯನ್ನೇ ಗಮನದಲ್ಲಿಟ್ಟುಕೊಂಡರೂ ಆಕಸ್ಮಿಕಗಳ ಮಹಾಪೂರ ಎನ್ನಿಸಬಹುದಾದ ಈ ಕಾದಂಬರಿಯಲ್ಲಿ ಅನೇಕ ವಿರೋಧಾಭಾಸಗಳು ಕಾಣುತ್ತವೆ. ಕಾದಂಬರಿಯ ಪೂರ್ವಾರ್ಧದಲ್ಲಿ ವಿಕೋಪ ಪರಿಸ್ಥಿತಿಯಲ್ಲೂ ತಮ್ಮ ಮನೋಧಾರ್ಢ್ಯವನ್ನು ಕಾಪಾಡಿಕೊಳ್ಳುವ ಪಾತ್ರಗಳು ಉತ್ತರಾರ್ಧದಲ್ಲಿ ಕೈಚೆಲ್ಲಿ ಬದುಕನ್ನು ಬಂದ ರೀತಿಯಲ್ಲಿ ಸ್ವೀಕರಿಸಿಬಿಡುತ್ತಾರೆ. ಅತ್ಯಂತ ಬಲಿಷ್ಠ ಪಾತ್ರಗಳನ್ನು, ಕಾದಂಬರಿ ಮುಂದುವರಿದಂತೆ ಸೀತೆ-ಸಾವಿತ್ರಿಯರ ಜಾಡಿನಲ್ಲಿ ನಡೆಸಿ, ಅವರಿಂದ ಸಾಧ್ಯವಾದ ಎಲ್ಲ ತ್ಯಾಗ-ಬಲಿದಾನವನ್ನೂ ಮಾಡಿಸಿ, ಅವರನ್ನು ಪುರಾಣ ಗ್ರಂಥಗಳ ಆದರ್ಶ ನಾರಿಯರ ಸಾಲಿನಲ್ಲಿ ನಿಲ್ಲಿಸುವ ಉತ್ಸುಕತೆ ಢಾಳಾಗಿ ಹೊಡೆಯುತ್ತದೆ. ಕಷ್ಟದ ಬುತ್ತಿ ಮನುಷ್ಯರಿಗೆ, ಅದರಲ್ಲೂ ಹೆಂಗಸರಿಗೆ, ಕಟ್ಟಿಟ್ಟದ್ದು ನಿಜ. ಆದರೆ ಮನೆ ಬಿಟ್ಟು ಹೋಗುವಂತಹ ಧಾರ್ಷ್ಟ್ಯ ತೋರಿಸಿ ಅನೇಕ ಕಾಲ ಸ್ವತಂತ್ರ ಬಾಳನ್ನು ನಡೆಸುವ ಇದರಲ್ಲಿನ ವಿದ್ಯಾವಂತ ಮಹಿಳೆಯರು ತಮಗೊಲ್ಲದ ಗಂಡಸರೊಂದಿಗೆ ಬಾಳ್ವೆ ಮಾಡುವಂತಹ ನಿಲುವನ್ನು ತಾಳುವುದು ಅವರ ವ್ಯಕ್ತಿತ್ವವನ್ನು ಮಂಕಾಗಿಸುವಂಥದ್ದು. ತನ್ನನ್ನು ದೂರ ಮಾಡಿ ಕೆಲಸದ ನೆಪದಲ್ಲಿ ಡಿಲ್ಲಿಗೆ ಹೋದ ಗಾಂವಕರ, ರಸ್ತೆ ಅಪಘಾತದಲ್ಲಿ ಕಾಲನ್ನು ಕಳೆದುಕೊಂಡು ತನ್ನ ಆಶ್ರಯಕ್ಕೆ ಬಂದೂ ಕಿರುಕುಳ ಕೊಟ್ಟಾಗ ವಿನತೆ ಅವನ ಚಿತ್ರಹಿಂಸೆಯನ್ನೆಲ್ಲ ಸಹಿಸಿದಾಗ ಅವಳ ಬಗ್ಗೆ ಮರುಕ ಮೂಡುವ ಬದಲು ಆಕೆಯ ಸಹನೆ ಅಸಹ್ಯವೆನಿಸುತ್ತದೆ. ಒಮ್ಮೆ ತುಂಬಾ ಸ್ವಾಭಿಮಾನ ತೋರುವ, ಮತ್ತೊಮ್ಮೆ ತೀರಾ ಗೊಡ್ಡು ಹೆಂಗಸಿನಂತೆ ಎಲ್ಲಕ್ಕೂ ಗೋಣಾಡಿಸುವ ವಿನತೆ ಕಾದಂಬರಿಯಲ್ಲಿ ಸರಿಯಾಗಿ ಸ್ಥಾಪಿತಗೊಳ್ಳುವುದೇ ಇಲ್ಲ.

ಈ ಸಂದರ್ಭದಲ್ಲಿ ನಾನು ಹೆಂಗಸರ ಪರಿಸ್ಥಿತಿಗೆ ಸಂಬಂಧಪಟ್ಟಂತೆ ತಲೆದೋರಿರುವ ವಿಪರ್ಯಾಸವೊಂದನ್ನು ಕುರಿತಂತೆ—ಇದು ಕಾರಂತರ ಕಾದಂಬರಿಗಳಿಗೆ ಸಂಬಂಧಿಸದೆ ಇರಬಹುದಾದರೂ—ನನ್ನ ಗಮನಕ್ಕೆ ಬಂದಿರುವ ಅಂಶವೊಂದನ್ನು ಇಲ್ಲಿ ಪ್ರಸ್ತುತ ಪಡಿಸಬಯಸುತ್ತೇನೆ. ನಮ್ಮ ಧರ್ಮಗ್ರಂಥಗಳಲ್ಲಿ ಶ್ರದ್ಧೆ ಇರಬೇಕು ಎಂಬುದೇನೋ ನಿಜ—ಅದು ಹಿಂದೊಮ್ಮೆ ಜನಜೀವನದ ಮಾರ್ಗ ಸೂಚಿಯಾಗಿತ್ತು ಎನ್ನುವ ಕಾರಣಕ್ಕಾಗಿ. ಆದರೆ ಹೆಣ್ಣಿಗೆ ಸಂಬಂಧಪಟ್ಟಂತೆ ವ್ಯಾಖ್ಯಾನಿಸುವಾಗ ನಮ್ಮ ಅನೇಕ ಧುರೀಣರು ಪುರಾಣ ಗ್ರಂಥಗಳಲ್ಲಿ ಆದರ್ಶನಾರಿಯರೆಂದು ಪರಿಗಣಿಸಲಾಗಿರುವ ಹೆಂಗಸರನ್ನೇ ಉದಾಹರಿಸುತ್ತಾರೆ ಎನ್ನುವುದು. ನನಗನ್ನಿಸುತ್ತದೆ, ಈ ಸಂದು ಹೋದ ಯುಗದ ಸ್ತ್ರೀ ಪರಂಪರೆಗೆ ನಮ್ಮ ಇಂದಿನ ಹೆಂಗಸರ ಬದುಕನ್ನು ಜೋಡಿಸುವ ಪ್ರವೃತ್ತಿ ಹಾನಿಕಾರಕ ಎಂದು. ಅವರು ಹಳೆತನ್ನು—ಅದು ಆಗಿನ ಕಾಲಕ್ಕೆ ಎಷ್ಟೇ ಪವಿತ್ರವೆನ್ನಿಸಿರಲಿ, ಆದನ್ನು ಕಿತ್ತೊಗೆದು ಪ್ರಸ್ತುತಕ್ಕೆ ಅನ್ವಯಿಸುವಂಥ ತತ್ತ್ವಗಳನ್ನು ರೂಪಿಸುವವರೆಗೂ ಅವರ ಸ್ಥಿತಿಯಲ್ಲಿ ಸುಧಾರಣೆಯಾಗದು ಎಂದು.

ಈ ಕಾದಂಬರಿಯ ಮೂಲವಸ್ತು ಕಾಮುಪ್ರೇಮ ಎಂದು ಕಾರಂತರೇ ಮುನ್ನುಡಿಯಲ್ಲಿ ಹೇಳಿಕೊಂಡಿರುವುದರಿಂದ ವಿನತೆಯ ಎಲ್ಲ ಕ್ರಿಯೆಗಳನ್ನೂ ನಾವು ಆ ದೃಷ್ಟಿಯಿಂದಲೇ ನೋಡಬೇಕಾಗುತ್ತದೆ. ಪ್ರೇಮಕ್ಕೆ ಒತ್ತು ಕೊಟ್ಟು ಸೂಳೆಗಾರಿಕೆಯಿಂದ ವಿನತೆಯನ್ನು ತಪ್ಪಿಸಲು ತಮ್ಮ ಬರವಣಿಗೆಯ ಚಮತ್ಕಾರವನ್ನೆಲ್ಲ ಉಪಯೋಗಿಸುವ ಕಾರಂತರು ವಿವಾಹವೊಂದನ್ನು ಬಿಟ್ಟು, ಬೇರೆ ಯಾವ ವಿಷಯವನ್ನೂ ಅವಳ ಮುಂದಿಡುವುದೇ ಇಲ್ಲ. ಮುಂಬಯಿಗೆ ಹೋಗಿ ಉದ್ಯೋಗ ಹುಡುಕಬೇಕೆನ್ನುವುದು ಒಂದು ನೆಪ ಅಷ್ಟೆ. ಅವಳಿಗೆ ಅಗತ್ಯವಾದದ್ದು ಮದುವೆ. ಸಂಬಂಧಿಕ ನಿಸ್ಪೃಹತೆಯಿಂದ ಅವಳಿಗಾಗಿ ಗಂಡನ್ನು ಹುಡುಕಿದರೂ ಯಾರೂ ದೊರೆಯುವುದೇ ಇಲ್ಲ ಎನ್ನುವುದು ನೈಜವೆನ್ನಿಸುತ್ತದೆಯೇ? ಚಿಕ್ಕಂದಿನಲ್ಲೆ ತನ್ನ ವಿವೇಚನಾಶಕ್ತಿಯನ್ನು ಬಳಸಿಕೊಳ್ಳಬಲ್ಲಷ್ಟು ಮೇಧಾವಿಯಾಗಿದ್ದ ವಿನತೆ, ಗಾಂವಕರನನ್ನು ಮದುವೆಯಾಗುವ ಮುಂಚೆ ತನ್ನ ತಾರತಮ್ಯ ಜ್ಞಾನವನ್ನು ಏಕೆ ಬಳಸಿಕೊಳ್ಳಬಾರದಿತ್ತು? ಹೆತ್ತ ತಾಯಿಯನ್ನು ದೂರ ಮಾಡಿಕೊಳ್ಳುವಷ್ಟು ನಿಷ್ಠುರಗಳಾದ ಆಕೆ ಗಾಂವಕರನ ಮೇಲೆ ಯಾವ ಗೌರವವೂ ಉಳಿದಿರದಿದ್ದರೂ ಅವನಿಗೇ ಅಂಟಿಕೊಂಡದ್ದಕ್ಕೆ ಕಾರಣ ಇತರರ ದೃಷ್ಟಿಯಲ್ಲಿ ತನಗೆ ಪತಿವ್ರತೆ ಪಟ್ಟ ದೊರಕಬೇಕು ಎಂಬ ಹಂಬಲವೇ? ಇಂಥ ಪ್ರಶ್ನೆಗಳೆಲ್ಲ ಕಾದಂಬರಿ ಓದಿದಾಗ ನನ್ನಲ್ಲಿ ಹಾದು ಹೋಗಿವೆ. ಒಟ್ಟಿನಲ್ಲಿ ಅವಳನ್ನು ಬದುಕಿನ ಅಗ್ನಿಪರೀಕ್ಷೆಗೆ ಒಡ್ಡುವ ಸಲುವಾಗಿ ಕಾರಂತರು ಅವಳಿಗೆ ಒಂದಾದರೂ ಅನುಕೂಲಕರ ಸನ್ನಿವೇಶ ಸೃಷ್ಟಿಯಾಗದಂತೆ ಜಾಗ್ರತೆ ವಹಿಸಿದಂತಿದೆ.

ಮಂಜುಳೆಯ ಬದುಕೂ ಆಕಸ್ಮಿಕಗಳಿಗೆ ಸಿಕ್ಕರೂ ಆಕೆಯ ಪಾತ್ರ ವಿನತೆಯದಕ್ಕಿಂತಲೂ ಸಹಜವಾಗಿದೆ. ಆಕೆ ಜೀವನವನ್ನು ನಿರುಕಿಸುವ ರೀತಿ ಸಮಂಜಸವಾಗಿದೆ.

ಮನೋಹರನ ಭಗ್ನಪ್ರಣಯಿ ಮಂಜುಳೆ ಅಂಜಲಿಯ ಪ್ರಭಾವಕ್ಕೆ ಸಿಕ್ಕಿ ಗಾಂವಕರ ನೊಂದಿಗೆ ಡಿಲ್ಲಿಗೆ ಹೋದರೂ ತನ್ನ ನಿರ್ಧಾರಗಳ ಬಗ್ಗೆ ಅವಳಲ್ಲಿ ಆಲೋಚನೆಗಳು ಸುಳಿಯುವ ರೀತಿ ಹೆಣ್ಣಿನ ನಿಜಗುಣಕ್ಕೆ ಹತ್ತಿರವಾಗುತ್ತವೆ. ಮನೋಹರ ದೊರೆ ಸಾಮಿಯ ಪ್ರಸಂಗಗಳ ನಂತರ ಮುಂಬಯಿಯಲ್ಲಿ ತಬ್ಬಲಿತನ ಕಾಡಿದಾಗ ಅಣ್ಣನ ಮನೆಗೆ ಹೋಗಲು ಅವಳ ಮನಸ್ಸು ತೂಯ್ದಾಡುವುದೂ ಚೆನ್ನಾಗಿ ಮೂಡಿದೆ. ಅಣ್ಣನ ಪುಟ್ಟ ಮೊಮ್ಮಗುವಿನ ಜತೆ ಅವಳು ಬೆಳೆಸಿಕೊಳ್ಳುವ ಪ್ರೀತಿ, ಆ ಪ್ರೀತಿ ಅವಳ ಅಂತ ರಾಳದಲ್ಲಿ ಬಡಿದೆಬ್ಬಿಸುವ ತಾಯ್ತನದ ಹಂಬಲ ಮನಸ್ಸನ್ನು ಮಿಟುತ್ತವೆ.

ಈ ಕಾದಂಬರಿಯಲ್ಲಿ ವಿದ್ಯಾವಂತ ಮಹಿಳೆಯರ ಬಗೆ ಕರುಣಾಪೂರಿತ ದೃಷ್ಟಿ ಯನ್ನು ಬೆಳೆಸಿಕೊಂಡಿರುವ ಕಾರಂತರು ಹೆಣ್ಣುಗಳನ್ನು ನೋಯಿಸಿದ ಪಾಪಕೃತ್ಯಕ್ಕೆ ಗಂಡಸರಿಗೆ ಪ್ರಾಯಶ್ಚಿತ್ತ ಖಂಡಿತ ಎಂಬ ತತ್ತ್ವವನ್ನು ಪ್ರತಿಪಾದಿಸುತ್ತಾರೆ. ಇಂಥ ಪಾಪಭೀರುಗಳು ದಿನದಿನಕ್ಕೆ ಹೆಚ್ಚುತ್ತಾ ಯಶಸ್ವೀ ಜೀವನವನ್ನು ನಡೆಸುತ್ತಿರುವುದನ್ನು ಕಂಡಾಗ ಕಾರಂತರು ಪಾಪಿಷ್ಠ ಗಂಡಸರಿಗೆ ನೀಡುವ ಶಿಕ್ಷೆ ಸಂಭವನೀಯವೇ ಎಂಬ ಅನುಮಾನವಿದೆ. ಇರಲಿ, ಅಂತೂ ಯಾವುದೇ ಸನ್ನಿವೇಶದಲ್ಲೂ ಕಾರಂತರು ಹೆಣ್ಣಿನ ಸಹನೆ, ಸಂಯಮವನ್ನೆ ಎತ್ತಿ ಹಿಡಿಯುತ್ತಾರೆ. ಮಂಜುಳೆಯನ್ನು ವಂಚಿಸಿದ ಮನೋಹರ ಅವಳಿದ್ದ ಮುಂಬಯಿಯಲ್ಲೆ ನೆಲೆಸಿ ಕ್ಷಯರೋಗಕ್ಕೆ ತುತ್ತಾದಾಗ ಅವಳ ಆಶ್ರಯಕ್ಕೆ ಬರುವ ಅವನ ಮಗುವನ್ನು ಆಕೆ ಸಾಕುವುದು ಇದಕ್ಕೆ ಉದಾಹರಣೆ. ನೋವಿನಿಂದ ಜೀವನವನ್ನು ಪ್ರಾರಂಭಿಸುವ ಮಂಜುಳೆ, ವಿನತೆಯರಿಗೆ ಜೀವನದುದ್ದಕ್ಕೂ ನೋವ ನ್ನುಣಿಸಿ ಕೊನೆಗೂ ಅವರ ಕೈಯನ್ನು ಬರಿದಾಗಿಸುತ್ತಾರೆ. ಮನೋಹರನ ಮಗು ಮಂಜುಳೆಯ ಆರೈಕೆ ಇದ್ದಾಗ್ಯೂ ಸಾವನ್ನಪ್ಪುವುದು ಇದಕ್ಕೆ ಒಂದು ದೃಷ್ಟಾಂತ.

ಅಂಜಲಿಯ ಪಾತ್ರ ಚಿಕ್ಕದಾದರೂ ಸಹಜವಾಗಿದೆ. ಮಂಜುಳೆ-ವಿನತೆಯರ ಬದುಕಿನಲ್ಲಿ ಅನಾಮತ್ತಾಗಿ ಭುಗಿಲೇಳಿಸುವ ಅನೇಕ ಆಕಸ್ಮಿಕ ಘಟನೆಗಳನ್ನು ಈಕೆಯ ಬಾಳಿನಲ್ಲಿ ತರದೆ ನಮ್ಮ ಸುತ್ತಮುತ್ತಲಿನ ಅನೇಕ ಹುಡುಗಿಯರಂತೆ ಈಕೆಯೂ ಬದುಕನ್ನು ಹಗುರವಾಗಿ ತೆಗೆದುಕೊಳ್ಳುತ್ತಾಳೆ ಎಂದು ತೋರಿಸುವುದ ರಿಂದ ಅವಳ ಪಾತ್ರ ವಿವಾದಕ್ಕೆ ಒಳಗಾಗುವುದಿಲ್ಲ. ಗಂಡಸರ ಬೆನ್ನು ಹತ್ತಿ ಮಜಾ ಮಾಡಿಯೂ ಕೊನೆಗೆ ಯಾವನೋ ಒಬ್ಬ ತನ್ನ ನೈತಿಕ ಮೌಲ್ಯವನ್ನು ಪ್ರಶ್ನಿಸದಂಥವನು ಸಿಕ್ಕಾಗ ಅವನಿಗೆ ಜೋತುಬೀಳುವ ಅಂಜಲಿಯರಂಥ ಸಮಯಸಾಧಕ ಹುಡುಗಿಯ ರನ್ನು ನಾನು ಭೇಟಿಯಾಗುತ್ತಲೇ ಇರುವುದರಿಂದ ಅಂಜಲಿಯಲ್ಲಿ ಯಾವ ವಿಶೇಷತೆ ಯನ್ನೂ ನಾನು ಕಂಡಿಲ್ಲ.

ಅಂಜಲಿ ಪಾತ್ರವನ್ನು ಓದಿಕೊಳ್ಳುತ್ತಿರುವಾಗ ನನಗೆ "ಅಳಿದ ಮೇಲೆ" ಕಾದಂಬರಿಯ "ಮೇರಿ" ಅಥವಾ "ರೀಮಾ"ಳ ನೆನಪಾಗುತ್ತದೆ. ಯಶವಂತರಾಯ ರಂತಹ ಉದಾತ್ತ ವ್ಯಕ್ತಿಗಳನ್ನು ಮೋಸಗೊಳಿಸುವ ಇಂಥ ಅನೇಕ ಹೆಂಗಸರ ಜತೆಗೆ

ನಾನು ಬದುಕಬೇಕಾಗಿರುವಾಗ ಮೇರಿಯಂಥವರು ಇಲ್ಲವೇ ಇಲ್ಲ ಎಂದು ಸಾಧಿಸುವ ಧೈರ್ಯವಾದರೂ ನನಗೆಲ್ಲಿಂದ ಬರಬೇಕು? ಯಶವಂತರಾಯ ತಮ್ಮ ಜೀವನದಲ್ಲಿ ಸುಳಿದು ಹೋದ ಮೇರಿಯ ಸ್ವಭಾವವನ್ನು ಸಾಂಕೇತಿಕವಾಗಿ ಚಿತ್ರದ ಮೂಲಕ ಸೃಷ್ಟಿಸಿ ತಮ್ಮ ದುಗುಡವನ್ನು ಹೊರಹಾಕಿಕೊಂಡಿರಬಹುದಾದರೂ ಇಂಥ ಹೆಂಗಸರಿಂದ ನೊಂದುಕೊಂಡಿರಬಹುದಾದ ಅನೇಕ ಅಂತರ್ಮುಖಿ ಗಂಡಸರು ಅವರ ತೀವ್ರತೆಯನ್ನು ಹೇಗೆ ಸಹಿಸುತ್ತಿರಬಹುದು ಎಂಬುದಾಗಿ ನಾನು ಯೋಚಿಸುತ್ತಿದ್ದೇನೆ.

ಈ ಗುಂಪಿನ ಹುಡುಗಿಯರ ವಯೋಮಿತಿಗೆ ಒಳಪಡುವ 'ಚಿಗುರಿದ ಆಸೆ' ಕಾದಂಬರಿಯ ವರಲಕ್ಷ್ಮಿಯ ಪಾತ್ರವನ್ನು ಮತ್ಯಾರಾದರೂ ಕಾದಂಬರಿಕಾರರು ಸೃಷ್ಟಿಸಿದ್ದರೆ ಇದು ಸಿನೆಮಾಗಾಗಿಯೇ ಎಳೆದು ತಂದ ಪಾತ್ರ ಎಂದು ಕೀಟಲೆ ಮಾಡುವ ಆಸೆ ನನ್ನಲ್ಲಿ ಉಂಟಾಗುತ್ತಿತ್ತೇನೋ. ಆದರೆ ಈ ಕಾದಂಬರಿ ಬರೆದಿರುವವರು ಕಾರಂತರು. ಇಂಥ ಸಣ್ಣಪುಟ್ಟ ಆಸೆಯನ್ನು ಮೆಟ್ಟಿ ನಿಂತವರು.

ವರಲಕ್ಷ್ಮಿ ಈ ಕಾದಂಬರಿಯಲ್ಲಿನ ಮೊದಲ ಮತ್ತು ಎರಡನೆ ಭಾಗದಲ್ಲಿ ಒಂದಕ್ಕೊಂದು ತದ್ವಿರುದ್ಧವಾದ ಗುಣಗಳನ್ನು ಹೊಂದಿದ ಹೆಂಗಸಾಗಿ ಕಾಣಿಸಿಕೊಳ್ಳುತ್ತಾಳೆ. ಮನುಷ್ಯ ಸ್ವಭಾವ ಯಾವುದೋ ಒಂದು ಘಟನೆಯಿಂದ ಗುರ್ತು ಸಿಗದಷ್ಟು ಬದಲಾವಣೆಯಾಗುವ ಸಾಧ್ಯತೆ ಇಲ್ಲದೆ ಇಲ್ಲ. ಆದರೆ ಕಾರಂತರು ಇಲ್ಲಿ ಬೇಕೆಂದೇ ಕೆಲವು ದುರಂತಗಳನ್ನು ಎಳೆದುತಂದು ನಾಯಕ-ನಾಯಿಕೆಯರನ್ನು ಸಾಮಾನ್ಯ ಕಾದಂಬರಿಕಾರರಂತೆ ಜತೆಗೂಡಿಸುವುದು ಅವರ ಬರವಣಿಗೆಗೆ ಅಷ್ಟೇನೂ ಶೋಭೆ ತಂದುಕೊಡಲಾರದು.

ದಿಲ್ಲಿಯಲ್ಲಿನ ಅಧಿಕಾರಿಯೊಬ್ಬರ ಮಗ ಶಂಕರನನ್ನು ಪ್ರೀತಿಸಿದ ವರಲಕ್ಷ್ಮಿ, ಎಂಜಿನಿಯರಾದ ಆತ ವ್ಯವಸಾಯವನ್ನು ವೃತ್ತಿಯಾಗಿ ಹಿಡಿದು ಹಳ್ಳಿಯೊಂದರಲ್ಲಿ ನೆಲೆಸಿದಾಗ, ಅನಾಗರಿಕ ವಾತಾವರಣದಲ್ಲಿ ಬಾಳನ್ನು ನಡೆಸಲು ನಿರಾಕರಿಸಿ ಅವನನ್ನು ಬಿಟ್ಟುಕೊಡುತ್ತಾಳೆ. ಈ ಮಧ್ಯೆ ಈ ಎರಡು ಕುಟುಂಬಗಳಲ್ಲಿ ಹಲವಾರು ಬದಲಾವಣೆಗಳು. ವರಲಕ್ಷ್ಮಿಯ ಮನಸ್ಸು ಪರಿವರ್ತನೆಯಾಗಿ ಅವಳನ್ನು ಶಂಕರನ ಬಳಿ ಮತ್ತೊಮ್ಮೆ ಕರೆತರುವುದಕ್ಕಾಗಿ ಕಾದಂಬರಿಕಾರರು ಅನೇಕ ಕೃತಕ ಸನ್ನಿವೇಶಗಳನ್ನು ಸೃಷ್ಟಿಸುತ್ತಾರೆ. ವರಲಕ್ಷ್ಮಿ ಶಂಕರನಿದ್ದ ಹಳ್ಳಿಯ ಶಾನುಭೋಗರ ಮಗ ಮಂಜುನಾಥನನ್ನು ಮದುವೆಯಾಗಲು ನಿರ್ಧರಿಸಿದ ಸಂದರ್ಭದಲ್ಲೆ ಶಂಕರ ಶಾನುಭೋಗರ ಮಗಳನ್ನು ಮದುವೆಯಾಗಲು ಒಪ್ಪಿರುತ್ತಾನೆ. ಹಳ್ಳಿಯಲ್ಲಿ ಇವರೆಲ್ಲರ ಸಮಾಗಮ. ಎಲ್ಲ ಪಾತ್ರಗಳಲ್ಲೂ ಪೂರ್ವದ ಘಟನೆಗಳನ್ನು ನೆನೆದು ಕೋಪ, ಕಿರಿಕಿರಿ, ಪಶ್ಚಾತ್ತಾಪ. ವರಲಕ್ಷ್ಮಿ ತನ್ನ

ಹಳೆಯ ಪ್ರೇಮಿಗೆ ಮನಸೋತು ಮಂಜುನಾಥನ ವರ್ತನೆಯಿಂದ ಬೇಸರಗೊಂಡಿದ್ದಾಗಲೆ ಶಂಕರನಿಗೆ ಗೊತ್ತಾಗಿದ್ದ ಶಾನುಭೋಗರ ಮಗಳು ಜ್ವರದಿಂದ ಸಾಯುತ್ತಾಳೆ. ವರಲಕ್ಷ್ಮಿ ಶಂಕರ ಒಂದಾಗುತ್ತಾರೆ.

ಮೀನಾಕ್ಷಿ-ನಾಗೇಂದ್ರ ಇವರ ಪ್ರೇಮಕಥೆಯಾದ "ಗೆದ್ದ ದೊಡ್ಡಸ್ತಿಕೆ"ಯಲ್ಲಿ ತಾನು ಬಯಸಿದ ನಾಗೇಂದ್ರನನ್ನೆ ಮೀನಾಕ್ಷಿ ಮದುವೆಯಾಗಬೇಕೆಂಬ ಹಠವನ್ನು ತಂದೆ ತಾಯಿಯನ್ನು ಎದುರು ಹಾಕಿಕೊಂಡು ಸಾಧಿಸಿಕೊಂಡವಳು. ಕೇವಲ ಒಂದು ಸಿನೆಮಾ ಕತೆಯಂತಿರುವ ಇದರಲ್ಲಿನ ಮೀನಾಕ್ಷಿಯನ್ನು ಕುರಿತು ನನಗೆ ಆಳವಾಗಿ ಯೋಚಿಸಬೇಕು ಎಂದು ಅನ್ನಿಸಿಲ್ಲ.

ಸುನಾಲಿನಿ ಕಾರಂತರ ಪರಿಪಕ್ವಗೊಂಡ ವಯಸ್ಸಿನಲ್ಲಿ ಸೃಷ್ಟಿಗೊಂಡಿರುವ ನಗರದ ವಿದ್ಯಾವಂತ ಮಹಿಳೆ. ಅವರ ಇತ್ತೀಚಿನ ಕಾದಂಬರಿ "ಕಣ್ಣಿದ್ದೂ ಕುರುಡರು" ನಲ್ಲಿ ಕಾಣಿಸಿಕೊಳ್ಳುವ ಈ ಪಾತ್ರ ಕಾರಂತರು ತಮ್ಮ ಇದುವರೆಗಿನ ಜೀವನದುದ್ದಕ್ಕೂ ಗಳಿಸಿಕೊಂಡಿರುವ ಅನುಭವ, ಜೀವನಶ್ರದ್ಧೆ, ವೈಚಾರಿಕತೆ ಇವುಗಳ ಗಟ್ಟಿನೆಲೆಯಲ್ಲಿ ನಿಲ್ಲುತ್ತದೆ. ಸುನಾಲಿನಿ-ಕಾಸರಕನ ಸಂಬಂಧವನ್ನು ಕಾರಂತರು ಈ ಕಾದಂಬರಿಯಲ್ಲಿ ಬಳಸಿಕೊಳ್ಳುವುದು ಬಹುಶಃ ತಮ್ಮ ಸುದೀರ್ಘ ಅಧ್ಯಯನದಿಂದಾಗಿ ಗಳಿಸಿಕೊಂಡಿರುವ ಜ್ಞಾನಸಂಪತ್ತನ್ನು ಹೊರಹಾಕಲು. ನಮ್ಮ ಧಾರ್ಮಿಕ ನಿಲುವುಗಳನ್ನು, ಅವುಗಳ ಔಚಿತ್ಯ–ಅನೌಚಿತ್ಯಗಳನ್ನು, ಅವು ಜೀವನದಲ್ಲಿ ಹಾಸು ಹೊಕ್ಕಾಗುವ ರೀತಿಯನ್ನು, ಅತ್ಯಂತ ಸುಂದರವಾಗಿ ನಿರೂಪಿಸಿರುವ ಕಾರಂತರು ಈ ಕೃತಿಯಲ್ಲಿ ಸುನಾಲಿನಿಯನ್ನು ಕಾಸರಕನೊಂದಿಗೆ ತೊಡಗಿಸಿ ಬದುಕಿನ ಆಳಗಳನ್ನು ಪರಿಚಯಿಸಿಕೊಡುತ್ತಾರೆ.

ಕಾದಂಬರಿಯ ಶುರುವಿನಿಂದಲೂ ಸುನಾಲಿನಿಯ ಮನೋವ್ಯಾಪಾರಗಳು ಎಲ್ಲೂ ಅತಿರೇಕಕ್ಕೆ ಹೋಗದಂತೆ ಕಾರಂತರು ಸಂಯಮದಿಂದ ಆಕೆಯ ವ್ಯಕ್ತಿತ್ವವನ್ನು ನಡೆಸಿಕೊಂಡು ಹೋಗುತ್ತಾರೆ ಎನ್ನುವುದು ತುಂಬಾ ಮೆಚ್ಚಿಕೊಳ್ಳಬೇಕಾದ ಅಂಶ. ಕಾದಂಬರಿಯ ಕೊನೆಗೆ ಸುನಾಲಿನಿ-ಕಾಸರಕನ ಬದುಕು ಹೇಗೆ ಸಾಗುತ್ತದೆ ಎನ್ನುವ ಬಗೆಗೆ ಯಾವೊಂದು ಸೂಚನೆಯನ್ನೂ ನೀಡದೆ ಅದನ್ನು ಓದುಗರ ನಿರೀಕ್ಷೆಗೆ ಬಿಡಲಾಗಿದ್ದರೂ ಗಂಗಾಧರ ಅಮ್ಲಾಡಿ ಸತ್ತನಂತರ ಸುನಾಲಿನಿ ಕಾಸರಕನೊಂದಿಗೆ ಜೀವಿಸಲು ಕೈಗೊಳ್ಳುವ ನಿರ್ಧಾರದ ಮೂಲಕ ಕಾರಂತರು ನಗರದ ಮಹಿಳೆಯರ ಗಟ್ಟಿತನವನ್ನು ತೋರಿಸುತ್ತಾರೆ. ವಿವಾಹದ ಹೊರಗಣ ಗಂಡು-ಹೆಣ್ಣಿನ ಸಂಬಂಧವನ್ನು ನಾನು ನನ್ನ ಹಿಂದಿನ ಎಲ್ಲ ಬರವಣಿಗೆಯಲ್ಲೂ ಸಮರ್ಥಿಸುತ್ತಲೇ ಬಂದಿರುವಂತೆ ಇಲ್ಲಿಯೂ ಸುನಾಲಿನಿ-ಕಾಸರಕನ ಸಂಬಂಧವನ್ನು ಒಪ್ಪಿಕೊಳ್ಳುತ್ತೇನೆ. ಮದುವೆ ಆದಾಕ್ಷಣಕ್ಕೆ ಹೆಂಗಸೊಬ್ಬಳು ತನ್ನ ಗಂಡನನ್ನು ಬಿಟ್ಟು ಬೇರೆ ಯಾವ ಗಂಡಸನ್ನೂ ತನ್ನ ಮನಸ್ಸಿನಲ್ಲಿ ಪ್ರತಿಷ್ಠಾಪಿಸಿಕೊಳ್ಳಲೂ ಕೂಡದು ಎನ್ನುವುದು ನನ್ನ ಮತವಲ್ಲ. ದೈಹಿಕ ಸಂಬಂಧ

ವನ್ನು, ಪರಸ್ಪರರ ಬಗ್ಗೆ ಮೆಚ್ಚುಗೆಯನ್ನು, ಪ್ರಶಂಸೆಯನ್ನು ಪ್ರದರ್ಶಿಸಲು ಬಳಸಿ ಕೊಂಡರೂ ಕೇವಲ ಲೈಂಗಿಕ ತೃಪ್ತಿಯೇ ಅಲ್ಲದೆ ಯಾವುದೋ ಒಂದು ಉನ್ನತ ಮಟ್ಟದಲ್ಲಿ, ಏಕ ರೀತಿಯ ಭಾವನೆಗಳನ್ನು ತುಂಬಿಕೊಂಡು, ಪರಸ್ಪರ ಸ್ಪಂದಿಸಬಲ್ಲ ವಿಚಾರಗಳುಳ್ಳ ಗಂಡು–ಹೆಣ್ಣುಗಳು, ಅವರು ಬೇರೆ ಯಾರನ್ನೇ ಮದುವೆಯಾಗಿದ್ದರೂ ಒಂದಾಗುವುದು ನಾನು ಬೆಂಬಲಿಸುವ ಒಂದು ಪ್ರಕರಣ. ಜವಾಬ್ದಾರಿಯುತರಾದ, ಒಬ್ಬರ ಜೀವನದ ಬಗ್ಗೆ ಮತ್ತೊಬ್ಬರಿಗೆ ಆತಂಕವಿರುವ ಗಂಡು-ಹೆಣ್ಣುಗಳು ಮದುವೆಯ ಹೊರಗಣ ಸಂಬಂಧವನ್ನು ಊರ್ಜಿತಗೊಳಿಸಿಕೊಂಡರೆ ಸಮಾಜದ ನೈತಿಕ ನೆಲೆಗಟ್ಟು ಸಡಿಲವಾಗುತ್ತದೆ, ಅಲ್ಲಿ ಗೊಂದಲಗಳು ಏಳುತ್ತವೆ ಎನ್ನುವುದನ್ನು ನಾನಂತೂ ಒಪ್ಪುವುದಿಲ್ಲ. ಕಾಸರಕನನ್ನು ಮದುವೆಯಾದ ಮೇಲೂ ಸುನಾಲಿನಿಯ ಮನಸ್ಸಿನ ಅಶಾಂತಿ ಮಾಯವಾಗದಿದ್ದಾಗ ಆಕೆಯ ಬಗ್ಗೆ ನಿಜವಾಗಿಯೂ ನನಗೆ ಕನಿಕರ ಮೂಡಿದೆ. ಆಕೆಯ ಕಾರ್ಯಕ್ಷೇತ್ರ, ಆಕೆಯ ಪಾಲಿಗೆ ತನ್ನ ಆಕರ್ಷಣೆ ಹೇಗೆ ಕಳೆದು ಕೊಂಡಿತು, ಏಕಾಕಿತನ ಆಕೆಯನ್ನು ಎಷ್ಟು ತೀವ್ರವಾಗಿ ನೋಯಿಸಿತು ಎನ್ನುವುದನ್ನು ಆಕೆಯ ಅಲೆದಾಟದಲ್ಲಿ ಕಾರಂತರು ಸಮರ್ಥವಾಗಿ ತೋರಿಸಿಕೊಡುತ್ತಾರೆ.

ಓದಿಕೊಂಡ ಹೆಂಗಸಿನ ಮದುವೆಯ ವಿಚಾರ ಬಂದಾಗ ನಾನಿಲ್ಲಿ "ಇಳೆಯೆಂಬ..." ಕಾದಂಬರಿಯ ಜ್ವಾಲಾ ಕುಲಕರ್ಣಿ ಮತ್ತು ಅರುಂಧತಿಯರನ್ನು ಉಲ್ಲೇಖಿಸಬಹು ದಾಗಿದೆ. 'ಇಳೆಯೆಂಬ...' ನನ್ನ ಮನಸ್ಸಿನ ಮೇಲೆ ಅಚ್ಚೊತ್ತಿರುವ ಕೃತಿ. ಇಲ್ಲಿ ಕಾರಂತರು ನಗರದ ವಿದ್ಯಾವಂತ ಹೆಣ್ಣು-ಗಂಡುಗಳ ಸಂಬಂಧವನ್ನು ಕುರಿತಂತೆ ಯಾವ ನಿಲುವನ್ನು ನಿರೀಕ್ಷಿಸುತ್ತಾರೆ ಎನ್ನುವುದು ಪೂರ್ತಿಯಾಗಿ ತಿಳಿಯುತ್ತದೆ. ಈ ಕಾದಂಬರಿ ಯಲ್ಲಿ ಅರುಂಧತಿ ಒಂದೆಡೆ ಅನ್ನುತ್ತಾಳೆ "......ದಾಂಪತ್ಯದಲ್ಲಿ ಹೆಣ್ಣಾಗಲಿ, ಗಂಡಾಗಲಿ ಕೂಡಿ ಸುಖ ಜೀವನವನ್ನು ನಡೆಯಿಸಲು ಸಲ್ಲಿಸುವ ಯಾವ ಕಾಣಿಕೆಯಿದ್ದರೂ, ಅದು ತಾವಾಗಿಯೇ ತೆರುವ ಪ್ರೀತಿಯೋ, ಅನುನಯವೋ, ಉಡುಗೊರೆಯೋ ಆಗ ಬೇಡವೇ? ಅದು ಬೇಕಾದದ್ದು ಯಾತಕ್ಕಾಗಿ? ಊರಿನ ಹತ್ತು ಮಂದಿಯ ಮುಂದೆ ತೋರಿಸಿಕೊಳ್ಳುವುದಕ್ಕಾಗಿಯೋ, ಅಥವಾ ಆತ್ಮವಿಶ್ವಾಸದಿಂದ ಒಬ್ಬರು ಇನ್ನೊಬ್ಬರ ಸೌಖ್ಯವನ್ನು ಬೆಳೆಸಿ ಉಭಯತರೂ ಸಂತೋಷಪಡುವುದಕ್ಕಾಗಿಯೋ? ದಾಂಪತ್ಯ ದಲ್ಲಿ ಸಿಗುವ ಸಂತೋಷ ಒಬ್ಬರ ಕಡೆಯಿಂದಲೇ ಸಲ್ಲುವಂಥ ವಸ್ತುವಾದರೆ ಅದು ದಾಂಪತ್ಯ ಅನಿಸಲಾರದು ; ಶಾಸ್ತ್ರಭಯಕ್ಕೂ ಸಂಪ್ರದಾಯದ ಭಯಕ್ಕೂ ತಗ್ಗಿ, ಸಣ್ಣದಾಗಿ, ಪತಿಯ ದಾಸಾನುದಾಸಳಾಗಿ ಬದುಕಬಲ್ಲ ಗೃಹಿಣಿಯನ್ನು ಯಾರೂ ದೂರ ಲಾರರು. ಅವಳನ್ನು ಶಾಸ್ತ್ರ ಕೊಂಡಾಡಬಹುದು. ಆದರೆ ಗಂಡನೊಡನೆ ಆ ಹೆಂಗಸು ನಡೆಸುವ ಬಾಳ್ವೆ ಮಾತ್ರ ಉಭಯತರ ಗೌರವವನ್ನು ಹೆಚ್ಚಿಸುವಂಥದ್ದಲ್ಲ."

ಇಲ್ಲಿನ ಜ್ವಾಲಾ ಮತ್ತು ಅರುಂಧತಿ ಬ್ಯಾಂಕ್ ಉದ್ಯೋಗಿಗಳು. ಗಂಡಸಿನಿಂದ ಒಂದಲ್ಲ ಒಂದು ಬಗೆಯಲ್ಲಿ ನಿರಾಸೆಗೊಂಡವರು. ಮೇಲಿನ ಮಾತುಗಳು ತೋರಿಸು

ವಂತೆ ಗಂಡಸಿನೊಂದಿಗಿನ ಸಂಬಂಧದಲ್ಲಿ ಒಂದು ಉದಾತ್ತವಾದ ಅಂಶವನ್ನು ಹುಡುಕು ತ್ತಿರುವ ಈ ಹೆಂಗಸರು, ಅದು ಅಲ್ಲಿ ದೊರಕದಿದ್ದಾಗ ತಲೆ ಮೇಲೆ ಕೈಹೊತ್ತು ಕೂಡದೆ ಇಂಥ ಸಂಬಂಧಗಳು ಸೋಲುವುದಕ್ಕೆ ಕಾರಣಗಳನ್ನು ಹುಡುಕುತ್ತ ಹೋಗುತ್ತಾರೆ. ಗಂಡು ಹೆಣ್ಣಿಗೆ ಸಂಬಂಧಪಟ್ಟ ಮಾನವೀ ಭಾವನೆಗಳ ವಿಚಾರದಲ್ಲಿ ಗ್ರಾಮೀಣ ಹೆಂಗಸು ಅಥವಾ ನಗರದ ಮಹಿಳೆ ಇವರ ಮಧ್ಯೆ ಯಾವ ವ್ಯತ್ಯಾಸವೂ ಇಲ್ಲದಿದ್ದರೂ ವಿದ್ಯಾವಂತ ಮಹಿಳೆ ತನ್ನ ಬದುಕನ್ನು ರೂಪಿಸಿಕೊಳ್ಳುವ ರೀತಿ, ಆಕೆ ತನ್ನ ಪರಿಸರದ ಮೂಲಕ ಪಡೆವ ಜ್ಞಾನವನ್ನು ಆಧರಿಸಿರುತ್ತವೆ. ಈ ಪಾತ್ರದ ವಿಶ್ಲೇಷಣೆಯ ಸಂದರ್ಭ ದಲ್ಲಿ ನಾವು ಸಾಮಾಜಿಕ-ಆರ್ಥಿಕ ಪರಿಸ್ಥಿತಿ ಎಷ್ಟರಮಟ್ಟಿಗೆ ಜನಜೀವನವನ್ನು, ಭಾವನೆಗಳನ್ನು ನಿಯಂತ್ರಿಸುತ್ತದೆ ಎನ್ನುವುದನ್ನು ಗಮನಿಸಬಹುದಾಗಿದೆ. ಜ್ವಾಲಾ ಅಥವಾ ಅರುಂಧತಿಯಂತಹ ಮಹಿಳೆಯರಿಗೆ ಉದ್ಯೋಗ ದೊರಕಿಸಿಕೊಡುವಂಥ ಸಾಮಾಜಿಕ ಪರಿಸ್ಥಿತಿ ಇರದಿದ್ದಲ್ಲಿ ಆರ್ಥಿಕವಾಗಿ ಸ್ವತಂತ್ರವಾಗಿರಲು ಸಾಧ್ಯವಾಗುತ್ತಿರಲಿಲ್ಲ. ಮಾತ್ರವಲ್ಲ, ತಮಗೊಲ್ಲದ ಪರಿಸರದಿಂದ ಹೊರಬರುವ ಧೈರ್ಯವನ್ನೂ ಬಹುಶಃ ತೋರುತ್ತಿರಲಿಲ್ಲ. ಈ ಪಾತ್ರಗಳನ್ನೆ ಉದಾಹರಣೆಯಾಗಿಟ್ಟುಕೊಂಡು ನಾವು ತಿಳಿಯ ಬೇಕಾದ ಅಂಶವೆಂದರೆ ಮಹಿಳೆಯ ಜೀವನ ವಿಕಾಸಗೊಳ್ಳಬೇಕು, ಆಕೆ ಪರತಂತ್ರ ಜೀವಿಯಾಗಬಾರದು ಎಂದಾಗ ಸಾಮಾಜಿಕ ಆರ್ಥಿಕ ಸ್ಥಿತಿಗತಿಗಳನ್ನು ಆಕೆಗೆ ಅನು ಕೂಲಕರ ರೀತಿಯಲ್ಲಿ ರೂಪಿಸಬೇಕಾದ ಅಗತ್ಯತೆಯೂ ಇದೆ ಎನ್ನುವುದು.

ನಾನು ಆಯ್ದುಕೊಂಡಿರುವ ಮತ್ತೊಂದು ಪಾತ್ರ "ಒಂಟಿದನಿ" ಕಾದಂಬರಿಯ ನಯನತಾರೆ. ಮುಂಬಯಿ ಕಾರಂತರಿಗೆ ಅತ್ಯಂತ ಪ್ರಿಯವಾದ ಸ್ಥಳವೇನೋ. ಆದ್ದರಿಂದಲೇ ಅವರು ತಮ್ಮ ಕಾದಂಬರಿಗಳ ಪಾತ್ರಗಳನ್ನು ಅವುಗಳ ಹುಟ್ಟೂರು ಯಾವುದೇ ಆಗಿರಲಿ ಒಮ್ಮೆಲೇ ಮುಂಬಯಿ ನಗರಕ್ಕೆ ಜಿಗಿಸಿ ಬಿಡುತ್ತಾರೆ. ದಟ್ಟೈಸುವ ಜನಸಂದಣಿಯ ಯಾಂತ್ರಿಕ ಜೀವನದ ಈ ನಗರ ಸಂಸಾರದ ಅನೇಕ ಏರುಪೇರು ಗಳಿಗೆ ಸಿಲುಕಿದ, ಸ್ವಂತಿಕೆ, ಸ್ವಾತಂತ್ರ್ಯ, ಸ್ವೇಚ್ಛಾಚಾರಗಳನ್ನು ಬಯಸುವ ಮಹಿಳೆ ಯರನ್ನೂ ಆಕರ್ಷಿಸುತ್ತದೆ ಎನ್ನುವುದು ಕಾರಂತರ ಅಭಿಪ್ರಾಯವಾಗಿರಬಹುದು. ಜೀವನದ ದಾರುಣತೆಯನ್ನು ಮರೆಯಬೇಕೆಂಬ, ಮಾನವ ಸಮುದ್ರದಲ್ಲಿ ಕರಗಿ ಹೋಗಲಿಚ್ಛಿಸುವ ಪಾತ್ರಗಳಿಗೆ ಅದು ತೌರಾಗಬಲ್ಲದು; ನಾಗರಿಕ ಜೀವನವನ್ನು ಬಯಸುವವರಿಗೆ, ಜೀವನದ ನಾನಾ ಮಾರ್ಗಗಳನ್ನು ಕಂಡುಕೊಳ್ಳಲು ಹೊರಟವರಿಗೆ ಮುಂಬಯಿ ಬಿಟ್ಟರೆ ಬೇರೆ ಸ್ಥಳವಿಲ್ಲ ಎಂದು ಅವರಿಗೆ ಅನ್ನಿಸಿರಬಹುದು. ಪಾತ್ರ ಗಳನ್ನು ಈ ವಿಸ್ತಾರ ಭೂಮಿಕೆಗೆ ಒಳಪಡಿಸಿದರೆ ಸನ್ನಿವೇಶಗಳ ಚಿತ್ರಣಕ್ಕೆ ವೈವಿಧ್ಯತೆ ದೊರೆಯುತ್ತದೆ ಎಂಬ ಕಾರಣಕ್ಕಾಗಿಯೂ ಕಾರಂತರು ಈ ನಗರವನ್ನು ಆಯ್ದು ಕೊಳ್ಳಬಹುದು. ಏಕೆಂದರೆ ಕಾರಂತರು ತಮ್ಮ ಒಂದು ಕಾದಂಬರಿಯ ಪಾತ್ರವೊಂದರ ಬಾಯಿಂದ ಈ ಮಾತನ್ನು ಹೇಳಿಸುತ್ತಾರೆ:

"ಒಂದು ದೃಷ್ಟಿಯಿಂದ ಮುಂಬಯಿಯು ಅರಣ್ಯವೇ. ಅಲ್ಲಿ ಜನಸಮುದಾಯ ದೊಡ್ಡದಿದ್ದೂ ಇಲ್ಲದಂತಿರುವುದಕ್ಕೆ ಅನುಕೂಲವಿದೆ. ಎಲ್ಲಿ ಹೋದರೂ ಅಲ್ಲಿ ಜನ ಸಿಗುತ್ತಾರೆ; ನೂಕು ನುಗ್ಗಲುಂಟು. ಆದರೆ ಸಾಮಾನ್ಯವಾಗಿ "ನೀನು ಯಾರು? ನೀನು ಎಲ್ಲಿಯವ?" ಎಂದು ಕೇಳುವವರಿರುವುದಿಲ್ಲ. ಆಚೆ ಮನೆಯ ಯವನಿಗೆ ಈಚೆ ಮನೆಯವನ ಗುರುತಿರುವುದಿಲ್ಲ. ನೀನಾಗಿ ಬಯಸಿ ಹೋದರೆ ಸ್ನೇಹ; ಇಲ್ಲವಾದರೆ ಇಲ್ಲ ..." (ಒಂಟಿ ದನಿ, ಪುಟ 55).

ಇಂಥ ಮಹಾನಗರಕ್ಕೆ ತನ್ನ ಕೀರ್ತಿಪತಾಕೆಯನ್ನು ಹಾರಿಸಬರುವವಳು ನರ್ತಕಿ ನಯನತಾರೆ. ನಾಗರಿಕತೆಯ ನಾಜೂಕುಗಳನ್ನೆಲ್ಲಾ ಸಮರ್ಥವಾಗಿ ಅರ್ಥ ಮಾಡಿಕೊಂಡಿರುವ ಕಾರಂತರು ಈ ಪ್ರಚಾರಪ್ರಿಯೆ ಹೆಂಗಸನ್ನು ಗರಿಷ್ಠ ಮಟ್ಟಕ್ಕೆ ಕೊಂಡೊಯ್ದು ಈಕೆಯ ನಿಜವಾದ ಬಣ್ಣವನ್ನು ಕಾದಂಬರಿಯುದ್ದಕ್ಕೂ ಬಯಲು ಮಾಡುತ್ತಾರೆ. ಫ್ರೆಂಚ್ ತಾಯಿ, ಭಾರತೀಯ ತಂದೆಯ ಕಸಿಯಾದ ಈಕೆಯನ್ನು ಹಲವಾರು ಗಂಡಸರ ಮಗ್ಗುಲಿಗೆ ಸಿಕ್ಕಿಸಿ ಸೊಸೈಟಿ ಹೆಂಗಸರ ಮೌಲ್ಯ ಇಷ್ಟೇ ಎನ್ನುವುದನ್ನು ನಿರ್ಧರಿಸಿಬಿಡುತ್ತಾರೆ. ವಿದ್ಯಾವಂತ ಮಹಿಳೆಯ ಬಗೆಗಿನ ಕಾರಂತರ ವಿಡಂಬನಾತ್ಮಕ ದೃಷ್ಟಿ ಇಲ್ಲಿ ಮೊನಚಾಗಿದೆ; ಯಶಸ್ಸನ್ನು ಸಾಧಿಸಿದೆ. ಫ್ರಾನ್ಸ್ ದೇಶದಲ್ಲಿ ಬ್ಯಾಲೆ ನರ್ತಕಿಯಾದ ತಾಯಿಯಿಂದ ನೃತ್ಯ ಕಲಿತು ಭಾರತಕ್ಕೆ ಬಂದು ನೆಲೆಸಲು ಅಪೇಕ್ಷಿಸುವ ನಯನತಾರೆ, ವಿದೇಶದಿಂದ ಬಂದವರೆಲ್ಲರೂ ಅಪ್ರತಿಮರು ಎಂದು ಭಾವಿಸುವ ನಮ್ಮ ಅನೇಕ ದಡ್ಡರನ್ನು ಪ್ರಚಾರದ ಅಬ್ಬರದಿಂದಲೇ ಆಕರ್ಷಿಸುವ ರೀತಿ, ನಮ್ಮ ಜನ ಹೊರಗಿನಿಂದ ಬಂದ ಮಾಲನ್ನು ಹಿಂದುಮುಂದು ನೋಡದೆಯೇ ಸ್ವೀಕರಿಸುತ್ತಾರೆ ಎನ್ನುವುದನ್ನು ಸಾಬೀತುಪಡಿಸುತ್ತದೆ. ಸೊಸೈಟಿ ಹೆಂಗಸರನ್ನು, ಅವರು ಕೈಗೆತ್ತಿಕೊಳ್ಳುವ ಯಾವುದೇ ಯೋಜನೆ, ಕಾರ್ಯಕ್ರಮವನ್ನು ಅನುಮಾನದಿಂದಲೇ ನೋಡುವ ನನಗಂತೂ ಕಾರಂತರು ನಯನತಾರೆಯ ಬಗ್ಗೆ ಕೊಡುವ ವಿವರಣೆಗಳೆಲ್ಲವೂ ಬೆರಗನ್ನು ಉಂಟು ಮಾಡಿವೆ.

ಕಾರಂತರ ಕಾದಂಬರಿಗಳಲ್ಲಿ ದೊರೆಯುವ ಇಂಥ ಇನ್ನಿತರ ಬೆಡಗು ಪಾತ್ರಗಳು "ಚಿಗುರಿದ ಆಸೆ" ಯಲ್ಲಿನ ಪ್ರತಿಮೆ ಮತ್ತು ಮಿಸೆಸ್ ಜಯರಾಮಳದು. ತಾವು ಆಧುನಿಕರೆಂದು ಸೋಗು ಹಾಕುವ, ಗಂಡನ ಹುದ್ದೆಯ ಬೆಂಬಲದಿಂದಲೇ ಸಮಾಜದಲ್ಲಿ ತಮ್ಮ ವರ್ಚಸ್ಸನ್ನು ಬೆಳೆಸಿಕೊಳ್ಳುವ ಇಂಥವರ ಟೊಳ್ಳುತನವನ್ನು ಕಾರಂತರು ಚೆನ್ನಾಗಿಯೇ ಅಳೆದು ನೋಡುತ್ತಾರೆ.

ಇಂಥ ಮೇಲುವರ್ಗದ ಮಹಿಳೆಯರು ಹಾಕಿಕೊಟ್ಟ ಮೇಲ್ಪಂಕ್ತಿಯನ್ನು ಈಚೆಗಂತೂ ನಮ್ಮ ಮಧ್ಯಮ ವರ್ಗದ ಮಹಿಳೆಯರೂ ಅನುಕರಿಸಹೋಗುವುದನ್ನು ನಾವು ಕಾಣಬಹುದು. ಬಡಜನರ ಸ್ಥಿತಿಗೂ ತಮ್ಮ ಮಟ್ಟವನ್ನು ಇಳಿಸಿಕೊಳ್ಳಲಾಗದೆ,

ಶ್ರೀಮಂತ ಮಹಿಳೆಯರ ಸಾಲಿಗೂ ಸೇರಲಾಗದೆ ತ್ರಿಶಂಕುಗಳಂತೆ ಮಧ್ಯೆ ಜೋತಾ ಡುವ ಮಧ್ಯಮವರ್ಗ, ಇತ್ತ ತೀರಾ ಬಡವರ್ಗದವರ ಮುಗ್ಧತೆಯನ್ನೂ ಪಡೆದು ಕೊಳ್ಳಲಾಗದೆ ಅತ್ತ ತುಂಬ ಶ್ರೀಮಂತರ ಆಟಾಟೋಪಗಳನ್ನೂ ಧೈರ್ಯವಾಗಿ ಬಹಿರಂಗಪಡಿಸಲಾಗದೆ ತಮ್ಮನ್ನು ತಾವೇ ಶೋಚನೀಯ ಸ್ಥಿತಿಗೆ ಇಳಿಸಿಕೊಂಡಿರುವು ದಂತೂ ಇನ್ನೂ ದುರ್ದೈವದ ಸಂಗತಿ.

"ಇದ್ದರೂ ಚಿಂತೆ"ಯ ಸಾವಿತ್ರಿಯೂ ಇಂಥದೇ ಒಂದು ಪಾತ್ರವಾದರೂ ಆಕೆಯ ಜೀವನ ಸಾಧನೆ ಮತ್ತೊಂದು ಮಜಲನ್ನು ಮುಟ್ಟುತ್ತದೆ. ಈಕೆ ವ್ಯವಹಾರ ಕುಶಲಳು. ತನಗೆ ಅನ್ನವಿತ್ತ ಧಣಿಗೇ ಮೋಸ ಮಾಡಿದ ರಾಘವೇಂದ್ರನನ್ನು ಮದುವೆಯಾದ ಈಕೆ ಆತ ಸತ್ತ ಮೇಲೆ ವ್ಯವಹಾರದಲ್ಲಿ ನಡೆಸುವ ಕಾರುಬಾರು ಹೆಂಗಸಿನ ಮತ್ತೊಂದು ಮಗ್ಗುಲನ್ನು ಪರಿಚಯಿಸುತ್ತದೆ.

ಅದೆಲ್ಲಕ್ಕಿಂತಲೂ ಗಾಬರಿಗೊಳಿಸುವ ಅಂಶ ಅವಳು ತನ್ನ ಕಿರಿಯ ಮಗನನ್ನು ಕಾಣುವ ರೀತಿ. ವ್ಯವಹಾರಗಳ ಗಲಭೆಯಲ್ಲಿ, ಸಮಾಜವನ್ನು ಸುಧಾರಿಸುವ ಉತ್ಸು ಕತೆಯಲ್ಲಿ ತಮ್ಮ ಮಕ್ಕಳನ್ನು ಅನಾದರಿಸುವ ತಾಯಿಯನ್ನು ನಾನೆಂದೂ ಕ್ಷಮಿಸ ಲಾರೆ. ಸೂಕ್ಷ್ಮ ಮನಸ್ಸಿನ ಮಗು ಯಾವುದೋ ಪರೋಕ್ಷ ಕಾರಣಕ್ಕಾಗಿ ತನ್ನ ತಾಯಿಯ ಮೇಲೆ ಬೆಳೆಸಿಕೊಳ್ಳುವ ದ್ವೇಷ ಜೀವಿತದುದ್ದಕ್ಕೂ ಮುಂದುವರಿಯ ಬಹುದು ಎನ್ನುವುದಕ್ಕೆ ಸಾವಿತ್ರಿ ಹಾಗೂ ಅವಳ ಮಗ ಸೀತಾರಾಮರ ಸಂಬಂಧವೇ ಸಾಕ್ಷಿ. "ಚಿಗುರಿದ ಆಸೆ" ಕಾದಂಬರಿಯ ಪ್ರತಿಮೆ ಹಾಗೂ ಶಂಕರನ ತಾಯಿ-ಮಗನ ಸಂಬಂಧದಲ್ಲೂ ಆತ್ಮೀಯತೆ ಇಲ್ಲದಿರುವುದನ್ನು ಕಾರಂತರು ಇದೇ ರೀತಿ ತೋರಿ ಸಿದ್ದಾರೆ.

"ಸನ್ಯಾಸಿಯ ಬದುಕು" ಕಾದಂಬರಿಯ ಎನ್ನಾಬ್ರೈಟ್ ಅಥವಾ ಅನನ್ಯ ರಾಧಿಕಾ. ಪತ್ರಿಕೋದ್ಯಮ ಕ್ಷೇತ್ರವನ್ನು ಸ್ವಲ್ಪವಾದರೂ ಬಲ್ಲ ನನಗೆ ಎನ್ನಾಬ್ರೈಟ್‌ಳ ಚಾಕ ಚಕ್ಯತೆ ಅರ್ಥವಾಗುತ್ತದೆ. ಭಾರತದ ಸಾಧು-ಸನ್ಯಾಸಿಗಳ ಅನುಯಾಯಿಗಳಾಗಿ ಇಲ್ಲಿಯೇ ನೆಲೆಸುವ ವಿದೇಶಿ ಹೆಂಗಸರು ಗಂಡಸರ ಸಂಖ್ಯೆ ಹೆಚ್ಚುತ್ತಿರುವ ಈ ದಿವಸ ಗಳಲ್ಲಿ ಪರದೇಶದ ಪತ್ರಿಕೋದ್ಯಮಿಯೊಬ್ಬಳು ಅರ್ಹತೆಯಿಲ್ಲದ ಸನ್ಯಾಸಿಯೊಬ್ಬನನ್ನು ಅಟ್ಟಕ್ಕೇರಿಸಿ, ಆತನ ಜೀವನದ ಮೂಲಕ ತನ್ನ ಜೀವನೋಪಾಯವನ್ನು ಕಂಡುಕೊಳ್ಳುವ ವಿಡಂಬನೆ ಕಾದಂಬರಿಯಲ್ಲಿ ಸ್ಪಷ್ಟವಾಗಿದೆ. ನಮ್ಮ ಹೆಂಗಸರೂ ಶಾಂತಿಯನ್ನು ಅರಸುವ ನೆಪದಲ್ಲಿ, ಜೀವನದಿಂದ ಪಲಾಯನವಾಗುವಂಥ ಬದುಕನ್ನು ಆರಿಸಿಕೊಂಡರೂ ವಿದೇಶಿ ಪತ್ರಕರ್ತೆಯರಂತೆ ಅಂಥ ಮಾರ್ಗವನ್ನೇ ಗಳಿಸುವ ಸಾಧನವಾಗಿ ಮಾಡಿ ಕೊಳ್ಳುವ ತಾಕತ್ತು ಇವರಿಗೆ ಇಲ್ಲದುದರಿಂದಲೇ, ಕಾರಂತರು ಸಹಜವಾಗಿಯೇ ವಿದೇಶಿ ಪಾತ್ರವೊಂದನ್ನು ಇಲ್ಲಿ ಎಳೆದು ತರುತ್ತಾರೆ. ಎನ್ನಾಬ್ರೈಟ್ ಕ್ರಮಕ್ರಮವಾಗಿ

ಸನ್ಯಾಸಿಯ ಬದುಕನ್ನು ತನ್ನ ಹಿಡಿತಕ್ಕೆ ತೆಗೆದುಕೊಳ್ಳುವುದು, ದೈವಿಕತೆಯ ಮೆಟ್ಟಿಲೇರಿದವಳೆಂಬ ಭಾವನೆಯನ್ನು ಸಾರ್ವಜನಿಕರಲ್ಲಿ ಹುಟ್ಟಿಸಿ ಇಡೀ ಆಶ್ರಮದ ಆಗುಹೋಗುಗಳನ್ನು ತನ್ನ ಸ್ವಾಧೀನಕ್ಕೆ ತೆಗೆದುಕೊಳ್ಳುವುದು–ಇವೆಲ್ಲ ನಮ್ಮ ಜೀವನದ ಒಂದು ಅಂಗವಾಗಿ ಹೋಗಿರುವುದನ್ನು ನೋಡಿ ರೋಸಿಯೇ ವಿಚಾರವಾದಿ ಕಾರಂತರು ತಮ್ಮ ವ್ಯಂಗ್ಯ ದೃಷ್ಟಿಯನ್ನು ಎನ್ಸಾಬ್ರೈಟ್‌ಳ ಚಿತ್ರಣದಲ್ಲಿ ಬಳಸಿಕೊಳ್ಳುತ್ತಾರೆ.

ಕಾರಂತರ ಕಾದಂಬರಿಗಳಲ್ಲಿ ಬರುವಂಥ ನಗರದ ವಿದ್ಯಾವಂತ ಮಹಿಳೆಯರ ಪಾತ್ರಗಳನ್ನು ಹೀಗೆ ಪರೀಕ್ಷಿಸುತ್ತ ಹೋಗಿರೋ ಸಂದರ್ಭದಲ್ಲಿ ಅವರ ಕಾದಂಬರಿಗಳಲ್ಲಿನ ಮುದುಕಿಯರು, ತಮ್ಮ ನಂಬಿಕೆಗಳು, ಜೀವನವನ್ನು ಕುರಿತಂತೆ ತಮ್ಮ ವೇದಾಂತ, ಇಂಥವುಗಳ ಮೂಲಕ ನನ್ನ ಕರುಳನ್ನು ಚುರುಕ್ ಎನ್ನಿಸಿರುವಂತೆ, ಯಾವುದೋ ಒಂದು ಬಗೆಯ ಧನ್ಯಭಾವವನ್ನು ಹೊಮ್ಮಿಸಿರುವಂತೆ, ನಗರದ ವಿದ್ಯಾವಂತ ಮಹಿಳೆಯರು ನನ್ನಲ್ಲಿ ಯಾವ ಸಂದರ್ಭದಲ್ಲೂ ತೀವ್ರತರ ಕೃತಾರ್ಥ ಭಾವನೆಯನ್ನು ಮೂಡಿಸದೇ ಹೋದದ್ದು ನನ್ನ ಅನುಭವಕ್ಕೆ ಬಂದಿದೆ. ಕಾರಂತರ ಕಾದಂಬರಿಗಳಲ್ಲಿನ ಮುದುಕಿಯರ ಭವ್ಯ ವ್ಯಕ್ತಿತ್ವದ ಅಡಿಯಲ್ಲಿ, ವಿದ್ಯಾವಂತ ಮಹಿಳೆ ತೀರಾ ಕುಬ್ಜಳಾಗಿ ಕಾಣುತ್ತಾಳೆ; ಆ ಪಾತ್ರಗಳ ಪ್ರಖರತೆಯಲ್ಲಿ ಕರಗಿ ಹೋಗುತ್ತಾಳೇನೋ ಎಂಬ ದಿಗಿಲನ್ನು ಹುಟ್ಟಿಸುತ್ತಾಳೆ.

# ಕಾರಂತರು : ಒಂದು ಸೃಜನಾತ್ಮಕ ಪ್ರತಿಕ್ರಿಯೆ

ಯು. ಆರ್. ಅನಂತಮೂರ್ತಿ

"ನೀವು ಒಬ್ಬ ಸೃಜನಾತ್ಮಕ ಲೇಖಕರಾಗಿ ಕಾರಂತರ ಕಾದಂಬರಿಗಳಿಗೆ ಹೇಗೆ ಪ್ರತಿಕ್ರಿಯಿಸುತ್ತೀರಿ ?

ಕಾರಂತರು ಒಬ್ಬ ಕಾದಂಬರಿಕಾರರಾಗಿ ನಿಮ್ಮ ಬರಹಗಳ ಮೇಲೆ ಪ್ರಭಾವ ಬೀರಿದ್ದಾರೆಯೇ ? ಮತ್ತು ಅದರ ಸ್ವರೂಪವೇನು ?

ಇಂಥ ಒಬ್ಬ ಲೇಖಕರ ಪ್ರಭಾವದಿಂದ ಪಾರಾಗುವ ಸಮಸ್ಯೆಯನ್ನು ನೀವು ಎದುರಿಸಬೇಕಾಗಿ ಬಂದಿತೆ?—ಇತ್ಯಾದಿ.

ಈ ಮೇಲಿನ ಪ್ರಶ್ನೆಗಳಿಗೆ ಪ್ರತಿಕ್ರಿಯೆಯಾಗಿ ಮಂಡಿಸಿದ ಲೇಖನ.

ದಟ್ಟ ಅರಣ್ಯದ ನಡುವೆ ಒಂದೇ ಮನೆ. ಮನೆಯೊಳಗೆ ಕಾಡು ನುಗ್ಗೀತೆಂದು ನನ್ನ ಅಜ್ಜ ನಿತ್ಯ ಕತ್ತಿಯಿಂದ ಗಿಡ ಮೊಟ್ಟುಗಳನ್ನು ತರಿದು ಬರುತ್ತಿದ್ದರು. ಶಾನುಭೋಗರಾಗಿದ್ದ ನನ್ನ ತಂದೆ ಊರೂರು ಸುತ್ತುತ್ತಿದ್ದಾಗ, ಕತ್ತಲಾದ ಮೇಲೆ ಹುಲಿಯ ಗರ್ಜನೆಗೆ ಹೆದರಿ ನನ್ನ ತಾಯಿ ಬಾಗಿಲುಗಳನ್ನು ಮುಚ್ಚಿ, ನಮ್ಮನ್ನು ಮಲಗಿಸಿಕೊಂಡು ಹೆದರಿದ ಹಸುಗಳ ಕೊರಳಿನ ಬಿದಿರು ಗಂಟೆಗಳನ್ನು ಕಾತರದಿಂದ ಆಲಿಸುತ್ತ ಕೂತಿರುತ್ತಿದ್ದರು. ಹಗಲು, ಆಳುಗಳು ಬಂದು ಹೆಜ್ಜೆಗುರುತು ಬಿಟ್ಟು ಹೋದ ಹುಲಿ ಚಿರತೆಗಳ ಕಥೆ ಹೇಳುತ್ತಿದ್ದರು. ಒಂದೇ ಒಂದು ದಾಳಿಂಬೆ ಮರದಲ್ಲಿ ಬಿಟ್ಟ ಒಂದೇ ಒಂದು ಹಣ್ಣನ್ನು ಬಯಕೆಯ ತನ್ನ ರಾಜಕುಮಾರಿಗಾಗಿ ಕೊಯ್ಯುಲು ಬಿಡದಂತೆ ಕಾಯುತ್ತ ಕೂತಿದ್ದ ರಾಕ್ಷಸನ ಕಥೆಯನ್ನು ನಿದ್ದೆ ಹತ್ತುವತನಕ ಅಜ್ಜ ನನಗೆ ಎಳೆದು ಎಳೆದು ಹೇಳುವುದು. ಅಕ್ಷರಗಳನ್ನು ನಾನು ಬರೆಯಲು ಕಲಿತದ್ದು ಚಾವಡಿಯಲ್ಲಿ—ಹರಡಿದ ಮರಳಿನ ಮೇಲೆ, ಉರಿಯುತ್ತಿದ್ದ ಬೆರಳಿನಿಂದ. ದಾಳಿಂಬೆ, ಪಾರಿಜಾತ, ನಂದಬಟ್ಟಲು, ಸಂಜೆ ಮಲ್ಲಿಗೆ, ದಾಸವಾಳ, ರತ್ನಗಂಧಿಗಳು ಬೆಳೆದ ಅಂಗಳದಲ್ಲಿ ಆಗೊಮ್ಮೆ, ಈಗೊಮ್ಮೆ ಹುಲಿವೇಷದ ಕುಣಿತ, ಕರಡಿ ವೇಷದ ಕುಣಿತ. ಮನೆಗೆ ದೂರದಲ್ಲಿದ್ದ ಆಳುಗಳ ಗುಡಿಸಿಲಿನಲ್ಲಿ ಗಣ ಬರುತ್ತಿದ್ದ ಅಬ್ಬಕ್ಕನದೂ ಒಂದು ಗುಡಿಸಲು. ಅವಳ ಅಂಗಳದಲ್ಲಿ ಹೀರೇಕಾಯಿಗಿಡ, ಬಸಲೆ ಸೊಪ್ಪಿನ ಬಳ್ಳಿ, ಹಿತ್ತಲಲ್ಲಿ ತೊಂಡೆ ಚಪ್ಪರ. ವರ್ಷಕ್ಕೊಮ್ಮೆ ಅಡಿಕೆ ಕೊಳ್ಳಲೆಂದು ಬಂದು ನನ್ನಲ್ಲಿ ಚುಂಗಿನಿಂದ ಅಲಂಕೃತವಾದ ಚೂಪು ಮೂತಿಯ ಜೋಡು, ಪಟ್ಟಣದ ಬೆಂಡು ಬತ್ತಾಸುಗಳ ಆಸೆ ಹುಟ್ಟಿಸಿದ ಬ್ಯಾರಿಗಳು; ಹುಲಿಯ ಬಾಯಿಗೆ ಸಿಕ್ಕು ಸತ್ತ ಕೌಲಿಗಾಗಿ ಅಮ್ಮ ಕಣ್ಣೀರು

ಸುರಿಸಿದ್ದು; ಒಂದಿಡೀ ದಿನ ಮೂರ್ಛೆ ಹೋಗಿದ್ದ ನನ್ನ ತಮ್ಮನೊಬ್ಬನನ್ನು ವೈದ್ಯರು ಎಚ್ಚರಿಸಲೆಂದು ಚುಚ್ಚುಕ ಹಾಕಿದ್ದು; ತಂದೆಯ ಗೆಳೆಯರೊಬ್ಬರು ಅವನನ್ನು ಉಳಿಸಲೆಂದು ಮೃತ್ಯುಂಜಯ ಜಪ ಮಾಡಿದ್ದು—ಇಂಥ ನೆನಪುಗಳು ಬಾಲ್ಯದಿಂದ ಮರುಕಳಿಸುತ್ತವೆ. ನಾನು ಮಗುವಾಗಿದ್ದಾಗ ಆಡಿದ ಒಂದು ಮಾತು—ಅಮ್ಮ ಯಾವತ್ತೂ ನೆನಸುತ್ತಿದ್ದುದರಿಂದಲೋ ಏನೋ—ಇನ್ನೂ ನೆನಪಿದೆ: 'ಅಬ್ಬಕ್ಕನ್ನ ಗುಬ್ಬಕ್ಕ ಕಚ್ಕಂಡೋಯ್ತು' ಎಂದು ಲಯಬದ್ಧ ಮಾತಿನಿಂದ ಹಿರಿಯರ ಮುದ್ದಿಗೆ ನಾನು ಕಾರಣನಾಗಿದ್ದೆ. ಸಂಜೆ ತಲೆಗೆದರಿ ಕುಂಕುಮ ಬಳಿದುಕೊಂಡು ತಥ್ಥರ ನಡು ಗುತ್ತ ಸಿಂಗಾರ ಹಿಡಿದು ಕುಣಿಯುತ್ತಿದ್ದ ಅಬ್ಬಕ್ಕ ಮಾರನೇ ದಿನ ನಗುನಗುತ್ತ ಎರಡು ಕಂಕುಳಲ್ಲಿ ತನ್ನ ಅವಳಿ ಜವಳಿ ಮಕ್ಕಳನ್ನು ಎತ್ತಿಕೊಂಡು ಬಂದದ್ದು ಕಂಡರೆ ನನಗೆ ಅಪಾರವಾದ ಪ್ರೀತಿ, ವಿಸ್ಮಯ. ಇಂಥ ಅಬ್ಬಕ್ಕನೇ ನನ್ನನ್ನು ಚಿಕ್ಕಯ್ಯನೆಂದು ಬಹು ವಚನದಲ್ಲಿ ಕರೆಯುತ್ತಿದ್ದಳೆಂದು ಹೆಮ್ಮೆ. ನನ್ನ ತಮ್ಮ–ಈಗ ಅವನಿಲ್ಲ—ಬಕಾಸುರ ನಂತೆ ಎಷ್ಟು ತಿಂದರೂ ಬಡಕಲಾಗಿದ್ದನೆಂದು ನಮ್ಮ ಮನೆಯಲ್ಲಿ ರಾವು ಬಿಡಿಸುವ ರಣದೌತಣ ನಡೆದಿತ್ತು. ಕೆಂಪಾದ ಅನ್ನದ ರಾಶಿಯೆದುರು ಕೂರಿಸಿ ಅಳುತ್ತಿದ್ದ ನಮ್ಮ ತಮ್ಮನಿಗೆ ತಿನ್ನು, ತಿನ್ನು ಎಂದು ಯಾರ್ಯಾರೋ ಪುಸಲಾಯಿಸುತ್ತಿದ್ದರು. ಯಾರದೋ ಮದುವೆ ಮನೆಗೆ ಹೋದಾಗ ಕುತೂಹಲದಿಂದ ನನ್ನ ಎರಡು ಮೂಗಿನೊಳಗೂ ಹುಣಿಸೆ ಬೀಜವನ್ನು ತೂರಿಕೊಂಡು, ಅವು ನೆತ್ತಿಗೆ ಹೋಯಿತೆಂದು, ಇಡೀ ಮದುವೆ ಮನೆಯನ್ನು ನಾನು ಕಂಗಾಲುಗೊಳಿಸಿದ್ದೆ. ಕಂಡ ಕಂಡ ದೇವರಿಗೆಲ್ಲ ಹರಕೆ ಹೇಳಿ ಕೊಂಡು, ಮುಂದೇನು ತಿಳಿಯದಿದ್ದಾಗ ಗಾಡಿ ಕಟ್ಟಿಸಿಕೊಂಡು ದೂರದ ಪೇಟೆಗೆ ನನ್ನ ಸಾಗಿಸಬೇಕು ಎನ್ನುವಷ್ಟರಲ್ಲಿ ಹುಣಿಸೆ ಬೀಜಗಳು ಮೂಗಿನಿಂದ ಜಾರಿ ಹೊರ ಬಂದು, ಅಷ್ಟು ಹೊತ್ತೂ ಎಲ್ಲರ ಮರುಕಕ್ಕೆ ಒಳಗಾಗಿದ್ದ ನಾನು ಈಗ ಹಿರಿಯರ ಭಯಂಕರ ಕೋಪಕ್ಕೆ ತುತ್ತಾಗಿದ್ದೆ. ನನಗೆ ಪಾಠ ಹೇಳಲು ಬರುತ್ತಿದ್ದ ಮಾಸ್ತರರ ಹೆಸರು ಕೃಷ್ಣಪ್ಪಯ್ಯ. ಅವರದೊಂದು ಕಾಲು ಕುಂಟು. ಆಯ್ದು ತಂದ ರಂಜದ ಹೂವನ್ನು ಬಾಳೆನಾರಿನಲ್ಲಿ ಪೋಣಿಸುತ್ತ ಕೂರುವುದೆಂದರೆ ಅತ್ಯಂತ ಖುಷಿ ಕೊಡು ತ್ತಿದ್ದ ಹೊತ್ತಿನಲ್ಲೆ ಅವರು ಪಾಠಹೇಳಲು ಬರುವುದು. ನಾನು ಮುಚ್ಚಿಕೊತರೆ, ಕಾಡಿನಲ್ಲಿ ಸೌದೆ ತರಲು ನನ್ನನ್ನು ಹೆಗಲ ಮೇಲೆ ಕೂರಿಸಿಕೊಂಡು ಕಥೆ ಹೇಳುತ್ತ ಹೋಗುತ್ತಿದ್ದ ಅಜ್ಜನೇ ನನ್ನನ್ನು ನಿಷ್ಠುರವಾಗಿ ಹೊಡೆದು ಎಳೆದು ತಂದು ಮೇಷ್ಟ್ರ ಎದುರು ಕೂರಿಸುತ್ತಿದ್ದರು. ನಾನು ಮುಂದೆ ಓದಿ ಬರೆಯುವುದನ್ನು ಕಲಿತ ಮೇಲೆ ಕಾದಿರುವ ಮೋಜು ಈಗಿಂದಲೇ ನನಗೆ ಪ್ರಿಯವಾಗಲೆಂದು ಅಜ್ಜ ಆಳಲೆ ಕಾಯಿ, ಕಬ್ಬಿಣದ ಕಿಟ್ಟ ಇತ್ಯಾದಿಗಳನ್ನು ತಂದು ಕುದಿಸಿ ಶಾಯಿ ಮಾಡುತ್ತಿದ್ದರು. ನನ್ನನ್ನು ಕಾಡಿಗೆ ಕರೆದುಕೊಂಡು ಹೋಗಿ ಲೇಖನಿಗಾಗಿ ಹದ್ದಿನ ಗರಿ ಹುಡುಕಿಸು ತ್ತಿದ್ದರು...

ಇಂಥ ಮೇಲಿನ ನೆನಪುಗಳೆಲ್ಲ ಭೂತಕಾಲದ ಕಾಂತಿಯಲ್ಲಿ ಹೊಳೆಯುತ್ತವೆ. ನನ್ನ ಈ ಲೋಕಕ್ಕೆ ನನ್ನ ಮನಸ್ಸು ಬೆಳೆಯುವಾಗ ಬಂದವರು ಕಾರಂತರು. ಅವರನ್ನು ಓದಿದ್ದರಿಂದ ಇಂಥ ನೆನಪುಗಳು ನನಗೆ ಮುಖ್ಯ ಎನ್ನಿಸುತ್ತವೆಯೆ? ನಾನು ನೆನೆಸಿ ಕೊಳ್ಳುವುದರಲ್ಲಿ ನಿಜದ ಪಾಲೆಷ್ಟು? ಕಲ್ಪನೆಯೆಷ್ಟು? ಕಾರಂತರ ಕೃತಿಗಳ ಹಿನ್ನೆಲೆಯಲ್ಲಿ ಮಿನುಗುವ ಇಂಥ ವಿವರಗಳು ನನ್ನ ಬರವಣಿಗೆಯಲ್ಲಿ ಮುನ್ನೆಲೆಯಲ್ಲೇ ಯಾಕೆ ಬಂದು ನಿಲ್ಲುತ್ತವೆ ?

ಮನೆಯೆದುರು ಬೇಲಿಯ ಕಳ್ಳಿಯ ಎಲೆಯನ್ನು ಮುರಿದು, ನಾಜೂಕಾಗಿ ಅದರ ಹಾಲು ಕನ್ನಡಿಯಾಗುವಂತೆ ಹಿಗ್ಗಿಸಿ ಅದರ ಮೇಲೆ ಸೂರ್ಯನ ಕಿರಣಗಳನ್ನು ಪಡೆದು ರಂಗುರಂಗಿನ ರೇಖೆಗಳನ್ನು ಕಂಡು ಚೋಟುದ್ದದವ ಹಿಗ್ಗುವುದು ಕಾರಂತರಿಗೆ ಮುಖ್ಯವೆನ್ನಿಸಬಹುದೆ? (ಅವರ ಸಮಕಾಲೀನರಲ್ಲಿ ಕುವೆಂಪುವಿಗೆ ಮಾತ್ರ ಇಂಥವು ಮುಖ್ಯವೆನ್ನಿಸುತ್ತವೆ.) ದೀಪಾವಳಿಯ ದಿನ ದೂರದ ಊರಲ್ಲಿದ್ದ ಸೋದರಮಾವ ಹೆಂಡತಿ ಮನೆಗೆ ಹೋಗಿ ಸತ್ತದ್ದನ್ನು ಜೀ ಜೀ ಎಂದು ಎಣ್ಣೆ ಕುಡಿದು ಸದ್ದು ಮಾಡುವ ಚಪ್ಪಲಿ ಮೆಟ್ಟಿ ಲಾಟೀನು ಹಿಡಿದು ಬಂದವರು ನಡುರಾತ್ರಿಯಲ್ಲಿ ಎಬ್ಬಿಸಿ ಹೇಳಿದ್ದು, ಅದರ ಮುಂದಿನ ದೀಪಾವಳಿಯಲ್ಲಿ ಮನೆಯ ರಂಪ ರಗಳೆ ದುಃಖಗಳಲ್ಲಿ ನಾನೊಬ್ಬನೇ ಎಣ್ಣೆ ಹಚ್ಚಿ ಎರಕೊಂಡು ಪ್ರಾತಃಕಾಲ ಹೊರಬಂದಾಗ ಆಕಾಶದಲ್ಲಿ ದಿವ್ಯಕಾಂತಿಯ ಏನೋ ಹಾರಿದಂತೆ ಕಂಡದ್ದು ಕಾರಂತರ ಲೋಕದಲ್ಲಿ ಜರುಗಿದರೂ, ಅದಕ್ಕೆ ಅವರೆಷ್ಟು ಪ್ರಾಶಸ್ತ್ಯ ಕೊಟ್ಟಾರು ?

ನಾನು ಬರೆಯಲು ಪ್ರಾರಂಭಿಸಿದ ದಿನಗಳಲ್ಲಿ ಕಾರಂತರ ಕೃತಿಗಳು ನನಗೆ ದೀಪವೂ ಆಗಿದ್ದವು, ಕನ್ನಡಿಯೂ ಆಗಿದ್ದುವು. ಅದರ ಬೆಳಕಲ್ಲಿ ನನಗೆ ಬೇಕಾದ್ದನ್ನು ನಾನು ಹುಡುಕಿಕೊಂಡೆ; ಅದರ ಕನ್ನಡಿಯಲ್ಲಿ ಕಾಣಬೇಕೆನ್ನಿಸಿದಂತೆ ಕಾಣಲು ಪ್ರಯತ್ನಿಸಿದೆ. ಅವರಿಂದ ನಡೆಯುವುದನ್ನು ಕಲಿತು, ಬೇರೆ ದಿಕ್ಕಿಗೆ ಹೊರಳಲು ಯತ್ನಿಸದಿದ್ದರೆ ಅವರನ್ನೆ ಕಾಪಿ ಹೊಡೆಯುತ್ತ ಇರುತ್ತಿದ್ದೆ; ಅಥವಾ ಮೆಚ್ಚಿಕೆಯಲ್ಲಿ ಅವರಿಂದ ಪರವಶನಾಗಿ ಇದ್ದು ಬಿಡುತ್ತಿದ್ದೆ. ಅವರ ದಟ್ಟ ಜೀವನಾನುಭವದಿಂದ ಹುಟ್ಟಿದ ನಿಷ್ಠುರವಾದ ದೃಷ್ಟಿಯನ್ನು ಇನ್ನೂ ಗಳಿಸಿಕೊಳ್ಳದ ನನ್ನಂಥ ಲೇಖಕರಿಗೆ ಎರಡನೆಯದೂ ವಿನಯಪೂರ್ವಕವಾಗಿ ಒಪ್ಪಿಕೊಳ್ಳಬಹುದಾದ ಪರ್ಯಾಯವಾಗಿಯೆ ಉಳಿದಿದೆ. ನನ್ನ ಪೀಳಿಗೆಯವರ ಹಿಂದೆ ಕಾರಂತರಂಥ ಒಬ್ಬ ಲೇಖಕರಿದ್ದಾಗ ಅವರನ್ನು ಅರಗಿಸಿಕೊಂಡು ಬೇರೆಯಾಗುವುದು ಅಷ್ಟೇನೂ ಸುಲಭದ ಸಂಗತಿಯಲ್ಲ. ನಾನು ಈಚೆಗೆ ಓದಿದ Anxiety of influence ಎಂಬ ಗ್ರಂಥದಲ್ಲಿ ತಮ್ಮ ಹಿಂದಿನ ಪ್ರತಿಭಾವಂತರಿಂದ ಸೃಜನ ಪ್ರೇರಣೆಗಳನ್ನು ಪಡೆಯಲು ಅವರನ್ನು ಅಸಮರ್ಪಕವಾಗಿ ಅರ್ಥ ಮಾಡಿಕೊಳ್ಳುವುದೂ ಒಂದು ಬಗೆಯೆಂದು ಹೆರಾಲ್ಡ್ ಬ್ಲೂಮ್ ಹೇಳುತ್ತಾನೆ. ನಮಗೆ ಬೇಕಾದ್ದನ್ನು ಮಾತ್ರ ಆಯ್ದು, ಅದನ್ನು

ಹಿಗ್ಗಿಸಿ, ಇನ್ನೊಂದು ರೂಪಕ್ಕದನ್ನು ತಂದು ಬಳಸುವ ಲೂಟಿ ಜಗತ್ತಿನ ಸಾಹಿತ್ಯದಲ್ಲೆಲ್ಲ ಉಂಟೆಂಬುದನ್ನು ಅವನು ತೋರಿಸುತ್ತಾನೆ. ಹೆಚ್ಚು ಕಡಿಮೆ ಅವರ ಕೃತಿಗಳು ಕಾಣಿಸುವ ಪರಿಸರವನ್ನು ಬಾಲ್ಯದಲ್ಲಿ ಪಡೆದಿದ್ದ ನನಗೆ ಕಾರಂತರಿಂದ ಕಲಿಯುವುದು ಬಹಳ ಇತ್ತು—ಈ ಕಲಿಕೆಯೂ ಅಪ್ರಜ್ಞಾಪೂರ್ವಕವಾದಾಗ ಮಾತ್ರ ಸೃಜನಕ್ರಿಯೆಗೆ ಸಹಾಯ ವಾಗುತ್ತದೆ. ಆದ್ದರಿಂದಲೇ ತಪ್ಪು ಗ್ರಹಿಕೆ, ಫೋಕಸ್ಸಿನ ಬದಲಾವಣೆ, ಅವರಲ್ಲಿ ತೆಳು ಪಾದ್ದನ್ನು ತುಂಬಿ ಸ್ವಂತದ್ದಾಗಿ ಮಾಡಿಕೊಳ್ಳುವ ಹವಣಿಕೆ—ಇವೆಲ್ಲವೂ ದೊಡ್ಡ ಲೇಖಕ ನೊಬ್ಬನಿಂದ ಬೇರೆಯಾಗಿ ನಿಲ್ಲುವುದರಲ್ಲಿ ಕಿರಿಯ ಲೇಖಕನಿಗೆ ಒದಗುವ ಉಪಾಯಗಳು ಎನ್ನಬಹುದು.

ಮೇಲಿನದಕ್ಕೆ ಪೂರಕವಾಗಿ ಇನ್ನಷ್ಟು ಹೇಳುವೆ. ನಾನು ಬೆಳೆದ ಪರಿಸರದಲ್ಲಿ ಕಾರಂತರು ನನ್ನ ಹಿರಿಯರಿಗೆ ಹೇಗೆ ಕಾಣುತ್ತಿದ್ದರೆಂಬುದೂ, ಈ ಹಿರಿಯರ ಲೋಕ ದೃಷ್ಟಿಯಿಂದ ಒಡೆದು ನಿಲ್ಲಲು ಯತ್ನಿಸುತ್ತಿದ್ದ ನನಗೆ ಮುಖ್ಯವಾಗಿರಬೇಕು. ನಮ್ಮ ಅಗ್ರಹಾರದಲ್ಲಿ ಕಥೆ ಪುಸ್ತಕಗಳನ್ನು ಓದುತ್ತಿದ್ದ ಮಠದ ಶಾನುಭೋಗರೊಬ್ಬರು ಇದ್ದರು. ಮೊದಲಿಗೆ ಗಳಗನಾಥ, ವೆಂಕಟಾಚಾರ್ಯರನ್ನು ಓದುತ್ತಿದ್ದ ನನ್ನ ಕೈಗೆ ಕಾರಂತರ ಪುಸ್ತಕವನ್ನು ಕೊಡುವಾಗ ಈ ಹಿರಿಯ ರಸಿಕರು ಮುಗುಳ್ನಗುತ್ತ ಹೇಳಿದ್ದು ನನಗಿನ್ನೂ ನೆನಪಿದೆ. ಅವರು ಹೇಳಿದ ಮಾತುಗಳೇ ಈಗಿಲ್ಲಿ ಬೇಡ. ಕಾರಂತರನ್ನು ಪ್ರತಿಭಾಶಾಲಿಯೆಂದು ಮೆಚ್ಚಿದ ಅವರು, ಆದರೆ ಮಾತ್ರ ಇವರೊಬ್ಬ 'ಹಿಂಡಗಲಿದ ಪುಂಡು ಆನೆ' ಎಂಬಂತೆ ಮಾತಾಡಿದ್ದರು. ನೇಮನಿಷ್ಠೆಗಳಿಲ್ಲದ ಈ ಬ್ರಾಹ್ಮಣ ಲೇಖಕ ಅವರಿಗೆ ಅನನುಸರಣೀಯ ಎನ್ನಿಸಿದ್ದರು. ಅವರು ಕೊಟ್ಟ ಈ ಎಚ್ಚರಿಕೆ ನನ್ನಲ್ಲಿ ಅಪಾರ ಕುತೂಹಲ ಹುಟ್ಟಿಸಿದ್ದು ಮಾತ್ರವಲ್ಲ, ನನ್ನ ಆವರಣದಿಂದ ನಾನು ಬೇರೆಯಾಗುವಂತೆ ಕಾರಂತರು ನನಗೆ ಕಲಿಸುವುದನ್ನೂ ಸಾಧ್ಯ ಮಾಡಿತ್ತು. ಹಿಂದೆ ನಾನು ಓದಿದ್ದ ಮರಳಿ ಮಣ್ಣಿಗೆಯನ್ನು ಮತ್ತೆ ನಾನು ಈಗ ಓದುವಾಗ ನಾಗವೇಣಿ 'ಕಾದಂಬರಿಯ ಕಲ್ಪನಾ ರಾಜ್ಯದಲ್ಲಿ ಶರಣು ಹೋಗುವ' ಸಂದರ್ಭ ಕುತೂಹಲಕರವಾಗಿ ತೋರಿತು. ಅವಳು ಓದುತ್ತಿದ್ದ ಕಾದಂಬರಿಗಳು ಎಂಥವೋ ! ಅಂತೂ ಅವು ಅವಳ ಸುಪ್ತ ಬಯಕೆಗಳನ್ನು ಕೆದರುತ್ತವೆ. ತಾನೀಗ ಗಂಡನಿಲ್ಲದೆ ಒಂಟಿಯಾಗಿ ಬದುಕುವ ಇಪ್ಪತ್ತೈದು ವಯಸ್ಸಿನವಳು ಎಂಬುದರ ಅರಿವಾಗುತ್ತದೆ* (325). ಅವಳಿಗೆ ಪ್ರಾಯಶಃ ಓದಲು ಸಿಗುತ್ತಿದ್ದುದು ರಂಜಕ ಕಥೆಗಳೇ ಇರಬಹುದು. ಅಂಥ ಕಥೆಗಳ ನಂತರವೇ ನನ್ನ ಪಾರಿಗೆಯವರೆಲ್ಲ ಕಾರಂತರನ್ನು ತಲ್ಪಿದ್ದು ಎನ್ನ ಬಹುದು. ಕಾರಂತರ ನಂತರ ಅ.ನ.ಕೃ.ಗೆ ಕೊಂಚ ಕಾಲವಾದರೂ ಪರವಶರಾಗಿದ್ದು ಅನಂತರ ಅಲ್ಲಿಂದ ಬಿಡುಗಡೆಯನ್ನು ನಮ್ಮಲ್ಲಿ ಹಲವರು ಪಡೆದದ್ದು.

---

* ಪುಟಸಂಖ್ಯೆಗಳು ಮರಳಿ ಮಣ್ಣಿಗೆ ಕಾದಂಬರಿಯವು.

ನಾನು ನಿತ್ಯ ನೋಡುತ್ತಿದ್ದುದನ್ನು ಕಾರಂತರ ಕೃತಿಗಳು ಕಾಂತಿಯುಕ್ತವಾಗಿ ಮಾಡಿ ಇನ್ನೊಂದು ಬಗೆಯಲ್ಲಿ ನೋಡುವಂತೆ ಮಾಡಿದುವು. ಅಗ್ರಹಾರದ ಪರಿಸರ ದಲ್ಲಿ ನನ್ನ ಬಾಲ್ಯವನ್ನು ನನ್ನ ಹದಿನಾರು ತುಂಬುವ ತನಕ ಕಳೆದ ನನಗಂತೂ ಮರಳಿ ಮಣ್ಣಿಗೆ, ಬೆಟ್ಟದ ಜೀವ, ಚೋಮನ ದುಡಿಗಳು, ಕ್ರಾಂತಿಕಾರಕ ಕೃತಿಗಳಾದವು. ಚೋಮನದುಡಿ, ಅಸ್ಪೃಶ್ಯತೆಯ ಬಗ್ಗೆ ಮಡಿವಂತ ಪರಿಸರದಲ್ಲಿ ಬೆಳೆದ ನನ್ನ ದೃಷ್ಟಿ ಯನ್ನೇ ಬದಲು ಮಾಡಿಬಿಟ್ಟಿತು. ಪ್ರಾಯಃ ಈ ದಿಸೆಯಲ್ಲಿ ಕನ್ನಡ ಕಾದಂಬರಿ ಲೋಕ ದಲ್ಲಿ ಇದೊಂದು ಅಪೂರ್ವಕೃತಿ. ಕಾರಂತರ ಬ್ರಾಹ್ಮಣ ಪಾತ್ರಗಳು ಆ ವರ್ಗದ ಎಲ್ಲರಿಗೂ ಸಾಮಾನ್ಯವಾದ ಲಕ್ಷಣಗಳನ್ನು ಪಡೆದವಾಗಿ ಪ್ರಾತಿನಿಧಿಕವಾದರೆ. ಚೋಮ ಮಾತ್ರ ಅಸಾಧಾರಣ ಭಾವ ತುಮುಲಗಳನ್ನು ಪಡೆದ, ನಾನು ಆಗ ಕಂಡ ಯಾವ ಅಸ್ಪೃಶ್ಯನಂತೆಯೂ ಇಲ್ಲದ, ಅಸಾಮಾನ್ಯನಾದ್ದರಿಂದಲೇ ಪಂಚಮ ರೆಲ್ಲರಲ್ಲಿ ಸುಪ್ತವಾದದ್ದನ್ನು ಪ್ರತಿನಿಧಿಸಬಲ್ಲ ಪಾತ್ರವಾಗುತ್ತಾನೆ. ಕಾರಂತರು ಈ ಪಾತ್ರ ರಚನೆಯಲ್ಲಿ ಬಳಸುವ ಕೃತಿ ನಿರ್ಮಾಣದ ಬಗೆ—ಅಂದರೆ ಪ್ರಕಟವಾಗಬೇಕಾದ ಸತ್ಯಕ್ಕಾಗಿ ವಾಸ್ತವದ ಮೂಲಾಂಶಗಳನ್ನು ಮಾತ್ರ ಹಿಡಿದು ಉತ್ಕಟಗೊಳಿಸುವ ಬಗೆ—ನನ್ನ ಬರವಣಿಗೆಗೆ ಮುಖ್ಯ ಪ್ರೇರಣೆಕೊಟ್ಟ ಕೃತಿಯಾಗಿರಬಹುದು. ಜೀವನ ವನ್ನು ದಟ್ಟ ವಿವರಗಳಲ್ಲಿ ಹಿಡಿಯುವುದೊಂದು ಬಗೆಯಾದರೆ, ಚೋಮನ ದುಡಿಯದು ರೂಪಕ ಪ್ರತಿಭೆಯ ದಿಟ್ಟನೆಗೆತದ ಇನ್ನೊಂದು ಕ್ರಮ. ವಿಶೇಷವಾದ್ದರ ಮುಖಾಂತರ ಪ್ರಕಟವಾದ್ದನ್ನೂ ಸುಪ್ತವಾದ್ದನ್ನೂ ಒಟ್ಟಿಗೇ ಧ್ವನಿಸಬಹುದೆಂದೂ, ಒಂದರ ಮುಖಾಂತರ ಹಲವನ್ನು ಒಳಗೊಳ್ಳಲು ಇಂಥ ವಿಶೇಷ ಪಾತ್ರರಚನೆ ಅಗತ್ಯವೆಂಬು ದನ್ನೂ ಚೋಮನ ದುಡಿಯಲ್ಲಿ ನಾನು ಕಂಡುಕೊಂಡೆ. ಚೋಮ, ನಾವು ಕಂಡಿರಬಹು ದಾದ ಯಾವ ಒಬ್ಬ ಅಸ್ಪೃಶ್ಯನಲ್ಲದಿದ್ದರೂ, ಎಲ್ಲ ಕಾಲದ ಎಲ್ಲ ದೇಶದ ದಲಿತನ ನೋವನ್ನು ಪ್ರಕಟಿಸಬಲ್ಲವನಾಗುತ್ತಾನೆ—ಯಾಕೆಂದರೆ ಅವನು ವಿಶೇಷ ವ್ಯಕ್ತಿ ಯಾದ್ದರಿಂದ. ಸಂಸ್ಕಾರದ ಪ್ರಾಣೇಶಾಚಾರ್ಯ, 'ಪ್ರಕೃತಿ'ಯ ಸಂಕಪ್ಪಯ್ಯ 'ಮೌನಿ'ಯ ಕುಪ್ಪಣ್ಣಭಟ್ಟರಂಥವರ ಸೃಷ್ಟಿಯಲ್ಲಿ ಇಂಥ ಒಂದು ಉದ್ದೇಶ—ಎಷ್ಟು ಯಶಸ್ವಿಯಾಗಿದೆಯೋ ತಿಳಿಯದು—ಕೆಲಸ ಮಾಡಿದೆಯೆಂದು ನಾನು ತಿಳಿದಿದ್ದೇನೆ. ಇಂಥಲ್ಲಿ ಕಣ್ಣಿಗೆ ಕಾಣುವ ಪರಿಚಿತ ವಾಸ್ತವವನ್ನು ಭೇದಿಸಿ ಅದರ ಒಳತಿರುಳನ್ನು ತಿಳಿಯಲೆಂದು ಕಲ್ಪನೆ ವಾಸ್ತವದ ಜೊತೆ ಸ್ವಾತಂತ್ರ್ಯದಿಂದ ವರ್ತಿಸುತ್ತದೆ. ಚೋಮನ ಕೈಯಲ್ಲಿ ಕಾರಂತರು ಪಿಟೀಲನ್ನು ಕೊಡಲಾರರು—ಅಷ್ಟರ ಮಟ್ಟಿಗೆ ವಾಸ್ತವವನ್ನು ಅವರು ಮೀರಲಾರರು. ಆದರೆ ಮುಖದ ಕಾಂತಿಯನ್ನು ಹಿಡಿಯಲೆಂದು ರೇಖಾ ಚಿತ್ರಕಾರ ಮುಖವನ್ನು ಕೊಂಚ ಸೊಟ್ಟಗೋ ಚೂಪಾಗಿಯೋ ಮಾಡಿಯಾನು. ವಾಲೇಸ್ ಸ್ಟೀವನ್ಸಿನ ಪದ್ಯ ಒಂದರಲ್ಲಿ ಆಗುವಂತೆ ಅಡ್ಡಾದಿಡ್ಡಿಯಾಗಿ ಬೆಳೆದ ಕಾನನದ ನಡುವಿರುವ ಬೆಟ್ಟದ ಮೇಲೊಂದು ಜಾರನ್ನು ಇಟ್ಟದ್ದೇ, ಆ ಜಾರಿನ ಸುತ್ತ

ಬೆಟ್ಟವೂ, ಬೆಟ್ಟದ ಸುತ್ತ ಕಾಡು ಪೊದೆಗಳೂ ರೂಪಧಾರಣೆ ಮಾಡುತ್ತವೆ. ಆದರೆ ಜಾರ್ ಕೃತಕ. ಪೊದೆಗಳಿಗೆ ರೂಪಕೊಟ್ಟ ಅದು ಕುರುಚಲು ಪೊದೆಯಂತೆ ಹಕ್ಕಿಗಳನ್ನು ಹುದುಗಿಸಿಟ್ಟುಕೊಂಡಿಲ್ಲ.

ವಾಸ್ತವಕ್ಕೆ ತನ್ನ ಸ್ವಧರ್ಮದಿಂದಲೇ ಗಂಟುಬಿದ್ದ ಕಾದಂಬರಿ ಪ್ರಕಾರ ಒಂದು ದೃಷ್ಟಿಯಿಂದ ಪತ್ರಿಕಾ ವ್ಯವಸಾಯ ಮತ್ತು ಕಾವ್ಯಗಳಿಗೆ ಹುಟ್ಟಿದ ಹಡಬೆ; ಆದರೂ ಅದು ಅಡ್ಡಾದಿಡ್ಡಿ ಬೆಳೆದ ಪೊದೆಗಳ ನಡುವೆ ಎಲ್ಲಿಡಬೇಕೊ ಅಲ್ಲೊಂದು ಜಾರನ್ನು ಇಟ್ಟು ನಮ್ಮ ಅರಿವನ್ನು ಬದಲಾಯಿಸುತ್ತದೆ. ಎಲ್ಲ ಅರಿವಿನಲ್ಲೂ ಕಂಡದ್ದರ ಆಚೆಗಿನ ನೆಗೆತವಿದ್ದೇ ಇದೆ. ಜೀವನದಂತೆಯೇ ಇದೆ ಎನ್ನಿಸುವ, ಎಲ್ಲೆಂದರಲ್ಲಿ ಬೆಳೆಯುತ್ತ ಹೋದ ಸಹಜ ವ್ಯಾಪಾರವೆನ್ನಿಸುವ ಮರಳಿ ಮಣ್ಣಿಗೆಯಲ್ಲೂ ಡಿಸೈನ್ ಇದೆ. ಮತ್ತೆ ಮತ್ತೆ ಯಾಕೆ ಮದುವೆಗಳ ವರ್ಣನೆ ಬರಬೇಕು ಎಂಬ ಡಿ.ಎಲ್.ಎನ್. ಪ್ರಶ್ನೆಗೆ ಉತ್ತರ ಕೊಡುವಾಗ ಗಿರಡ್ಡಿ ಗೋವಿಂದರಾಜರು ಇದನ್ನು ಸಮರ್ಥವಾಗಿ ತೋರಿಸಿದ್ದಾರೆ (ನೋಡಿ: ಕಾರಂತ ಪ್ರಪಂಚ). ಇಂಥ ಡಿಸೈನನ್ನು ಕಾಣುವಂತೆ ನಮ್ಮನ್ನು ಪ್ರೇರೇಪಿಸುವ ಶಕ್ತಿಯನ್ನು ಮರಳಿ ಮಣ್ಣಿಗೆ ಪಡೆಯುವುದು ಕೂಡ ಕಾರಂತರು ತಾವು ಮೆಚ್ಚುವ ಮುದುಕಿಯರಿಗೆ ಇಚ್ಛಾಮರಣದಂಥ ಅಪೂರ್ವ ಸಾವನ್ನು ಕೊಡುವ ಧೈರ್ಯ ಮಾಡಿದಾಗ; ರಾಮ ಮತ್ತು ನಾಗವೇಣಿಯರ ಕೈಯಲ್ಲಿ ಪಿಟೀಲು ಕೊಟ್ಟು ಕಡಲೆದುರು ಅವರನ್ನು ಕೂರಿಸಿದಾಗ; ಅಥವಾ ಬಣ್ಣದ ಚಾಪೆಯ ಮೇಲೆ ಕೂತು ಮರು ಮದುವೆಯಾದ ಐತಾಳ ಬಿಲ್ವಪತ್ರೆಯ ನಸ್ಯದ ಡಬ್ಬಿಯ ಬದಲು ಬೆಳ್ಳಿಕಟ್ಟಿದ ಬುರುಡೆಯನ್ನು ಮಯ್ಯನಿಗೆ ಒಡ್ಡಿ ಅವನಿಗೆ ಆ ಘಟನೆಯೊಂದು ಕನಸಿನಲ್ಲೂ ಕಾಡುವ ಗೀಳಾಗುವಂತೆ ಮಾಡಿದಾಗ; ಅಥವಾ ಸರಸೋತಿ ಕಾಡಿನಿಂದ ಉಪ್ಪಿನ ಕಾಯಿಗೆ ಮಾವಿನ ಮಿಡಿ ತರುವಾಗ, ಉಬ್ಬರವಿಲ್ಲದ ಜೀವನದ ನಿರಂತರ ದೈನಿಕದ ಚಿತ್ರಕೂಡ ಇಂಥ ಉತ್ಕಟ ಕ್ಷಣಗಳನ್ನು ಬೇಡುತ್ತದೆ. ನಾವು ಓದಲೆಂದು ಪುಸ್ತಕವನ್ನೆತ್ತಿಕೊಳ್ಳುವುದೇ ಇಲ್ಲಿ, ಏನೋ ಆಗುತ್ತದೆಯೆಂಬ ನಿರೀಕ್ಷೆಯಲ್ಲಿ ಅಲ್ಲವೆ? ಅಂದರೆ, ಓದುವುದು ಕೂಡ ಬದುಕಲು ಹೊರಟಂತೆಯೇ.

ಕೃತಿಗೆ ತತ್ತ್ವವನ್ನು ಹುಟ್ಟುಹಾಕುವ ಸಾಮರ್ಥ್ಯವಾಗಲೀ, ನಮ್ಮ ಅರಿವನ್ನು ಹಿಗ್ಗಿಸುವ ಕಾಂತಿಯಾಗಲೀ ಬರುವುದು, ಹಳೆ ಒಡಂಬಡಿಕೆ, ಮಹಾಭಾರತಗಳಲ್ಲಿಯಂತೆ, ರೂಪಕ ಪ್ರತಿಭೆ ಕಥನ ಕ್ರಿಯೆಯನ್ನೇ ಚಿಂತನಾಕ್ರಿಯೆಯನ್ನಾಗಿಯೂ ಮಾಡಬಲ್ಲ ಪುನರ್‌ಸೃಷ್ಟಿಯ ಬೀಸಿನಲ್ಲಿ ಕೆಲಸ ಮಾಡಿದಾಗ. ಇಂಥದಕ್ಕೆ ಕಾರಂತರು ಹಿಂಜರಿಯುತ್ತಲೇ ಮುಂದುವರಿಯುತ್ತಾರೆಂಬುದು ಅವರ ಕೃತಿಗಳಲ್ಲಿರುವ ಆಕರ್ಷಕ ಅಂಶ. ಅವರ ಈ ಹಿಂಜರಿತದ ಬಗ್ಗೆ ನಾನೀಗಾಗಲೆ 'ಕಾರಂತರ ಅಥೆಂಟಿಕ್ ಪ್ರಪಂಚ'ವೆಂಬ ನನ್ನ ಲೇಖನವೊಂದರಲ್ಲಿ ಬರೆದಿದ್ದೇನೆ. ಸ್ವತಃ ಒಬ್ಬ ಕೃತಿಕಾರನಾಗಿ ಬರೆದ ಲೇಖನ ಅದೆಂದು ನಾನು ಆಗ ಪ್ರತ್ಯಕ್ಷವಾಗಿ ಒಪ್ಪಿಕೊಂಡು ಹೊರಟಿದ್ದರೆ ನನ್ನ

ನಿಲುವು ಇನ್ನಷ್ಟು ಸ್ಪಷ್ಟವಾಗುತ್ತಿತ್ತು. ನಾನು ಎಲ್ಲಿ ಬೇರೆಯಾಗಲು ಹವಣಿಸುತ್ತಿದ್ದೇನೆಂಬ ವಿಚಾರ ಆ ಲೇಖನದಲ್ಲಿ ಪರೋಕ್ಷವಾಗಿ ಸೇರಿಕೊಂಡದ್ದು ಕಾಣದೆ ಅದೊಂದು ಖಚಿರಾ ವಸ್ತುನಿಷ್ಠ ವಿಶ್ಲೇಷಣೆಯೆಂಬ ಭ್ರಮೆಯನ್ನುಂಟುಮಾಡಬಹುದು. ಆದರೆ ಈಗ ಬರೆಯುತ್ತಿರುವುದರಲ್ಲಿ ನಾನು ಸಂಕೋಚವಿಲ್ಲದೆ ನನ್ನನ್ನೂ ಎದುರಿಟ್ಟುಕೊಂಡಿರುವುದರಿಂದ ಕಾರಂತರನ್ನು ನಾನು ನೋಡುವ ದೃಷ್ಟಿಕೋನದಲ್ಲಿ ವಸ್ತು ನಿಷ್ಠತೆಯ ದರ್ಪವಿರುವುದಿಲ್ಲೆಂದು ಭಾವಿಸುವೆ.

ಒಟ್ಟಿನಲ್ಲಿ ಎಲ್ಲ ಕಲಾಕೃತಿಯ ಹಿಂದಿರುವ ಪ್ರಶ್ನೆ ನೆಗೆತದ್ದೇ. ಆದರೆ 'ಕಾಣ್ಕೆ ಕಣ್ಕಟ್ಟುಗಳ ನಡುವೆ ಗೆರೆ ಬಲುತೆಳುವು'. ಆದ್ದರಿಂದ ಇದು ಪರಿಚಿತದ ಅಂಚಿನಲ್ಲಿ ನಿಂತು ನಿಜವಾಗಿ ನೆಗೆದದ್ದೋ, ಅಥವಾ ನಿಂತಲ್ಲೇ ನಿಂತು ನೆಗೆದಾಡುತ್ತಿರುವ ಭ್ರಮೆಯೋ ಎಂಬುದು ಸಾಹಿತ್ಯ ವಿಮರ್ಶೆಯ ಅತ್ಯಂತ ಕ್ಲಿಷ್ಟ ಪ್ರಶ್ನೆಯಾಗಿರುತ್ತದೆ. ಗ್ರಹಿಸುವ ಮನಸ್ಸು ಎಷ್ಟನ್ನು ಕೂಡಿಸುತ್ತ 'ಅಹುದು', 'ಅಹುದು', ಎನ್ನಿಸುತ್ತ 'ಅಹುದೆ?', ಎಂಬ ವಿಸ್ಮಯಕ್ಕೆ ಸದಾ ಸನ್ನಾಹ ಮಾಡುತ್ತ ಚಲಿಸುತ್ತಿದೆಯೆ ಎಂಬುದಕ್ಕೆ ಸಂಬಂಧಿಸಿದ್ದು ಇದು. ದುಡಿಮೆಯ ಜೀವನದ ನಿಷ್ಠುರ ಅನಿವಾರ್ಯತೆಗಳ ಬಗ್ಗೆ, ಎಂಥ ಇಕ್ಕಟ್ಟಿನಲ್ಲೂ ಅರಳುವ ಬಾಳಿನ ಹಂಬಲದ ಬಗ್ಗೆ, ಸ್ವಾತಂತ್ರ್ಯ–ಸ್ವೈರಗಳ ನೈತಿಕ ಅಂತರದ ಬಗ್ಗೆ, ಮಾನವರ ಪರಸ್ಪರ ಸಂಬಂಧ ಹೇಗೋ, ಹಾಗೆಯೇ ಅವರು ನೆಚ್ಚಿದ ದೈವದ ಜೊತೆಗಿನ ಸಂಬಂಧದ ಬಗ್ಗೆ ಮರಳಿ ಮಣ್ಣಿಗೆ ಹೊಸೆಯುತ್ತ ಹೋಗುವ ಹೆಣಿಗೆಯನ್ನು ಕಾದಂಬರಿಯ ಯಾವ ಸಾಮಾನ್ಯ ವಾಕ್ಯದಲ್ಲಾದರೂ ಕಾಣಬಹುದು. ನೋಡಿ, ಇದೊಂದು ಸಾಮಾನ್ಯ ವಾಕ್ಯ: 'ನವರಾತ್ರಿಯ ಹೊಸತು ಊಟಕ್ಕೆ, ಪರರ ಮನೆಯ ಭತ್ತವನ್ನು ತಂದು, ಸುಲಿದು, ಹಾಲು ಪಾಯಸ ಮಾಡುವ ಗತಿ ಬರಲಿಲ್ಲ". (246) ಈ ವಾಕ್ಯದಲ್ಲಿ ಕಾದಂಬರಿಯ ಪಾತ್ರಗಳು ಆರ್ಥಿಕ ಸ್ವಾವಲಂಬನೆಯ ವಿಷಯದಲ್ಲಿ, ಧಾರ್ಮಿಕ ಆಚರಣೆಯ ವಿಷಯದಲ್ಲಿ ಯಾವ ಧೋರಣೆ ತಾಳಿದ್ದಾರೆಂಬುದು, ಋತುವಿನಿಂದ ಋತುವಿಗೆ ಪುನರಾವೃತ್ತವಾಗುವ ಕಾಲದಲ್ಲಿ ಅವರು ಹೇಗೆ ಬದುಕಿ ಹೊಂದಿಕೊಳ್ಳಲು ಅಪೇಕ್ಷಿಸುತ್ತಾರೆಂಬುದು ಸದ್ದಿಲ್ಲದಂತೆ ಧ್ವನಿತವಾಗುತ್ತದೆ. ಹಲವರು ಈಗಾಗಲೇ ಗಮನಿಸಿರುವಂತೆ ಕಷ್ಟದ ದುಡಿಮೆಯ ಅನಿವಾರ್ಯತೆಯೇ ಕಾದಂಬರಿಯ ಪಾತ್ರಗಳ ಉಲ್ಲಾಸ ದುಃಖಗಳಿಗೆ, ಒಡಮೂಡುವ ಪರಸ್ಪರ ಸಂಬಂಧಗಳಿಗೆ ಶೃತಿ ಹಿಡಿಯುತ್ತದೆ. ನಾಗವೇಣಿ ಆಗಿ ಹೋದ ಕಾಲಗಳ ಗಣನೆ ಮಾಡುವದನ್ನು ನೋಡಿ: "ಕಾರು ತಿಂಗಳಿಗೆ ಬತ್ತದ ಬೇಸಾಯ, ಮುಂದೆ ಕೋಡಿ ತಿಂಗಳಲ್ಲಿ ಹುರುಳಿ ಬೇಸಾಯ, ಮಕರ ಸಂಕ್ರಾಂತಿಗೆ ಸೌತೆಯ ಹಿತ್ತಲು – ಇವನ್ನೆಲ್ಲ' ಎಣಿಸಿದಳು. 'ನಡುನಡುವೆ ಕೊರಳಿಗೆ ತಾಳಿ ಬಿದ್ದು, ಇಷ್ಟು ಕಾಲವಾಯಿತು, ಅವರ ಮುಖ ಕಾಣದೆ ಇಷ್ಟು ವರ್ಷವಾಯಿತು ಪುಟ್ಟು ಕೈ ಬಿಟ್ಟು ಇಷ್ಟು ದಿನವಾಯಿತು' ಎನ್ನುತ್ತಾಳೆ. ಅವಳ ಪಾಲಿಗೆ ಸರಸೋತಿಯೇ ಈಗೊಂದು ಕೂಸಿನಂತಾ

ಗಿದ್ದಾಳೆ (250). ದುಡಿಮೆಗೆ ಕರೆಯುವ ನಿರಂತರವಾದ ಋತುಗಳು, ಜೀವನ ತರುವ ದುಃಖ, ವಿಫಲವಾದ ಆಸೆ, ಇಂಥಲ್ಲೂ ಮೂಡುವ ಸಾಫಲ್ಯ,—ಈ ಎಲ್ಲವೂ ಮೇಲಿನ ಮಾತುಗಳಲ್ಲಿ ಸಾಕಾರವಾಗಿವೆ.

ಬದುಕೆಂದರೆ ಅದು ಎಷ್ಟು ಇಕ್ಕಟ್ಟಿನದು, ಎಷ್ಟು ಸ್ವಾತಂತ್ರ್ಯ ಪಡೆದದ್ದು—ತತ್ತ್ವಜ್ಞಾನಿಗಳ ಸಮಸ್ಯೆಯಾದ ಈ necessity and Freedom ಮರಳಿ ಮಣ್ಣಿಗೆಯಲ್ಲಿ ಉದ್ದಕ್ಕೂ ವಾಕ್ಯ ವಾಕ್ಯದಲ್ಲೂ ಹೆಣೆಯುತ್ತ ಹೋಗುವ ಧ್ಯಾನವಾಗಿದೆ. ಋಣವಿಲ್ಲದೇ ಬದುಕಬೇಕೆಂಬ ನಿರಂತರ ಕಷ್ಟದ ದುಡಿಮೆಯಲ್ಲೇ ಸ್ವಾವಲಂಬನೆಯ ಹಠದ ಸ್ವಾತಂತ್ರ್ಯದ ಕಲ್ಪನೆಯಿದೆ. ಈ ಹಠವಿಲ್ಲದಿದ್ದಾಗ ಲಚ್ಚನ ಸ್ವಾತಂತ್ರ್ಯದ ಅಪೇಕ್ಷೆ ಸ್ವೈರವಾಗಿ ಬಿಡುತ್ತದೆ. ಬೇಸಾಯ ಜೀವನದ ಕ್ರೂರ ವಾಸ್ತವಗಳನ್ನು ಒಪ್ಪಿಕೊಳ್ಳದ, ಹಳ್ಳಿ, ಜೀವನವೆಂದರೆ ಬೇಸರ ಪಡುವ ಲಚ್ಚ, ಲಾಲಸ ಪ್ರವೃತ್ತಿಯವನಾಗುತ್ತಾನೆ. ಅವನನ್ನು ಹಾಗಾಗುವಂತೆ ಮಾಡುವುದು ಕಾದಂಬರಿಯ ಉಳಿದ ಪಾತ್ರಗಳಲ್ಲಿ—ಮುಖ್ಯವಾಗಿ ತಂದೆ ರಾಮ ಐತಾಳನಲ್ಲೂ–ಇರುವ ಕಷ್ಟದ ದುಡಿಮೆಯಿಂದ ಬಿಡುಗಡೆ ಪಡೆಯುವ ಹಂಬಲವೆಂಬುದೂ ಕಾದಂಬರಿಯ ನೈತಿಕ ಪ್ರಜ್ಞೆಗೊಂದು ಸೂಕ್ಷ್ಮವನ್ನು ತರುತ್ತದೆ. ಲಚ್ಚನಿಗೆ ಯಾಕೆ ಇಂಗ್ಲೀಷ್ ಕಲಿಸಬೇಕೆಂಬ ಬಗ್ಗೆ ಐತಾಳ ಸರಸೋತಿಗೆ ಹೇಳುವುದನ್ನು ಕೇಳಿ: "ಇನ್ನಿನ್ನು ಈ ಯಕ್ಷಗಾನ ತಾಳ ಮದ್ದಲೆಯಿಂದ ಮಕ್ಕಳ ಆಯುಷ್ಯ ಸಾಗಲಿಕ್ಕಿಲ್ಲ. ನೋಡು—ನಾನು ವೈದಿಕನಾಗಿ ನನಗೆ ಸಿಗುವ ಮಾನ ಎಷ್ಟೆಂದು ನಿನಗೆ ಗೊತ್ತಿದೆ. ಹೋಟೆಲಿನಲ್ಲಿ ನಾಲ್ಕು ಕಾಸು ಸಂಪಾದನೆಗೆ ದಾರಿಯಾದುದರಿಂದ ಶೀನಮಯ್ಯನಿಗೆ ಬರುವ ಮಾನ ಎಷ್ಟೆಂಬುದೂ ನಿನಗೆ ಗೊತ್ತಿದೆ" (147). ಐತಾಳರ ಎರಡನೇ ಸಂಬಂಧದ ಮಾವ ಹೇಳುವುದೂ ಅದೇ: "ಇನ್ನೇನು ಈಗಿನ ದಿನಗಳಲ್ಲಿ ಇಂಗ್ಲಿಷ್ ನಾಲ್ಕು ಅಕ್ಷರವಾದರೂ ಬರುವವರಿಗೆ ಭರಾಮು, ಈ ಅಷ್ಟೋತ್ತರ, ಅಧ್ಯಯನ ಕಲಿತವರಿಗೆ ಬರಲಾರದು" (149). ಐತಾಳರಿಗೂ ಲಚ್ಚ ತನ್ನಂತೆ ವೈದಿಕನಾಗುವುದು ಬೇಡ, ಲೌಕಿಕನಾಗಬೇಕು ಎಂಬ ಹಂಬಲದಲ್ಲೆ ಬದಲಾಗುತ್ತಿರುವ ಕಾಲದ ಪ್ರಭಾವವಿದೆ. ಲೌಕಿಕ ಶೀನಮಯ್ಯ ಮಯ್ಯರಾದದ್ದನ್ನು ಐತಾಳ ನೋಡಿದ್ದಾನೆ. ಊರಿನ ಗುರಿಕಾರರಿಂದ ಮದುವೆ ಮನೆಯಲ್ಲಿ ಅವಮಾನಿತನಾದ ಐತಾಳ "ಅಂತು ಊರಿನ ಗುರಿಕಾರರ ಕೈಯಲ್ಲಿ ಇದೊಂದು ಶ್ರಾದ್ಧದ ಬ್ರಾಹ್ಮಣ ಅನಿಸಿಕೊಳ್ಳದಿದ್ದರೆ ಸಾಕು" ಎಂದು ಆಸೆ ಪಡುತ್ತಾನೆ (153). ನಿಷ್ಠುರ ದುಡಿಮೆಯಿಂದ ನಿವೃತ್ತನಾಗುವ ಅಪೇಕ್ಷೆ ಲಚ್ಚನನ್ನು ಹಿಂಡಗಲಿದ ಪುಂಡನನ್ನಾಗಿ ಮಾಡುತ್ತದೆ. ಸ್ವತಃ ಕಾರಂತರೇ ಲೇಖಕರಾದದ್ದೂ ಹಳ್ಳಿಯ ವಿರಾಮವಿಲ್ಲದ ದುಡಿಮೆಯ ಬದುಕಿನ ಅನಿವಾರ್ಯತೆಗಳಿಂದ ಮುಕ್ತರಾದದ್ದರಿಂದಲೂ ಇರಬಹುದು ಎಂಬುದನ್ನು ನೆನೆದಾಗ ಈ ದಿಕ್ಕಿನಲ್ಲಿ ಲೇಖಕರು ತೋರಿಸುವ ದ್ವಂದ್ವಗಳು ಅರ್ಥಪೂರ್ಣವಾಗುತ್ತವೆ. ಕನ್ನಡದ ಯಾವ ಲೇಖಕ, ತನ್ನ ವೈಚಾರಿ

ಕತೆಯಲ್ಲಿ ಬದಲಾವಣೆ ಮತ್ತು ಪ್ರಗತಿಯ ಬೆಂಬಲಿಗನಾಗಿದ್ದರೂ ಸಹ, ತನ್ನ ಕಲಾ ಕೃತಿಯಲ್ಲಿ ಬದಲಾವಣೆ ಬಗ್ಗೆ ನಿಸ್ಸಂದಿಗ್ಧ ಧೋರಣೆ ತಾಳಿದ್ದಾನೆ?

ಅಜ್ಜನ ಕಾಲದಲ್ಲಿ ವೈದಿಕರಾಗಿದ್ದವರ ಮನೆಯಲ್ಲಿ ಹುಟ್ಟಿ, ಕ್ರಾಪು ಜುಟ್ಟುಗಳ ಸಂದಿಗ್ಧದಲ್ಲಿದ್ದ ತಂದೆಯನ್ನು ಪಡೆದು, ಆಧುನಿಕ ವಿದ್ಯಾಭ್ಯಾಸಕ್ಕೆ ಹಾತೊರೆದ ನನ್ನಂಥವರಿಗೆ ಲಚ್ಚನ ಪಾತ್ರ ನಮ್ಮಂಥವರೆಲ್ಲರ ಆಮಿಷಗಳನ್ನೂ, ಹಿಂಡಗಲುವ ದಿಗಿಲುಗಳನ್ನೂ, ಹಳ್ಳಿ ಜೀವನ ಕ್ರಮದ ಬಗೆಗಿನ ಬೇಸರ ಮತ್ತು ಮಮತೆಗಳನ್ನೂ ಧ್ವನಿಸಬಲ್ಲುದಾಗಿತ್ತು. ಹೀಗೆ ಅವನೊಬ್ಬ ಆರ್ಕಿಟೈಪ್ ಆಗಿ ಬಿಟ್ಟಿದ್ದಾನೆ—ಕನ್ನಡದಲ್ಲಿ. ಅವನ ಅವನತಿಯ ಹಂತಗಳೂ ಸಹ ಕುತೂಹಲಕರವಾಗಿವೆ: ಶುರುವಿನಲ್ಲಿ ಪೇಟೆಯ ಕಾಫಿ ತಿಂಡಿಯ ಚಟ, ಮತ್ತೆ ಇಸ್ಪೀಟಿನ ಚಟ, ಆಮೇಲೆ ಸಾಲ, ಹಿರಿಯರಂತೆ ಬೇಗ ಮದುವೆಯಾಗದ್ದರಿಂದ ಹುಟ್ಟುವ ಹೆಣ್ಣಿನ ಚಟ, ಆಮೇಲೆ ಅಧಿಕಾರದಲ್ಲಿ ಲಂಚ ಕೋರತನ, ಹಿರಿಯರ ಬಗ್ಗೆ ಅನಾದರ, ಹೊಸ ಹಳೆಯದರ ಅಪಕ್ವ ಬೆರಕೆಯಿಂದ ಹುಟ್ಟುವ ಭಾವ ಜೀವನದ ಅಸ್ಥಿರತೆ, ಇವೆಲ್ಲ ಕೂಡಿ ಅವನು ತಲ್ಪುವ ಸ್ವಾಭಿಮಾನ ವಿಲ್ಲದ ಪರಾವಲಂಬನೆ—ಹೇಗೆ ಇಂಗ್ಲಿಷ್ ವಿದ್ಯಾಭ್ಯಾಸದಿಂದಾಗಿ ಪ್ರಾರಂಭವಾದ್ದು ಹೇಗೆ ಕೊನೆಯಾಗುತ್ತದೆಂಬುದು, ಅವನ ಮಗ ರಾಮನಲ್ಲಿ ಹೀಗಾಗದೇ ಇರುವುದು ನಿಯಮಕ್ಕೊಂದು ವಿನಾಯಿತಿಯಂತೆ ಮಾತ್ರ ತೋರುತ್ತದೆಂಬುದು ಅತ್ಯಂತ ಗಮ ನಾರ್ಹ. ಬದಲಾವಣೆಯನ್ನು ಬೆಂಬಲಿಸುವ ಕಾರಂತರಿಂದ ಬದಲಾವಣೆ ಬಗ್ಗೆ ಈ ಒಳನೋಟ ಹುಟ್ಟಿದೆಯೆಂಬುದು ನಾನೀಗ ನನ್ನ ಉದ್ದೇಶಕ್ಕಾಗಿ ಕಾಣಿಸುತ್ತಿರುವುದ ಕ್ಕಿಂತಲೂ ಹೆಚ್ಚಿನ ಅಭ್ಯಾಸಕ್ಕೆ ಅರ್ಹವಾದ ಸಂಗತಿ. ಮುಂದೆ ಸ್ವಾತಂತ್ರ್ಯ ಚಳವಳಿ ಯಲ್ಲಿ ಜೈಲಿಗೆ ಹೋಗಿ ಬಂದ, ತಂದೆಯಂತೆಯೇ ಇಂಗ್ಲಿಷ್ ಕಲಿತ ಅಜ್ಜನ ವೃತ್ತಿ ಯಿಂದ ದೂರನಾದ ರಾಮ ಮಾತ್ರ ತನ್ನ ಪರಿಸರದಿಂದ ಭಿನ್ನನಾಗಿದ್ದೂ ತನ್ನ ಜನ ರನ್ನು ಅಭಿಮಾನ ಗೌರವಗಳಿಂದಲೂ ತುಸು ಹಾಸ್ಯದಿಂದಲೂ ಕಾಣಬಲ್ಲವನಾಗು ತ್ತಾನೆ. ಆದರೆ ಅವನ ಸಾಧನೆ ಪ್ರಾತಿನಿಧಿಕವಲ್ಲ; ವೈಯಕ್ತಿಕ. ಜೊತೆಗೇ ರಾಮನ ಕಥೆ, ಎಂಜಿಕೆ ಹೇಳುವಂತೆ wish fulfilment ಎಂದೂ ಅನ್ನಿಸುತ್ತದೆ.

ಎಲ್ಲ ಮೌಲ್ಯಗಳನ್ನೂ ದುಡಿಮೆಯ ನಿಷ್ಠುರ ಅನಿವಾರ್ಯತೆಯಲ್ಲಿ ಹುಟ್ಟುವು ದೆಂದು ಕಾಣುವ ಕಾರಂತರು ವಿರಾಮದ ಇತ್ಯಾತ್ಮಕ ಅಂಶವಾಗಿ ರಾಮ ಮತ್ತು ನಾಗವೇಣಿಯರನ್ನು ಕಡಲೆದುರು ಪಿಟೀಲು ಕೊಟ್ಟು ಕೂರಿಸುತ್ತಾರೆ. ಬೇಸಾಯದ ದುಡಿಮೆ ವಿರಾಮವಿಲ್ಲದ್ದು; ಮನಸ್ಸಿನ ಮುಕ್ತ ವಿಲಾಸಕ್ಕೆ ಎಡೆ ಕೊಡದೇ ಇರು ವಂಥದು. ಆದರೆ ಅದು ಋತುಗಳ ಜೊತೆ, ನೈಮಿತ್ತಿಕ ಆಚರಣೆಗಳ ಜೊತೆ, ಇಹ-ಪರಗಳ ಜೊತೆ, ಮನುಷ್ಯರನ್ನು ಇತರ ಮನುಷ್ಯರ ಜೊತೆ ಬೆಸೆಯಬಲ್ಲ ಶಕ್ತಿ ಯುಳ್ಳದ್ದು. ಈ ಕ್ರಿಯೆಗಳೆಲ್ಲ ಅಪ್ರಜ್ಞಾಪೂರ್ವಕವಾದದ್ದು. ಕಾರಂತರು ದುಡಿಮೆಯ

ದೃಶ್ಯಗಳನ್ನು ಮೃದುವಾದ ಹಾಸ್ಯದಲ್ಲಿ ಚಿತ್ರಿಸಬಲ್ಲರು. ನದಿಯಿಂದ ಕೆಸರು ತೆಗೆದು ಗದ್ದೆಗೆ ತುಂಬಿಸುವಾಗ ಐತಾಳರು "ಒಂದೇ ಒಂದು ಕೋವಣಾಲಂಕೃತರಾಗಿ, ಮೈತುಂಬ ಕೆಸರು ಬಳೆದವರಾಗಿ, ದೋಣಿಯ ಹಿಂಗೋಟಿನ ಮೇಲೆ ಸ್ಥಾಪಿತ ರಾಗಿದ್ದರು." ಮಗುವಿನ ಜನನದ ವಾರ್ತೆ ಹೇಳಲು ಬಂದಾಗ ಅವರಿಗಿಂತ ಹೆಚ್ಚು ಶ್ರೀಮಂತನಾದ ಭಾವ ಕಂಡ ನೋಟ ಇದು. ದುಡಿದು ಸುಸ್ತಾದ ಐತಾಳರು ಊಟದಿಂದೇಳುವಾಗ "ಭಾವನು ಸಂಜೆ ನೋಡಿದ ಕೆಸರು ತುಂಬಿದ ದೋಣಿಯಂತೆ ಜಡವಾಗಿ ಬಿಟ್ಟಿದ್ದರು" (91–92). ಮಾವಿನ ಮಿಡಿಗೆಂದು ದೂರ ನಡೆದು ಹೋಗಿ ದಣಿದು ಬಂದ ಸರಸೋತಿ ಸ್ನಾನವಾದ ಮೇಲೆ "...ಅವಸರ ಅವಸರದಿಂದ ನಿಯಮ ದಂತೆ ನೂರೆಂಟು 'ಓಂ ನಮಃ ಶಿವಾಯ'ಗಳನ್ನು ಮುಗಿಸಿಕೊಂಡು ಉದ್ದು ಹಾಕಿ, ಮಾಡಿದ ಕೆಸುವೆ ಸೊಪ್ಪಿನ ಚಟ್ನಿಯನ್ನು ಧ್ವಂಸ ಮಾಡತೊಡಗಿದಳು" (49). ಇಂಥ ಜೀವನದ ಕಷ್ಟವನ್ನೂ ಸುಖವನ್ನೂ ಹೇಳಬಲ್ಲ ಕಾರಂತರಿಗೆ ಲಚ್ಚನ ಆಲಸ್ಯ ಹಲವು ಕೇಡುಗಳ ಮೂಲವಾಗಿ ಕಾಣಿಸುತ್ತದೆ; ಇದು ಬೇಸಾಯಗಾರನ ನೈತಿಕ ಪ್ರಜ್ಞೆ, ಒದು ಸಂಗೀತಗಳಿಗೆ ತೆರವಾದಾಗ ಮಾತ್ರ ರಾಮು ನಾಗವೇಣಿಯರಲ್ಲಿ ಆದಂತೆ ವಿರಾಮದ ಆಸೆ ಮೌಲಿಕವಾಗುತ್ತದೆ. ಆದರೆ ಸಂಗೀತದಲ್ಲಿನ ರಾಮನ ತತ್ಪರತೆ ದುಡಿಯುವ ಬಚ್ಚಿಗೆ ಮರುಳಾಗಿ ತೋರುತ್ತದೆ (367). ರಾಮನ ಕಥೆ ಕಾರಂತರ ಮನಸ್ಸಿನಿಂದ ಬಂದದ್ದು; ಬದಲಾವಣೆಯಲ್ಲಿ ಒಳ್ಳೆಯದು ಸಾಧ್ಯವೆಂಬುದನ್ನು ಚಿತ್ರಿಸಲು ಇಚ್ಛಾ ಪೂರ್ವಕ ಯತ್ನಿಸಿದ್ದು. ಆದರೆ ರಾಮನ ಸಂಗೀತ ತತ್ಪರತೆಯಲ್ಲಿನ ಮೌಲಿಕತೆ 'ಕೋವಣಾಲಂಕೃತ' ಐತಾಳನದರಂತೆ ನಮ್ಮ ಮನಸ್ಸಿನಲ್ಲಿ ಊರುವುದಿಲ್ಲ. ಇದಕ್ಕೇನು ಕಾರಣವಿರಬಹುದು ನೋಡಬೇಕು.

ತನ್ನ ಸಹಜ ವೈಯಕ್ತಿಕ ಮೂರ್ತ ಅಸ್ತಿತ್ವವನ್ನು ಉಳಿಸಿಕೊಂಡೇ ತತ್ತ್ವವನ್ನೂ ಹುಟ್ಟುಹಾಕಬಲ್ಲ ಪಾತ್ರ ರಚನೆಗಿಂತ ಹೆಚ್ಚಾಗಿ ಕಾರಂತರ ಒಲವಿರುವುದು ಇನ್ನೂ ಮೊಳಕೆಯಂತಿರುವ ಪ್ರಜ್ಞೆಯನ್ನು ಪಡೆದ ಪಾತ್ರಗಳ ರಚನೆಯಲ್ಲಿ. ಐತಾಳ, ಸರಸೋತಿ, ಪಾರೋತಿ ಇಂಥವರು. ಈ ಪ್ರಜ್ಞೆ ಬದುಕಿನ ಪ್ರಯಾಸದಲ್ಲಿ ನೆನೆದು ಬೆಂದು ಹುಟ್ಟಿದ್ದು. ಬೇಸಾಯದಿಂದ ನಿಯಂತ್ರಿತವಾದ ಸಂಸ್ಕೃತಿಯಲ್ಲಿ (ಅಂದರೆ ಅತ್ಯಂತ ಕಟ್ಟುನಿಟ್ಟಾದ ಇಕ್ಕಟ್ಟಿನಲ್ಲಿ) ಏನೇನು ಎಷ್ಟೆಷ್ಟು ಅರಳೀತು ಎಂದು ನೋಡುವುದು ಬದುಕಿನಲ್ಲಿ ಯಾವುದಕ್ಕೆಷ್ಟು ಬೆಲೆ, ಸಫಲತೆಯೆಂದರೇನು ಎಂಬ ಪ್ರಶ್ನೆಗಳಿಗೆ ನಿಕಷಪ್ರಾಯ ವಾಗುತ್ತದೆ.

ನಿರುಪಯೋಗವಾದ್ದಕ್ಕೆ ಎಡೆಯೇ ಇಲ್ಲದ, ಸಂಯಮ ಮತ್ತು ಮಿತ ವ್ಯಯದ ಜೀವನಕ್ರಮ ಅನಿವಾರ್ಯವೆನ್ನಿಸುವ ಬೇಸಾಯ ಮೂಲ ಸಂಸ್ಕೃತಿಯಲ್ಲಿ ಸೌಂದರ್ಯಕ್ಕೆ ಜಾಗವಿಲ್ಲವೆಂದಲ್ಲ; ಆದರೆ ಈ ಸೌಂದರ್ಯ ನಿರುದ್ದಿಶ್ಯವಲ್ಲ. ನಿರುದ್ದಿಶ್ಯವಾದ್ದಕ್ಕೆ ಎಡೆಯೇ ಇಲ್ಲದಲ್ಲಿ ಮೆಟಫಿಸಿಕ್ಸ್ ಇಲ್ಲ; ಕೇವಲ ಪ್ರೇಮದ ಅಥವಾ ಪ್ರಕೃತಿಯ

ಉಪಾಸಕರಿರುವುದಿಲ್ಲ; ಇಂಥಲ್ಲಿ ಈವಿಲ್ ಕೂಡ ಸೃಷ್ಟಿಯಲ್ಲೇ ಅಂತರ್ಗತವಾಗಿರುವ ಒಂದು ತತ್ತ್ವವೆಂದು ಅನ್ನಿಸುವುದಿಲ್ಲ. ಯಾವುದಕ್ಕೂ ಪುರುಸೊತ್ತು ಇಲ್ಲವೆಂದು ಬದುಕುವ ಈ ಜನ ಸಾವು ನೋವು ಯಾತನೆಗಳನ್ನು ವಿರೋಧಿಸಿ ಹಣೆ ಚಚ್ಚಿಕೊಳ್ಳುವುದಿಲ್ಲ—ಬಂದದ್ದನ್ನು ಒಪ್ಪಿಕೊಂಡುಬಿಡುತ್ತಾರೆ. ಸರಸೋತಿ ಹೆಣ್ಣಿನ ಪಾಡಿನ ಬಗ್ಗೆ ಹೇಳುವುದು ಕೇಳಿ: "ನೀನು ಏನೇ ಹೇಳು ಮಗು, ಈ ಹೆಣ್ಣಿನ ಜನ್ಮ ಎಂಬುದು ಹಿಂದೆ ಯಾವ ಯಾವುದೋ ಪಾಪ ಮಾಡಿ ಬಂದದ್ದು. ಇದು ನರಕ ಅನುಭವಿಸಲಿಕ್ಕೇ ಬಂದ ಜನ್ಮ; ಸುಖಕ್ಕಲ್ಲ" (243, 244). ಸ್ಕಾವಿನ ಬಗ್ಗೆ ಅವಳು ಹೇಳುವುದು ಕೇಳಿ: "ಅವನದ್ದೇ ಏನೋ ಒಂದು ಲೆಕ್ಕವಿರಬೇಕು, ನಮಗೆ ಅದೆಲ್ಲ ತಿಳಿಯುತ್ತದೆಯೆ? (247)." ಈ ಮಾತುಗಳು ತತ್ತ್ವವಾಗಿ ಸತ್ಯವೆ ಎಂಬ ಪ್ರಶ್ನೆ ಹುಟ್ಟುವಂತೆ ಕಾರಂತರು ಬರೆಯುವುದೇ ಇಲ್ಲ. ಇಗೋ ಇಂಥ ಜನ ತಮ್ಮ ಜೀವನ ಕ್ರಮದಿಂದಾಗಿ ಹೀಗೆ ಭಾವಿಸಿದರು ಎಂದು ಮಾತ್ರ ಹೇಳುತ್ತಾರೆ.

ಕಾರಂತರು ಹೀಗೆ ತಮ್ಮ ಪಾತ್ರಗಳಿಗೇ ಬದ್ಧರಾಗಿ ಬರೆಯುತ್ತಾರೆಂಬುದು, ಈ ಪಾತ್ರಗಳು ತಾವು ಕಂಡುಂಡ ಜೀವನಕ್ಕೆ ಬದ್ಧವಾಗಿದ್ದು ಪಡೆದಷ್ಟನ್ನೆ ಚಿಂತಿಸುತ್ತಾರೆಂಬುದು ಕಾರಂತ ಬರವಣಿಗೆಯ ದೊಡ್ಡ ಗುಣವೆಂದು ಕಾಣದ ವಿಮರ್ಶಕನೇ ಇಲ್ಲ. ಸ್ವಯಂಪೂರ್ಣವೆನ್ನಿಸುವ ಈ ಪ್ರಪಂಚಕ್ಕೆ ತಲೆಬಾಗಿ ಕಾರಂತರ ಪಾತ್ರಗಳು ಬದುಕುತ್ತಿರಬಹುದು. ಆದರೂ ಪಾರೋತಿಯದು ಯಾಕೆ ಬರಡು ಜೀವನವಾಗಬೇಕು? ಸರಸೋತಿ ಯಾಕೆ ವಿಧವೆಯಾಗಿ ಬದುಕಬೇಕು? ನಾಗವೇಣಿಗೆ ಬೇರೊಂದು ಬದುಕೇ ಸಾಧ್ಯವಿಲ್ಲವೆ? ಐತಾಳಗೇಕೆ ಮನೆಗೆ ಹೆಂಚು ಹೊದೆಸುವ ಹುಚ್ಚು. ಮರು ಮದುವೆಯ ಆಸೆ, ಮಯ್ಯನನ್ನು ವಿಚಾರಿಸಬೇಕೆಂಬ ಛಲ, ಮಗನನ್ನು ವಕೀಲನನ್ನಾಗಿ ಮಾಡಿಸಬೇಕೆಂಬ ಹಂಬಲಗಳು ಹುಟ್ಟಬೇಕು? ಅವನ ಆಸೆಯ ಫಲವಾಗಿಯೇ ಲಚ್ಚ ಕೆಟ್ಟದ್ದಲ್ಲವೆ? ದುಡಿಮೆಯ ಜೀವನ ಕ್ರಮ ಅದುಮಿ ಹಿಡಿದಿಡುವ ಆಸೆಗಳು ಲಚ್ಚನ ಪೇಟೆ ಜೀವನದಲ್ಲಿ ವ್ಯಕ್ತವಾಗುವುದು ಸಹಜವಲ್ಲವೆ? ಲಚ್ಚನನ್ನು ಕಾರಂತರು ಕೇವಲ ಸ್ವಾರ್ಥಿಯೆಂದೂ, ಪರೋಪಕಾರಿಯಲ್ಲೆಂದೂ ಕಂಡರೂ ಸಹ, ಅವನನ್ನು ಕಾಡುವ ಆಮಿಷಜೀವನಕ್ಕೇ ಮೂಲಭೂತವಾದ–ಎಲ್ಲರಲ್ಲೂ ಅಡಗಿರಬಹುದಾದ ಅಂಶವಲ್ಲವೆ?

ಈ ಪ್ರಶ್ನೆಗಳು ಕಾದಂಬರಿಯಲ್ಲಿ ಇಣುಕುತ್ತವೆ. ಅಂದರೆ, ಕಾರಂತರ ಆಶಯವನ್ನೂ ಮೀರಿ ಇಣುಕುತ್ತವೆ. ಉಸಿರಾಡುವ ಎಲ್ಲ ಕೃತಿಗಳಲ್ಲಿರಬೇಕಾದ ಗುಣವಿದು. ಬಂದಿರುವ ಬದುಕನ್ನು ಜೀವಿಸದ ಹೊರತು ಬೇರೆ ದಿಕ್ಕಿಲ್ಲವೆಂಬ ಪಾತ್ರಗಳು ಅದೃಷ್ಟವನ್ನು ಕೆಣಕದೇ ಇರಬಹುದು. ಕೆಣಕಬಲ್ಲವರು ಚೋಮನಂಥವರು; ಹಿಂದೆ ನಾನು ಹೇಳಿದಂತೆ ತತ್ತ್ವ ಹುಟ್ಟುಹಾಕಬಲ್ಲ ವಿಶೇಷ ಅಸ್ತಿತ್ವವುಳ್ಳವರು. ವೈದಿಕ ವೃತ್ತಿ ಮತ್ತು ಬೇಸಾಯದ ಸಂಸ್ಕೃತಿಯ ಬಿರುಕಿನಲ್ಲಿ ಕಣ್ಣೊಡೆದ ಲಚ್ಚ ಇಂಥವನಾಗಿದ್ದರೆ?

ಹಿರಿಯರ ಆಶಯದ ಫಲವೂ ಆವನಾದ್ದರಿಂದ ಅವನು ಬರಿ ಒಬ್ಬ ಕೆಡುಕನಾಗದೇ ಇರಬಹುದಿತ್ತು; ಅವನ ಸವಾಲು ಮೆಟಫಿಸಿಕಲ್ ಆಯಾಮ ಪಡೆಯಬಹುದಿತ್ತು.

ಪಡೆದಿದೆ ಎಂದುಕೊಂಡಿದ್ದೇನೆ ನಾನು ನನ್ನ ಸಂಸ್ಕಾರ ಕೃತಿಯ ನಾರಣಪ್ಪನಲ್ಲಿ. ಇದೇನೂ ಪ್ರಜ್ಞಾಪೂರ್ವಕವಾಗಿ ನಾನು ಮಾಡಿದ್ದಲ್ಲ. ಯಾಕೆಂದರೆ ನಾನು ತನ್ಮಯನಾಗಿ ಮರಳಿ ಮಣ್ಣಿಗೆ ಓದಿದ್ದು ಅಗ್ರಹಾರದಲ್ಲಿ ನಾನು ಬಾಲಕನಾಗಿದ್ದಾಗ; ಮತ್ತು ಈಗ ಈ ಲೇಖನ ಬರೆಯಲೆಂದು. ನನ್ನ ಎಲ್ಲ ಬರವಣಿಗೆಯ ಹಿಂದೆ ಕಾರಂತರಿಂದ ಮೈಗೂಡಿಸಿ ಕೊಂಡದ್ದು ಇರುವುದು ಅನಿವಾರ್ಯವಾದ್ದರಿಂದ ಲಕ್ಷ್ಮೀನಾರಾಯಣನೇ ನಾರಣಪ್ಪ ನಾಗಿದ್ದರೆ ಆಶ್ಚರ್ಯವಿಲ್ಲ. ಕಾರಂತರನ್ನು ಯಾವ ಕನ್ನಡ ಲೇಖಕ ತಾನೆ ತೊರೆದು ನಿಂತಾನು? ಆದರೆ ಇಂಥ ಹೊರಳುವಿಕೆ ನಡೆಯುವಾಗ ಲೇಖಕ ತನ್ನ ಹಿರಿಯರಲ್ಲಿ ಇರುವುದನ್ನು ಅಗತ್ಯಕ್ಕಿಂತ ಹೆಚ್ಚಾಗಿ ಊಹಿಸಿರಬಹುದು—ಮೊದಲೇ ನಾನು ಸೂಚಿಸಿದಂತೆ. ಆದ್ದರಿಂದ ನನ್ನಂಥವರ ವ್ಯಾಖ್ಯಾನದಲ್ಲಿ ಸ್ವಾರ್ಥವಿರುತ್ತದೆಂಬ ಗುಮಾನಿ ನಿಮಗಿರುವುದು ಒಳ್ಳೆಯದೇ. ತನ್ನ ಕೃತಿ ರಚನೆಗೆ ಪರರಿಂದ ಬೇಕಾದ್ದನ್ನು ಮಾತ್ರ ಆಯುವ, ತನ್ನ ಕೃತಿಯಲ್ಲಿ ಕೆಲಸಮಾಡುವ ಮನೋಗತಗಳನ್ನು ಓದುಗರ ಅರಿವಿಗೆ ತರಲೆಂದೇ ಬೇರವರಲ್ಲಿ ತನಗೆ ಬೇಕಾದ್ದನ್ನು ಮಾತ್ರ ಎತ್ತಿಹಿಡಿಯುವ ಪ್ರವೃತ್ತಿ ಯಿಂದ ಸ್ವತಃ ಕೃತಿಕಾರನಾದವನು ಪಾರಾಗಲಾರ. ಇದು ನನ್ನಂಥವರ ಮಿತಿ. ಸ್ವಂತದ ಬಗ್ಗೆ ಎಷ್ಟೇ ವಿಮರ್ಶಕ ಧೋರಣೆ ಇದ್ದಾಗಲೂ, ತನ್ನ ಹಾದಿಯ ಸಮರ್ಥನೆಯ ಉದ್ದೇಶ ಅಡಗಿಯಾದರೂ ಲೇಖಕನಲ್ಲಿ ಕೆಲಸ ಮಾಡುತ್ತದೆಂದು ನಾನು ತಿಳಿದಿರುವೆ. ಡಾ. ಅಮೂರರು ಮರಳಿ ಮಣ್ಣಿಗೆಯ ಮೇಲಿನ ತಮ್ಮ ಲೇಖನದ ಕೊನೆಯಲ್ಲಿ ಆಡಿದ ಮಾತು (ಕಾರಂತ ಪ್ರಪಂಚ, 461) ನನಗೆ ಮೇಲಿನದನ್ನು ಹೇಳುವ ಧೈರ್ಯ ಕೊಟ್ಟಿದೆ.

ಹೀಗೆ ಹೊರಳಿಕೊಳ್ಳದ ಹೊರತು ಹೊಸ ಲೇಖಕನೊಬ್ಬನಿಗೆ ಬೇರೆ ದಿಕ್ಕೇ ಇಲ್ಲ. ಅದೂ ಕಾರಂತರಂಥ ಶಕ್ತ ಲೇಖಕನನ್ನು ಹಿಂದಕ್ಕೆ ಇಟ್ಟುಕೊಂಡಾಗ. ಇನ್ನೊಂದು ಊರಿನ ಕಥೆಯನ್ನು ಮರಳಿ ಮಣ್ಣಿಗೆಯಂಥದೇ ವಾಸ್ತವ ಶೈಲಿಯಲ್ಲಿ, ಒಂದರ ನಂತರ ಇನ್ನೊಂದು ಬರುವ ಕಾಲಾನುಕ್ರಮದ ಅನುಸಾರಿಯಾದ ಶಿಲ್ಪದಲ್ಲಿ ಎಷ್ಟು ದಟ್ಟವಾಗಿ ಬರೆದರೂ ಅದು ಇನ್ನೊಂದು ಕಲಾನುಭವವಾಗದು: ನಮ್ಮ ಅರಿವಿಗೆ ಹೊಸ ದೊಂದನ್ನು ಸೇರಿಸಲಾರದು; ಇನ್ನೊಂದು ಊರಲ್ಲಿ ಜನ ಹೀಗೆ ಬದುಕುತ್ತಾರೆ ಎಂಬ ನಮ್ಮ ವಿಷಯಜ್ಞಾನವನ್ನು ಕೊಂಚ ಹಿಗ್ಗಿಸೀತು ಅಷ್ಟೆ. ಒಳ್ಳೆಯ ಸಮಾಜ ಶಾಸ್ತ್ರಜ್ಞನೂ ಅದನ್ನು ಮಾಡಿಯಾನು. ಆಗಲೇ ತಿಳಿದಿದ್ದಕ್ಕೆ ಹೊಸ ಉದಾಹರಣೆ ಗಳನ್ನು ಪೇರಿಸುತ್ತ ಹೋಗುವುದು ಕಲೆಯ ಕೆಲಸವಲ್ಲ. ಮರಳಿ ಮಣ್ಣಿಗೆ, ಪಥೇರ ಪಾಂಚಾಲಿ, ಅನ್ನಾ ಕರನೀನದಂಥ ಕೃತಿಗಳನ್ನು ಬರೆದವರು ಆ ಬಗೆಯ ಬರವಣಿಗೆ ಕೊಡಬಲ್ಲ ಅನುಭವವನ್ನೆಲ್ಲಾ ಸೂರೆ ಮಾಡಿಬಿಟ್ಟಿರುತ್ತಾರೆ. ಕೃತಿಕಾರ ಬೆಳೆಯುವ

ಸಾಧ್ಯತೆಯಿರುವುದು ತನ್ನ ಮನಸ್ಸನ್ನೂ, ತನಗೆ ಅನನ್ಯವಾದ ಗ್ರಹಿಕೆಯನ್ನು ಕೊಡುವ ತನ್ನ ಸಂವೇದನೆಯನ್ನೂ, ಬೆಳೆಸಿಕೊಳ್ಳುತ್ತ ಹೋದಾಗ. ಕಾರಂತರು ತನ್ನನ್ನು ಹಿಂದಿಟ್ಟು ಕೊಂಡು ಬರೆದಂತೆ, ತನ್ನನ್ನು ಮುಂದಿಟ್ಟುಕೊಂಡೂ ಬರೆದಿದ್ದಾರೆ. ಬ್ಲೇಕ್ ಹೇಳುವಂತೆ 'ಇದು ನನ್ನದು, ಆದರೆ ನನ್ನದು ಮಾತ್ರ ಅಲ್ಲ' ಎನ್ನಿಸುವಂಥ ಕೃತಿಗಳನ್ನು ಅವರು ಕೊಟ್ಟಿರುವುದು ಮಾತ್ರ ಹೆಚ್ಚಾಗಿ ತನ್ನನ್ನು, ಅಂದರೆ ತನ್ನ ವೈಚಾರಿಕತೆಯನ್ನು ಹಿಂದಿಟ್ಟುಕೊಂಡು ಬರೆದಾಗ ತನ್ನನ್ನು ಮುಂದಿಟ್ಟುಕೊಂಡು ಬರೆದದ್ದೂ ಹೀಗೆ ತನ್ನನ್ನು ಬಿಟ್ಟು ನಿಲ್ಲುವುದು ಸಾಧ್ಯ. ತನ್ನನ್ನು ಮುಂದಿಟ್ಟುಕೊಂಡು ಎಂದರೆ 'ತನ್ನ ವ್ಯಕ್ತಿತ್ವವನ್ನು ಸಮರ್ಥಿಸಿಕೊಳ್ಳಲೆಂದು' ಎಂಬುದು ನನ್ನ ಅರ್ಥವಲ್ಲ; ತನ್ನ ಕಲಾ ಸಂವೇದನೆಯನ್ನು ಬುದ್ಧಿಪೂರ್ವಕವಾಗಿ ತೊಡಗಿಸಿಕೊಂಡು ಬರೆಯುವುದರಲ್ಲೂ ತನ್ನನ್ನು ಮೀರಿಸಿಕೊಳ್ಳುವುದು ಸಾಧ್ಯವೆಂಬುದನ್ನು ತಪ್ಪರ್ಥಕ್ಕೆ ಎಡೆಯಾಗದಂತೆ ನಾನು ಹೇಳಲು ಪ್ರಯತ್ನಿಸುತ್ತಿದ್ದೇನೆ.

ಸಂಸ್ಕಾರದ ಹಿಂದೆ ಕಾರಂತರ ಪ್ರಭಾವ ಅಜ್ಞಾತವಾಗಿ, ಬೇರೆ ದಿಕ್ಕಿನಲ್ಲಿ ನಾನು ನಡೆಯುವುದಕ್ಕೆ ಪ್ರೇರಕವಾಗಿಯಾದರೂ ಕೆಲಸ ಮಾಡಿರಬಹುದೆಂದು ಹೇಳಿದೆ. ಆದರೆ ಪ್ರತ್ಯಕ್ಷವಾಗಿ ನನಗೆ ನೆನಪಿರುವ ಎರಡು ಘಟನೆಗಳು ನಾನು ಹೀಗೆ ಕಾರಂತರಿಂದ ನುಣುಚಿಕೊಳ್ಳುವುದಕ್ಕೆ ಸಹಾಯಕವಾಗಿರಬಹುದು. ಮೊದಲನೆಯದು: ನಾನು ಅಗ್ರಹಾರದಲ್ಲಿ ಓದುತ್ತಿದ್ದಾಗ ನನ್ನ ಹದಿನಾಲ್ಕನೇ ವಯಸ್ಸಿನಲ್ಲಿ ನಡೆದದ್ದು. ಸೇನೆಯಲ್ಲಿದ್ದ ಅಗ್ರಹಾರದ ಯುವಕನೊಬ್ಬ (ನನ್ನ ಪಾಲಿಗೆ ಲಚ್ಚನ ಬಗೆಯವ) ಹಿಂದೆ ಬಂದಿದ್ದ. ನಮಗೆ ಇನ್ನೊಂದು ಲೋಕವನ್ನು ರಂಗಾಗಿ ವರ್ಣಿಸುತ್ತಿದ್ದ ಈತ ಕೊಟ್ಟಿಗೆ ಕೆಲಸಕ್ಕೆ ಬರುತ್ತಿದ್ದವಳೊಬ್ಬಳ ಜೊತೆ ಗುಪ್ತವಾಗಿ ಸಂಬಂಧ ಬೆಳೆಸಿದ್ದು ನನಗೆ ಮಾತ್ರ ಗೊತ್ತಿತ್ತು. ಅಸ್ಪೃಶ್ಯತೆಯನ್ನು ಉಗ್ರವಾಗಿ ಸಮರ್ಥಿಸುತ್ತಿದ್ದ ಅಗ್ರಹಾರದಲ್ಲಿ ವೈದಿಕರೊಬ್ಬರ ಮಗ ಹೀಗೆ ವರ್ತಿಸಿದ್ದು ನನ್ನ ಕಣ್ಣು ತೆರೆಸಿತ್ತು. ತೀರ್ಥಹಳ್ಳಿಗೆ ಬಂದ ಪ್ಲೇಗು ನಮ್ಮ ಹಳ್ಳಿಯ ಹರಿಜನರಿಗೆ ತಗುಲಿತು. ಯಾಕೆಂದರೆ ಅಸ್ಪೃಶ್ಯರೆಂದು ಬ್ರಾಹ್ಮಣ ಡಾಕ್ಟರರು ಅವರಿಗೆ ಇನ್ನಾಕ್ಯುಲೇಷನ್ ಕೊಟ್ಟಿರಲಿಲ್ಲ. ಅಗ್ರಹಾರದ ನಿಷ್ಠ ಬ್ರಾಹ್ಮಣರು ಮಾತ್ರ ಕಲಿಸ್ವರೂಪನಾದ ಗಾಂಧಿಯ ಮಾತು ಕೇಳಿ, ಯಾವ ಊರಿನದೋ ಹರಿಜನರು ದೇವಸ್ಥಾನ ಪ್ರವೇಶಿಸಿದ್ದರಿಂದ ಈ ಊರಲ್ಲಿ ಹರಿಜನರು ಸಾಯುತ್ತಿರುವುದೆಂದು ವ್ಯಾಖ್ಯಾನಿಸಿದ್ದರು. ಗುಡಿಸಲುಗಳಲ್ಲಿ ಇಡೀ ಸಂಸಾರಗಳು ಸತ್ತು, ಗುಡಿಸಲುಗಳಿಗೆ ಬೆಂಕಿ ಕೊಟ್ಟು ಸುಡುವ ಪ್ರಸಂಗ ಒದಗಿತು. ಆಗ ಬ್ರಾಹ್ಮಣ ಯುವಕನಿಗೆ ಒಲಿದಿದ್ದ ಆ ಕಪ್ಪು ಚೆಲುವೆ ಮಾತ್ರ ಊರು ಬಿಟ್ಟು ಓಡಿ ಹೋದಳು. ಆಗಿನ ನನ್ನ ಭಾವನೆಯನ್ನು ನಾನೊಂದು ಕಥೆ ಮಾಡಿ ಬರೆದಿದ್ದೆ—ನೇರವಾಗಿ ಬರೆಯುವ ಭಯದಿಂದ ಯಾವುದೋ ಕಟ್ಟು ಕಥೆಯೆಂಬಂತೆ ರೂಪಕದ ಅಗತ್ಯ ನನಗೆ ಮೊದಲು ಬಿದ್ದದ್ದೇ ಹಾಗೆ. ಮುಟ್ಟಿಸಿಕೊಂಡಿದ್ದರಿಂದಲೇ ಅಸ್ಪೃಶ್ಯಳ ಮನಸ್ಸಲ್ಲಿ ತಾನು

ಪಶುವಿನಂತೆ ಸಾಯಬೇಕಾದ್ದು ಅನಿವಾರ್ಯವಲ್ಲವೆಂಬ ಪ್ರಜ್ಞೆ ಮೂಡಿತು. ಆದ್ದರಿಂದ ಅವಳು ಓಡಿಹೋದಳು, ಎಂಬುದೇ ಕಥೆಯ ಆಶಯವಾಗಿತ್ತು. ಕೈಬರಹದ ಪತ್ರಿಕೆಗೆ ಬರೆದದ್ದು ಇದು. 'ಮುಟ್ಟುವುದು' ಅಂದಿನಿಂದಲೂ ನನಗೊಂದು ಗೀಳಿನ ವಸ್ತುವಾಗಿರಬಹುದು. ಚೋಮನದುಡಿ ಓದಿದ್ದರ ಪ್ರಭಾವವೂ ಈ ಕಥೆಯ ಮೇಲಾಗಿರಬಹುದು. ಈ ಕಥೆಯನ್ನು ಮತ್ತೆ ಬರೆಯಬೇಕೆಂಬ ಆಸೆಯಲ್ಲಿ, ಮಾರ್ಕ್ಸ್, ಲೋಹಿಯಾ, ಜೆಕೆಯವರ ಪ್ರಭಾವದಲ್ಲಿ, ಲಾರೆನ್ಸ್‌ನ ಗುಂಗಿನಲ್ಲಿ ಇರುತ್ತಿದ್ದ ನಾನು ಒಂದು ಸಂಜೆ ನನ್ನ ಅಧ್ಯಾಪಕರೂ ಲೇಖಕರೂ ಆದ ಮಾಲ್ಕಮ್ ಬ್ರಾಡ್‌ಬರಿ ಜೊತೆಯಲ್ಲಿ ಬರ್ಗ್‌ಮನ್ನಿನ Seventh Seal ಸಿನಿಮಾವನ್ನು ಬರ್ಮಿಂಗಂ ವಿಶ್ವವಿದ್ಯಾಲಯದ ಫಿಲ್ಮ್ ಕ್ಲಬ್ಬಿನಲ್ಲಿ ನೋಡಿದೆ. ಸಬ್ ಟೈಟಲ್‌ಗಳು ಇಲ್ಲದಿದ್ದ ಪ್ರಿಂಟು ಅದು. ನಾನು ಅದರಿಂದ ಅಸ್ಪಷ್ಟವಾಗಿ, ಆದರೆ ಗಾಢವಾಗಿ ಪ್ರಭಾವಿತನಾದೆ. ಎಲ್ಲೋ ಅಲ್ಪ ಸ್ವಲ್ಪ ಅರ್ಥವಾಗಿದ್ದರೂ ನಂಬಿಕೆಯ ಕ್ರೈಸಿಸ್ಸಿನ ಚಿತ್ರವಿದೆಂದು ತಿಳಿಯಿತು. ಬ್ರಾಡ್‌ಬರಿಗೆ ಹೇಳಿದೆ, "ನೀವು ಸಂಶೋಧನೆಯಿಂದ ತಿಳಿಯುವ ಮಧ್ಯಯುಗ ನನಗೆ ಭಾರತದಲ್ಲಿ ಸಮಕಾಲೀನ ಅನುಭವ. ನಾವು ನಿಮ್ಮ ಹಲವು ಯುಗಗಳನ್ನು ಒಟ್ಟಾಗಿ ಬದುಕುತ್ತೇವೆ." ಅದಕ್ಕೆ ಬ್ರಾಡ್‌ಬರಿ, "ನೀನೇಕೆ ಅಂಥ ಒಂದು ಕಥೆ ಬರೆಯಬಾರದು" ಎಂದರು. ನನ್ನ ಸಂಶೋಧನೆಯ ಕೊಡಬೇಕಾಗಿದ್ದ ಚಾಪ್ಟರನ್ನು ಮುಂದೂಡಬಹುದಾದ ಗೆಲುವಿನಲ್ಲಿ ಎರಡು ವರ್ಷ ಊರಿಂದ ದೂರಿವಿದ್ದುದರಿಂದಲೋ, ಕನ್ನಡ ಮಾತಾಡಲಾರದೇ ಬಾಯಿ ಕಟ್ಟಿದಂತಾದ್ದರಿಂದಲೋ, ಬಾಲ್ಯದ ಅಗ್ರಹಾರದ ನೆನಪುಗಳಿಗೆ ಹಳಹಳಸಿಯೋ ನಾನು ಸಂಸ್ಕಾರ ಬರೆದದ್ದು. ಲಕ್ಷ್ಮೀನಾರಾಯಣ (ಲಚ್ಚ) ನಾರಣಪ್ಪನನ್ನು ಪ್ರೇರಿಸಿದನೆ, ಬರ್ಗ್‌ಮನ್ನಿನ ಜಿಪ್ಸಿ ಪುಟ್ಟನಾದನೇ, ಅಸ್ಪೃಶ್ಯ ಬೆಳ್ಳಿಯ ಕಥೆ ಎತ್ತೆತ್ತಲೊ ಬೆಳೆದು ಬಿಟ್ಟಿತೆ, ಮದುವೆಯಿಂದಾಗಿ ಹಿಂಡಗಲಿದ ನನ್ನ ದಿಗಿಲು ದುಮ್ಮಾನಗಳು ಎಲ್ಲಕ್ಕೂ ಮುಖ್ಯ ಪ್ರೇರಣೆಯೆ, ಲೋಹಿಯಾ, ಲಾರೆನ್ಸ್, ಜೆಕೆಯವರು ನನಗೆ ಬಗೆವ ಕಣ್ಣುಗಳಾದುವೆ—ಯಾವುದನ್ನೂ ನಾನು ಸ್ಪಷ್ಟವಾಗಿ ಹೇಳಲಾರೆ. ಚಿಲುಮೆಯನ್ನು ತಟ್ಟಿ ಎಬ್ಬಿಸಿದ್ದು ಮಾತ್ರ ನಾನು ಅಸಮರ್ಪಕವಾಗಿ ಅರ್ಥಮಾಡಿಕೊಂಡಿದ್ದ ಬರ್ಗ್‌ಮನ್ನಿನ Seventh Seal. ಆದರೆ ಇದನ್ನು ಖ್ಯಾತ ಮನಶಾಸ್ತ್ರಜ್ಞ ಎರಿಕ್ ಎರಿಕ್‌ಸನ್‌ರಿಗೆ ನಾನು ಹೇಳಿದಾಗ Seventh Seal ಗೆ ಬದಲಾಗಿ wild Strawberries ನಲ್ಲಿ ನನ್ನ ಕೃತಿಯ ಮುಖ್ಯ ಸ್ಥಿತ್ಯಂತರಗಳನ್ನು ಆರ್ಕಿಟೈಪ್ ಎಂಬಂತೆ ಅವರು ಕಂಡರು (ನೋಡಿ : ಸುಧೀರ್‌ಕಾಕರ್ ಸಂಪಾದಿಸಿದ Identity and Adulthood ; O. U. P.) ಆದರೆ ನಾನು wild Strawberries ಅನ್ನು 1978ನೇ ಇಸವಿ ತನಕ ನೋಡಿರಲಿಲ್ಲ.

ಕೃತಿ ಹುಟ್ಟುವ ಬಗೆ ವಿಚಿತ್ರವಾದ್ದು. ಬರೆಯಲು ಹೊರಟಾಗ ನಾವು ಮುಖ್ಯವೆಂದು ತಿಳಿದದ್ದು ಅಮುಖ್ಯವಾಗಿ ಬಿಡುತ್ತದೆ. ಮನಸ್ಸು ಸ್ವೀಕರಿಸುವ ಸ್ಥಿತಿಯಲ್ಲಿರು

ವುದರಿಂದ ಬುದ್ಧಿಪೂರ್ವಕ ತಿಳಿದದ್ದು, ಅಜ್ಞಾತವಾಗಿ ಅಡಗಿದ್ದು, ಕನಸಿನ ಲೋಕಕ್ಕೆ ಸೇರಿದ್ದು ಎಲ್ಲ ಏಕತ್ರ ಬಂದೊದಗುತ್ತವೆ. ಮನಸ್ಸಿನಲ್ಲಿ ಸದಾ ಕೊರೆಯುತ್ತಿರುವ ಗೀಳಿನ ಹಾಗಿರುವ ಆಸಕ್ತಿಗಳಿಗೆ ಹೀಗೆ ಒದಗಿಬರುವ ಎಲ್ಲವೂ ಆಹಾರವಾಗಿ ಬಿಡುತ್ತವೆ.

# ಕಾರಂತರ ಕಾದಂಬರಿಗಳು : ಒಂದು ಸೃಜನಾತ್ಮಕ ಪ್ರತಿಕ್ರಿಯೆ

ಶಂಕರ ಮೊಕಾಶಿ ಪುಣೇಕರ

ಶಿವರಾಮ ಕಾರಂತರು ಮೂಲತಃ ವಿಚಾರವಾದಿಗಳು. ವಿಚಾರವಾದವೇ ಅವರ ಕಲೆಯ ಮೂಲ ಅಂತಃಸ್ಫೂರ್ತಿ. ಇದನ್ನು ಸಿದ್ಧಮಾಡುವ ಅಗತ್ಯವಿಲ್ಲವೆಂದು ತೋರುತ್ತದೆ. ಇಂಥ ಕಲೆಯ ಬಗ್ಗೆ ನನಗೆ ಮೂಲತಃ ಬೇಸರವಿಲ್ಲ. ಹಿಂದೂಸ್ತಾನದ ಆಗಿನ ಪರಿಸ್ಥಿತಿಯಲ್ಲಿ ಅವರ ವಿಚಾರವಾದವು ಕಲಾತತ್ವ-ರಸತತ್ವಗಳನ್ನು ಮೀರಿ ಓದುಗರಿಗೆ ಬೋಧಪ್ರದವಾಗಿ ಅರಳಿ ನಿಂತಿದ್ದರ ಬಗ್ಗೆ ನನಗೆ ಯಾವ ಆತಂಕವೂ ಇಲ್ಲ. ಏಕೆಂದರೆ ಬೋಧಪ್ರದ-ಉಪದೇಶಪರ ಕಲೆಯನ್ನು ಕಲೆಯೆಂದು ಒಪ್ಪಲಿಕ್ಕೆ ನಾನು ತತ್ವಶಃ ಸಿದ್ಧನಿದ್ದೇನೆ. ಕಲೆಯು ಬೋಧಪ್ರದ-ಉಪದೇಶಪರವಾಗಬಾರದೆಂಬ ಪಾಶ್ಚಾತ್ಯ ಸಿದ್ಧಾಂತವನ್ನೇ ನಾವು ಭಾರತೀಯರು ನಂಬಿ ಬಿಟ್ಟರೆ, ನಮ್ಮ ಕಲೆಯ ಬಹ್ವಂಶವನ್ನು ನೀರಿಗೆ ಚೆಲ್ಲಬೇಕಾಗುತ್ತದೆ. ಒಂದು ಯುಗವೇ ಮೂಢನಂಬಿಕೆಗಳಲ್ಲಿ ಮುಳುಗಿ ಹೋಗಿದ್ದಾಗ ಸಂಸ್ಕೃತಿಯ ಜಾಗೃತ ಅಂಶವಾದ ಬುದ್ಧಿಜೀವಿಯ ಕಲಾಮಾಧ್ಯಮದ ಮುಖಾಂತರ ವಿಚಾರವಾದದ ಪ್ರಚಾರ ಮಾಡಿದನೆನ್ನುವದು ನಾಚಿಕೊಳ್ಳುವ ಸಂದರ್ಭ ವಲ್ಲ. ಆದರ ಬದಲು ಅಭಿಮಾನ ಪಡತಕ್ಕ ವಿಷಯ. ಮುಖ್ಯ ಪ್ರಶ್ನೆಯೆಂದರೆ ಅವರ ವಿಚಾರವಾದವು ಅವರ ಕಲೆಗೆ ಪೋಷಕವಾಗಿ ಬರುತ್ತದೋ ಮಾರಕವಾಗಿ ಬರುತ್ತದೋ ಎಂಬುದು.

ಇದಕ್ಕೆ ಮೂಲಭೂತವಾದ ಒಂದು ಗ್ರಹಿಕೆಯನ್ನು ಮೊದಲೇ ಹೇಳಬೇಕು. ಕಾರಂತರು ವಿಚಾರವಾದಿಗಳಲ್ಲದಿದ್ದರೆ ಅವರು ಸಾಂದ್ರವಾಗಿ ಕಲಾಮಾಧ್ಯಮದ ಮೊರೆ ಹೋಗುತ್ತಿರಲಿಲ್ಲ. ಈ ಮೂಲ ಗ್ರಹಿಕೆಯ ಆಧಾರದ ಮೇಲೆ ನಮ್ಮ ಚರ್ಚೆ ಪ್ರಾರಂಭವಾಗಬೇಕು.

ಕರ್ನಾಟಕದಲ್ಲಿ ವಿಚಾರವಾದದ ಮುಖ್ಯ ಪ್ರವರ್ತಕರೆಂದರೆ ಪಂಡಿತ ತಾರಾನಾಥರಾಯರು. ಇವರ ಸಹಕಾರಿ-ಸಹಧರ್ಮಿಗಳಾದ ಮೂಲ ಪೀಳಿಗೆಯವರು ಆದ್ಯರಂಗಾಚಾರ್ಯ, ಕೈಲಾಸಂ, ಅ. ನ. ಕೃಷ್ಣರಾಯ, ಕಾರಂತ, ರಾಜಾರಾವ್, ಈ ಮಟ್ಟದ ಜನರು. ತಾರಾನಾಥರಾಯರು ಕತೆ ಕಾದಂಬರಿಗಳನ್ನು ಬರೆಯಲಿಲ್ಲವಾದರೂ ನಾಟಕದಲ್ಲಿ ಭಾಗವಹಿಸಿದ್ದರು. ಸಂಗೀತ ಬಲ್ಲವರು. ಜೊತೆಗೆ ವೈದ್ಯರು. ವಾಗ್ಮಿಗಳು. ಗಾಂಧೀವಾದದ ಆದರ್ಶಗಳನ್ನಿಟ್ಟುಕೊಂಡವರು. ಶಿಕ್ಷಕರು. ಅವರು ರಚಿಸಿದ 'ಧರ್ಮ ಸಂಭವ' ಗ್ರಂಥ ಆ ಕಾಲದ ಮಹತ್ವದ ಗ್ರಂಥ. ಇತ್ತೀಚೆಗೆ ವಿಸ್ಮರಣೆಗೆ ಗುರಿಯಾಗಿದೆ.

ತಮ್ಮ ತರುಣ ವಯಸ್ಸಿನಲ್ಲಿ ತಾರಾನಾಥರಾಯರ ಪ್ರಭಾವವನ್ನು ಸ್ವೀಕರಿಸಿದವರಲ್ಲಿ ಕರ್ನಾಟಕದ ಮೂವರು ನಾಟಕಕಾರರು ನಾಟಕದಲ್ಲಿ ಕ್ರಾಂತಿ ಮಾಡಿದರು. ಕೈಲಾಸಂ ಶ್ರೀರಂಗ ಮತ್ತು ಕಾರಂತ. ಆದರೆ ಕಾರಂತ ನಾಟಕ ಕಲೆಯನ್ನು ಬೇರೆ ರೀತಿಯಿಂದ ಮುಂದುವರಿಸಿದರು. ಯಕ್ಷಗಾನದಲ್ಲಿ ಅವರು ತಂದ ಸುಧಾರಿಸಿದ ರೀತಿಗಳನ್ನು ನೋಡಿದ್ದೇನೆ.

ಓಂ ಪ್ರಥಮ ಅವರ ಕಲೆಗಾರಿಕೆ ಚಿಗುರೊಡೆದದ್ದು ವಿಚಾರವಾದದ ಮೂಲಕವೇ ಎಂದು ಧಾರಾಳವಾಗಿ ಹೇಳಬಹುದು. ಗೊತ್ತುಗುರಿಯಿಲ್ಲದೆ ಸಾಗಿದ ಅವರ ಪ್ರಥಮ ಪ್ರಯತ್ನಗಳಾದ ಪತ್ತೇದಾರಿ ಕಾದಂಬರಿಗಳು ಹಾಗೇ ಮುಂದುವರಿದಿದ್ದರೆ ಅವರು ಎಲ್ಲಿಗೆ ಮುಟ್ಟುತ್ತಿದ್ದರೋ ಹೇಳಲಾಗದು. ಆದರೆ ಆ ಹರುಮುರುಕು ಕಾದಂಬರಿಯ ನಿರೂಪಣಾ ತಂತ್ರಕ್ಕೂ ನಂತರದ ಅವರ ಗಂಭೀರ ಕೃತಿ 'ಚೋಮನ ದುಡಿ'ಗೂ ಅಜಗಜಾಂತರ. 'ಚೋಮನದುಡಿ' ಅವರ ಪರಿಪೂರ್ಣ ಕೃತಿ. ಅವರ ಕೃತಿಗಳಲ್ಲಿ ಶ್ರೇಷ್ಠವೆಂದೇ ಹೇಳಬೇಕು.

'ಚೋಮನದುಡಿ' ಕಾರಂತರ ಸೃಜನಶೀಲತೆಗೆ ಚಟುಲತೆಯನ್ನು ಒದಗಿಸಿತು. ಅವರ ಆಸಕ್ತಿಗಳು ಒಮ್ಮೆಲೇ ವಿಸ್ತಾರಗೊಂಡವು. ಭಾರತದ ಸಾಮಾಜಿಕ ಪರಿವರ್ತನೆ ಯನ್ನು ಅವರು ಒಳಗಿಂದಲೇ ತಂದು ಅದರ ಜೊತೆಗೆ ತಮ್ಮ ಕಲೆಯನ್ನೂ ಅರಳಿಸ ತೊಡಗಿದರು. ಈ ವಿಸ್ತಾರ ಆಸಕ್ತಿಯ ಮೂಲಕ ಅವರ ಏಕಾಗ್ರತೆಗೆ ತುಸು ಧಕ್ಕೆ ಒದಗಿತೆಂಬುದು ಕುತೂಹಲದ ವಿಷಯ.

'ಚೋಮನದುಡಿ'ಯಂತೆ ಏಕಾಗ್ರ ಪ್ರತಿಭೆ ಮತ್ತೆ ಕಂಡು ಬಂದುದು ನಂತರದ 'ಬೆಟ್ಟದ ಜೀವ'ದಲ್ಲಿ ; 'ಅಳಿದ ಮೇಲೆ'ಯಲ್ಲಿ. ಅವರ ಅತ್ಯಂತ ಮಹತ್ವಾಕಾಂಕ್ಷಿಯಾದ ಕಾದಂಬರಿ, ಮೂರು ತಲೆಮಾರಿನ ಚಿತ್ರಣ, 'ಮರಳಿ ಮಣ್ಣಿಗೆ' ಕಾದಂಬರಿ ಕಾರಂತರ ವಿಸ್ತೃತ ಆಸಕ್ತಿಗಳ ಮೂಲಕವೇ ತನ್ನ ಏಕಾಗ್ರತೆಯನ್ನು ಕಳಕೊಳ್ಳುತ್ತದೆಯೆಂಬುದು ನೋಡತಕ್ಕ ಮಾತು.

'ಮರಳಿ ಮಣ್ಣಿಗೆ'ಯನ್ನು ಹಪ್ಪಳ ಸಂಡಿಗೆಯ ಮಹಾಕಾವ್ಯವೆಂದು ಕರೆದವ ರುಂಟು. ಜೀವನದ ವಾಸ್ತವಿಕತೆಯನ್ನು ಅದು ವಿಸ್ತರಿಸಿದಷ್ಟು ಯಾವ ಕಾದಂಬರಿಯೂ ವಿಸ್ತರಿಸಿಲ್ಲ. ಆದರೆ ಕೊನೆಯ ಪರಿಣತಿಯೇನು? ಸರಸೋತಿ-ಪಾರೋತಿಯ ಕಾಲ ದಲ್ಲಿ ಮಾರುತ್ತಿದ್ದ ಹಪ್ಪಳ ಸಂಡಿಗೆಗಳು ಮದರಾಸಿನಲ್ಲಿ ದೋಸೆ-ಇಡ್ಲಿಗಳಾದವಷ್ಟೆ. ಅಜ್ಜ ಸೌದೆ ಸಂಗ್ರಹಿಸಲು ಹೆಣಗುತ್ತಿದ್ದ. ಮೊಮ್ಮಗ ಹೋಟೆಲ್ ಇಟ್ಟಿದ್ದಾನೆ. ವಾಯೊಲಿನ್ ಕಲಿಯುತ್ತಾನೆ. ಮರಳಿ ಊರಿಗೆ ಬರುತ್ತಾನೆ. ಈ ಸಾಮಾಜಿಕ ಪರಿವರ್ತ ನೆಯ ಮೂಲವೇನು? ವ್ಯಕ್ತಿಗಳೆ? ಶಿಕ್ಷಣವೇ? ಪ್ರಗತಿಯೇ ? ಇವೆಲ್ಲವುಗಳ ಮಿಶ್ರಣವೇ?—ಎಲ್ಲದರ ಮಿಶ್ರಣವಿರಬಹುದು. ಆದರೆ ಕಾರಂತರು ಸ್ಪಷ್ಟಪಡಿಸುವಂತೆ

ಹೇಳಿಲ್ಲ. ಸಾಮಾಜಿಕ ಬೆಳವಣಿಗೆ ಹೀಗೇ ಇರುತ್ತದೆಯೇನೋ ನಿಜ. ಅಜ್ಜ-ಮುತ್ತಾತರು ಹಾಗೆ ಏಕೆ ಎಂದೂ ಸ್ಪಷ್ಟವಿಲ್ಲ. ಆಗಿನ ಕಾಲಕ್ಕೆ ಸಾಮಾಜಿಕ ಗಮನ ಶೀಲತೆ (mobility) ಕಡಿಮೆ; ನಂತರ ಹೆಚ್ಚು ಎಂದೂ ಹೇಳಲಿಕ್ಕೆ ಬರುವಂತಿಲ್ಲ. ಅದನ್ನು ಸಾಧ್ಯಕೃತಿ (tourdeforce) ಎಂದು ಹೇಳಬಹುದು. 'ಬೆಟ್ಟದಜೀವ' ದಲ್ಲಿಯೂ ಗಮನಶೀಲತೆ ಇಲ್ಲ. ಆದರೂ ಅರ್ಥಪೂರ್ಣ ಕೃತಿ ಅನಿಸುತ್ತದೆ, ಏಕಾಗ್ರತೆಯ ಮೂಲಕ.

ಚೋಮನ ದುಡಿ, ಬೆಟ್ಟದ ಜೀವ, ಅಳಿದ ಮೇಲೆ-ಈ ಮೂರು ಕೃತಿಗಳು ನಾನು ಓದಿದ ಕಾರಂತರ ಕಾದಂಬರಿಗಳಲ್ಲಿ ಪೂರ್ಣ ಸಮಾಧಾನ ಒದಗಿಸಿವೆ. ನಾನು ಓದಿದ ಇತರ ಕೃತಿಗಳು ಅರ್ಧ ಸಮಾಧಾನ ಒದಗಿಸಿವೆ. ಅವರ ಬಹುಮಾನಿತ ಕೃತಿ 'ಮೂಕಜ್ಜಿಯ ಕನಸುಗಳು' ಮೇಲೆ ವಿಮರ್ಶೆ ಬರೆಯಬೇಕಾಗಿತ್ತು. ನನಗೆ ಕಷ್ಟಪಟ್ಟರೂ ಓದಲಾಗಲಿಲ್ಲ. ನನ್ನ ದೌರ್ಬಲ್ಯವಿರಬಹುದು; ಅಥವಾ ಕ್ಷಣಕ್ಷಣಕ್ಕೆ ಅವರು ಕೊಡುವ ವಿಚಾರವಾದೀ ವಿವರಣೆಗಳು ತಂದ ಅಸಮಾಧಾನವೂ ಕಾರಣವಾಗಿರಬಹುದು.

ಕಾರಂತರ ಇನ್ನೊಂದು ದೊಡ್ಡ ಗುಣವೆಂದರೆ ದಕ್ಷಿಣಕನ್ನಡ ಜಿಲ್ಲೆಯ ಮೂಲೆ ಮೂಲೆಗಳ ಪರಿಚಯ. ಈ ಜೀವನ ನಿಷ್ಠೆಯೇ ಅವರ ಎಲ್ಲ ಕಾದಂಬರಿಗಳಿಗೂ ಜೀವದಾನವಿತ್ತಿದೆ; ಅವರ ಎಲ್ಲ ಕಾದಂಬರಿಗಳೂ ಅರ್ಧ ಸಮಾಧಾನವೀಯುವ ಗುಣ ತಂದುಕೊಟ್ಟಿದೆ. ಈ ಅಪೂರ್ಣತೆಯ ಕೆಲವು ಕಾರಣಗಳನ್ನು ನೋಡೋಣ:

1. ಅವರ ವಿಚಾರವಾದವು ಹಳೆಯ ರೀತಿಯ ವಿಚಾರವಾದ. ವಿಕ್ಟೋರಿಯನ್ ಕಾಲದ ರೀತಿಯ ಸಂದೇಹವಾದವೇ ಅವರ ವಿಚಾರವಾದವನ್ನು ರೂಪಿಸಿತು. ಪಾಶ್ಚಾತ್ಯ ವಿಚಾರವಾದವು ಪ್ರತಿ ಪೀಳಿಗೆಗೂ ಬದಲಾಗುತ್ತದೆ. ಆದರೆ ಕಾರಂತರ ವಿಚಾರವಾದದ ಮೂಲ ಮಿಡಿತ 19ನೇ ಶತಮಾನದ ಧರ್ಮವಿರೋಧೀ ವಿಚಾರ ಸರಣಿಯ ಬೌದ್ಧಿಕ ಸಂದೇಹವಾದದಿಂದ ರೂಪುಗೊಂಡಿತು. ತೀರ ಇತ್ತೀಚಿಗಿನ ಮಾನವಶಾಸ್ತ್ರ, ಮನೋವಿಜ್ಞಾನ–ಇವುಗಳ ಅಭ್ಯಾಸವೂ ಅವರಿಗೆ ಇದೆ. ಆದರೆ ಮೂಲ ಮಿಡಿತ ರೂಪುಗೊಂಡದ್ದು ಪಾಶ್ಚಾತ್ಯ ಸಂದೇಹವಾದದಲ್ಲಿ; ಅದರ ಜೊತೆಗಾರ ವಿಜ್ಞಾನದ ಬಗ್ಗೆ ಅತಿ ವಿಶ್ವಾಸದಲ್ಲಿ.

2. ಅವರ ವೈಜ್ಞಾನಿಕ ಮನೋವೃತ್ತಿಯೂ ಹಳೆಯ ಬಗೆಯದು. ನಿಚ್ಚಳ ವೈಜ್ಞಾನಿಕ ಸೂರ್ಯಪ್ರಕಾಶದಲ್ಲಿ ಅವರು ನಿಂತುಬಿಡುತ್ತಾರೆ. ವಿಜ್ಞಾನದ ಒಳಗೆಯೇ ಇತ್ತೀಚಿಗೆ ಬೆಳೆದು ಬಂದ ವೈಜ್ಞಾನಿಕ ಸಂದೇಹವಾದದ ಪರಿಚಯ ಅವರಿಗೆ ಇರ ಬಹುದು; ಇರಲಿಕ್ಕಿಲ್ಲ. ಆದರೆ ಅವರ ಸಾಮಗ್ರಿ ಇನ್ನೂ ಹಳೆಯ ಬಗೆಯದು. ಅದನ್ನು ವಿವರಿಸಿ, ಬೆಳಕಿನಲ್ಲಿ ಹಿಡಿದು, ನಾಶಮಾಡಿ ಹೊಸತನ್ನು ಕಟ್ಟುವ ಆಸಕ್ತಿಯೇ ಅವರ ಮೂಲ ಮಿಡಿತ. ಅದು ಫಲಕಾರಿಯಾದ ಮೇಲೆ ಈ ಹಳೆಯ ಕಲೆಯ ಬಗ್ಗೆ ಬೇಸರ

ಹುಟ್ಟುವುದು ಸಹಜ. ವಿಜ್ಞಾನವೂ ತನ್ನ ಬಗ್ಗೆ ತಾನೇ ಸಾಶಂಕವಾಗಿದೆಯೆಂಬುದನ್ನು ಅವರು ಒಪ್ಪುವಂತೆ ಒಮ್ಮೆ ಉಡುಪಿಯಲ್ಲಿ ಕಂಡಾಗ ಅವರು ನಿಶ್ಚಯ ಧ್ವನಿಯಲ್ಲಿ ಹೇಳಿದ್ದರು: "Every child can be made an artistic prodigey. ಅದನ್ನು ಮಾಡಬೇಕೇ, ಇದೇ ಮಾನಸಶಾಸ್ತ್ರಜ್ಞರಿಗೆ ಈಗ ಬಂದಿರುವ ಪ್ರಶ್ನೆ". ಇಷ್ಟು ಖಂಡಿತ, ನಿಖರ, ನಿರ್ಣಯವನ್ನು ಕಾರಂತರು ಒಪ್ಪುವದು ಸೋಜಿಗವಾಗಿ ಕಾಣಿಸದು. ರಷ್ಯದಲ್ಲಿಯೂ ಇದು ಆಗಿಲ್ಲ. ಐ.ಐ.ಟಿ.ಯಲ್ಲಿದ್ದ ರಷ್ಯನ್ ಪ್ರೊಫೆಸರು ನಮ್ಮ ಮಕ್ಕಳು ಎಂಟು ವರ್ಷದವರಾದಾಗ ಯಾವ ಪಕ್ವತೆ ಪಡೆಯುತ್ತಾರೋ, ಅದೇ ಬೌದ್ಧಿಕ ಪಕ್ವತೆ ಭಾರತೀಯ ಮಕ್ಕಳು ಐದನೇ ವರ್ಷಕ್ಕೆ ಪಡೆದಿರುತ್ತಾರೆ ಎಂದು ನನಗೆ ಹೇಳಿದ್ದರು.

3. ವ್ಯಕ್ತಿಯ ಕನಸುಗಳು, ಜನಾಂಗದ ಕನಸುಗಳಾದ ನಂಬುಗೆಗಳು, ದಂತಕತೆಗಳು ವಿಶ್ವಾಸಗಳು, ಇತ್ಯಾದಿಗಳನ್ನು ಕಚ್ಚಾ ಮಾಲೆಂದು ಸ್ವೀಕರಿಸಿ ಅದಕ್ಕೆ ಮನ್ನಣೆ ಕೊಟ್ಟು ಅದನ್ನು structuralist ಪದ್ಧತಿಯ ಸಹಾಯದಿಂದ ಅರ್ಥೈಸುವತ್ತ ವಿಜ್ಞಾನದಲ್ಲಿ ಇತ್ತೀಚೆಗೆ ಒಂದು ದೊಡ್ಡ ಅಲೆ ಎದ್ದಿದೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಇಂಥ ಸಾಮಗ್ರಿ ತುಂಬ ಇದೆ. ಅದಕ್ಕೆ ಮರ್ಯಾದೆ ಕೊಟ್ಟು ಸಂಗ್ರಹ ಮಾಡಿ ಅರ್ಥೈಸುವ ಕೆಲಸ ಕಾದಂಬರಿಕಾರರದು ಅಲ್ಲ ಎಂಬುದನ್ನು ನಾನು ಒಪ್ಪುತ್ತೇನೆ. ಆದರೆ ಅವುಗಳನ್ನು ನೋಡುವ ದೃಷ್ಟಿಯಲ್ಲಿ ಬದಲಾವಣೆಯಾಗಬೇಕು. ಅವು curiosities ಎಂದು ತಿಳಿಯುವ ಪ್ರವೃತ್ತಿ ಅಡಗಿ, ಅವುಗಳನ್ನು ಗೌರವದಿಂದ ನೋಡುವ ಆಸಕ್ತಿ ಬೇಕು. ಕಾರಂತರು 'ಮೂಕಜ್ಜಿಯ ಕನಸುಗಳು' ಕಾದಂಬರಿಯಲ್ಲಿ ಯೋಗಿಗಳು ಗುಹೆಯಲ್ಲಿ ಏಕೆ ವಾಸ ಮಾಡುತ್ತಾರೆ ಎಂಬುದನ್ನು ವಿವರಿಸುತ್ತಾರೆ. ತಾಯಿಯ ಗರ್ಭ ಬಿಟ್ಟು ಬಂದ alienation ಭಯದ infantile instinct, frutration, ಇವೇ ಮೂಲ ಕಾರಣ ಎಂದು ಹೇಳಿದ್ದಾರೆ. ಹೀಗೆ ನಿರ್ಣಾಯಕ ಕೊನೆಯ ಉತ್ತರ ಕೊಡುವದರಲ್ಲಿ ಎರಡು ಆತಂಕವಿದೆ. ಇದು ವಿಜ್ಞಾನಕ್ಕೂ ಪೋಷಕವಲ್ಲ, ಇದನ್ನಾಡುವ ಮೂಕಜ್ಜಿಯ ಪಾತ್ರಕ್ಕೂ ಪೋಷಕವಲ್ಲ. ಆದರೆ ಇದನ್ನು ಹೇಳುವ ಕಾರಂತರಿಗೆ ಈ ನಿರ್ಣಾಯಕತೆ ಏಕೆ ಬಂದಿತೆಂಬುದನ್ನು ವಿಚಾರ ಮಾಡಿದರೆ, ಇವರ ಮೂಲಕ್ಕೆ ಇದ್ದ 19ನೇ ಶತಮಾನದ ಇಂಗ್ಲೀಷ್ ರೀತಿಯು ಸಂದೇಹವಾದವೇ ಎಂದು ಹೇಳಬೇಕು. ಕಾರಂತರ ಜ್ಞಾನ upto-date ಇರಬಹುದು. ಆದರೆ ಅವರ ಪ್ರವೃತ್ತಿಗಳು ರೂಪುಗೊಂಡದ್ದು 19ನೇ ಶತಮಾನದ ಸರಳೀಕೃತ ಸಂದೇಹವಾದದಲ್ಲಿ.

4. ಇದರ ಅರ್ಥವೇನೆಂದರೆ ಕಾರಂತರ ಪ್ರಕಾರ ವಿಚಾರವಾದವು ಕಲೆಯಾಗುವಾಗ, ಇದ್ದ ಸಂಗತಿಗಳ ಮೇಲೆ ಜ್ಞಾನದ ಸರ್ಚ್‌ಲೈಟ್ ಬಿಟ್ಟು ಅದರ ಬಗ್ಗೆ ತಿರಸ್ಕಾರ ಹುಟ್ಟಿಸುವ temptation ಗೆ ಬಲಿಯಾಗುತ್ತದೆ. ಯಾವ ವಿಷಯವನ್ನು ನಾವು ಹಾಳುಗೆಡವಿದರೂ ಅದು ನಾಶಕ್ಕೆ ಯೋಗ್ಯವೇ ಆಗಿರಬಹುದು. ಆದರೆ

ಆ ಪ್ರಕ್ರಿಯೆಯಲ್ಲಿ ತಮ್ಮ ಕಲೆಯೂ ಅಳ್ಳಗಾದ ವಿಷಯದ ಕಡಗೆ ಅವರು ಲಕ್ಷ್ಯವಿತ್ತಿಲ್ಲ. ಈ ಒಟ್ಟು ಪ್ರಕ್ರಿಯೆಯೇ ಅವರಿಂದ 'ಹೆತ್ತಳಾ ತಾಯಿ', 'ಮೊಗಪಡೆದ ಮನ', 'ಸ್ವಪ್ನದ ಹೊಳೆ' ಇಂಥ ಅರ್ಧ ಯಶಸ್ವಿ ಕಾದಂಬರಿಗಳನ್ನು ಬರೆಸಿದೆ ಎಂದು ನನ್ನ ಅಭಿಪ್ರಾಯ.

5. ಕಾರಂತರ ಕಾದಂಬರಿಗಳನ್ನು ನಾಲ್ಕು ಭಾಗವಾಗಿ ವಿಂಗಡಿಸಬಹುದು. ಕೆಲವು ಕಾಲು ಯಶಸ್ಸುಗಳು; ಕೆಲವು ಅರ್ಧ ಯಶಸ್ಸುಗಳು; ಕೆಲವು ಮುಕ್ಕಾಲು ಯಾಶಸ್ಸುಗಳು; ಕೆಲವು ಪೂರ್ಣ ಯಶಸ್ಸುಗಳು. ಆದರೆ ಶೂನ್ಯ ಯಶಸ್ಸಿನ ಯಾವ ಗ್ರಂಥವನ್ನೂ ಅವರು ಬರೆದಿಲ್ಲ. ಇದೇ ಅವರ ದೊಡ್ಡ ಯಶಸ್ಸು ಎನ್ನಬಹುದು.

6. ಎಲ್ಲಕ್ಕೂ ದೊಡ್ಡ ಯಶಸ್ಸೆಂದರೆ ಕರ್ನಾಟಕದ ಮಹತ್ವದ ಅಂಗವಾದ ದಕ್ಷಿಣ ಕನ್ನಡ ಜಿಲ್ಲೆಗೆ ಒತ್ತು ಕೊಟ್ಟು, ಅಲ್ಲಿ ಜನರು ನಡೆಸಿದ ಜೀವನದ ಹೋರಾಟಕ್ಕೆ ಸಾರ್ಥಕ ಅಭಿವ್ಯಕ್ತಿ ತಂದುಕೊಟ್ಟದ್ದು. ಕಾರಂತರ ಕಾದಂಬರಿಗಳು ದಕ್ಷಿಣ ಕನ್ನಡ ಜಿಲ್ಲೆಯಿಂದ ಮುಂಬೈ, ಮದ್ರಾಸ, ದಿಲ್ಲಿಗಳವರೆಗೆ ಹೋಗುತ್ತವೆ. ಅಲ್ಲಿಂದ ಮರಳಿ ಜಿಲ್ಲೆಗೆ ಮರಳುತ್ತವೆ. ಈ ಪ್ರಕ್ರಿಯೆಯಲ್ಲಿ ಅವರ ನೆರೆಹೊರೆಯ ಪಾತ್ರಗಳು ಆ ಜಿಲ್ಲೆಗೆ ಯೋಗ್ಯ ನಾಯಕರೆಂದು ಅರಿವಾಗುತ್ತದೆ. ಈ ಅರಿವು ಎಷ್ಟು ಮಹತ್ವದ್ದೆಂದರೆ— ತಮ್ಮ ತಮ್ಮ ಜಿಲ್ಲೆಗಳ ಜನರನ್ನು ನಾಯಕರನ್ನಾಗಿ ಮಾಡಿಕೊಳ್ಳದ ಅನೇಕ ಜಿಲ್ಲೆಗಳು ಕರ್ನಾಟಕದಲ್ಲಿ ಇಲ್ಲವೆ?—ಇಂಥ ಜಿಲ್ಲೆಗಳು ಸಾಂಸ್ಕೃತಿಕವಾಗಿ ಮೂಕಗೊಂಡದ್ದೇಕೆ?— ನನಗೆ ಉತ್ತರ ಗೊತ್ತಿಲ್ಲ. ಕೇವಲ ತಮ್ಮ ಜಿಲ್ಲೆಗೆ ಧ್ವನಿ ತಂದುಕೊಟ್ಟ ಕಾರಂತರ ಉದಾಹರಣೆಯನ್ನು ಎತ್ತಿ ತೋರಿಸಬಲ್ಲೆ.

7. ಕಾರಂತರ ವಿಚಾರವಾದವು ಮಾರಕವಾಗದೆ ಸ್ಫೂರ್ತಿ ಒದಗಿಸಿದ ಕೆಲವು ಮುಕ್ಕಾಲು ಯಶಸ್ಸಿನ ಉದಾಹರಣೆಗಳೆಂದರೆ – 'ಗೊಂಡಾರಣ್ಯ', 'ಚಿಗುರಿದ ಕನಸು'. ಇಲ್ಲಿ ವಿಚಾರವಾದ-ವಿಜ್ಞಾನವಾದವೇ ಅವರಿಗೆ ಯಶಸ್ಸು ತಂದಿದೆ. 'ಮರಳಿ ಮಣ್ಣಿಗೆ'ಯ ಪೂರಕ ಕಾದಂಬರಿಯೆಂದು ನೋಡಿದಾಗ 'ಚಿಗುರಿದ ಕನಸು' ಕಾದಂಬರಿಯ ಯಶಸ್ಸು ಮನವರಿಕೆಯಾಗಬಲ್ಲದು. 'ಮರಳಿ ಮಣ್ಣಿಗೆ'ಯ ರಾಮರಾಯ ವಿಫಲನಾಗಿದ್ದಾನೆ. 'ಚಿಗುರಿದ ಕನಸು'ವಿನ ನಾಯಕ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಹುಟ್ಟಿಲ್ಲ ಕೂಡ. ದಿಲ್ಲಿಯ ಕೃತ್ರಿಮ ವಾತಾವರಣಕ್ಕೆ ಬೇಸತ್ತು ತಮ್ಮೂರಿಗೆ ಬಂದು ಗಾಂಧೀವಿಚಾರದ ಸಹಾಯ ವಿಲ್ಲದೆ ಕೇವಲ ಎಂಜಿನಿಯರಿಂಗ್ ಜ್ಞಾನದ ಸಹಾಯದಿಂದ ತನ್ನ ಹಳ್ಳಿಯ ಅಭಿವೃದ್ಧಿಗೆ ಕಾರಣನಾಗುತ್ತಾನೆ.

8. ಅವರ ಅರ್ಧ ಯಶಸ್ಸಿನ ಉನ್ನತ ಉದಾಹರಣೆಯೆಂದರೆ ಅವರ 'ಮುಗಿದ ಯುದ್ಧ'. ಅತಿ ವಿಸ್ತಾರದಿಂದ ಬಳಲುವ ಈ ಕಾದಂಬರಿ ಕೊನೆಗೆ ವಿಫಲತೆಯಲ್ಲಿ ಮುಗಿಯುತ್ತಿದ್ದರೂ, ಅದರ ಅರ್ಥಪೂರ್ಣ ವಿಫಲತೆಯೇ ಕಾದಂಬರಿಗೆ ರೂಪ ತಂದು ಕೊಟ್ಟಿದೆ.

9. ಕಾರಂತರ ವಿಚಾರವಾದದ ಬಗ್ಗೆ ನನಗೆ ಬಹಳ ಆದರವಿದೆ. ಇತ್ತೀಚೆಗೆ ಹುಟ್ಟಿದ ಅನೇಕ ಬಗೆಯ ವಿಚಾರವಾದ–ವಿಜ್ಞಾನವಾದಗಳಿಗಿಂತ ವಿಭಿನ್ನವಾದ ವಿಚಾರ ವಾದವದು. ನಮ್ಮ ಹಳೆಯ ಜನಾಂಗದ ವಿಚಾರವಾದವದು. ಸಾಮಾಜಿಕ ಪರಿವರ್ತನೆ ಯಲ್ಲಿ ಈ ವಿಚಾರವಾದ ಬಹುಮುಖ್ಯ ಪಾತ್ರ ವಹಿಸಿತು. ಆದರೆ ಈಗ ದಿವಸಗಳು ಬದಲಾಗಿವೆ. ಆಗಿನ ಕಾಲಕ್ಕೆ ಮುಖಾಮುಖಿಗಳೇ ಕಮ್ಮಿ. ಈಗ ಮುಖಾಮುಖಿ ಯಿಲ್ಲದೆ ದಿವಸಗಳೇ ಕ್ರಮಿಸುವುದಿಲ್ಲ. ಅವರ ತೀರ ಇತ್ತೀಚೆಗಿನ ಧೋರಣೆಗಳು ತುಸು ಗತಿಶೀಲವಾಗಿವೆಯಾದರೂ ಅವು ಇನ್ನೂ ಕಲೆಯಾಗಿ ಪರಿವರ್ತಿತವಾಗಿಲ್ಲ. ಕಾರಂತರು ತುರ್ತುಪರಿಸ್ಥಿತಿಯನ್ನು ವಿರೋಧಿಸಿದರು. ಅದರ ಬಗ್ಗೆ ನನಗೆ ಒಪ್ಪಿಗೆಯಿಲ್ಲ ದಿದ್ದರೂ ಸಹಾನುಭೂತಿ ಇದೆ. ಆದರೆ, ಬ್ರಿಟಿಷರ ವಿರುದ್ಧ ನಡೆದ ಕ್ರಾಂತಿ ಹೇಗೆ 'ಮುಗಿದ ಯುದ್ಧ'ವಾಗಿ ಪರಿವರ್ತಿತವಾಯಿತೋ ಹಾಗೆ ಕಾರಂತರ ತುರ್ತುಪರಿಸ್ಥಿತಿಯ ವಿರುದ್ಧದ ಬಂಡಾಯ ಏನಾದರೂ ಕಾದಂಬರಿಯಾಗಿ ರೂಪಗೊಳ್ಳಬಹುದೇ, ಎಂದು ದಾರಿ ಕಾಯುತ್ತಿದ್ದೇನೆ. ಬರಲಿ ಎಂದು ಹಾರೈಸುವುದಷ್ಟೇ ನನ್ನ ಪ್ರಾರ್ಥನೆ.

10. ಕಾರಂತರ ಅಭಿವ್ಯಕ್ತಿನಿಷ್ಠ ಕಲಾತತ್ವಗಳು ನನಗೆ ಮಾನ್ಯವಿಲ್ಲ. ಇವೂ ಹಳೆಯ ಕಾಲದವು. ಕಾದಂಬರಿಯಲ್ಲಿ ಅಲ್ಲಲ್ಲಿ ಇಣಕಿಹಾಕಿ ಅವರ ಕಾದಂಬರಿಗಳನ್ನು ವ್ಯಗ್ರಗೊಳಿಸುತ್ತವೆಯೆಂದು ನನ್ನ ಭಾವನೆ. ಕಲಾತತ್ವವು ಎಲ್ಲ ಕಾಲದ ಕಲೆಗಳನ್ನು ವಿವರಿಸುವ ಏಕರಸಾಯನವಾಗಬೇಕು. ಹಳೆಯದು ಹೊರಟು ಹೋದರೂ, ಅದರ Phenomenology ವಿವರಿಸುವ ತತ್ವ ನಮಗೀಗ ಬೇಕಾಗಿದೆ. ಆ ಅರ್ಥದಿಂದ ಅವರು ಮಾಡಿದ 'ಯಕ್ಷಗಾನ ಕಲೆ'ಯ ಸುಧಾರಣೆಗಳು ನನಗೆ ಮಾನ್ಯವಿಲ್ಲ. ಯಕ್ಷಗಾನ 'ಬ್ಯಾಲೆ' ಆಗಬಹುದೆಂಬ ಕಲ್ಪನೆಯೇ ನನಗೆ ಮಾನ್ಯವಿಲ್ಲ. ಕಥಕ್ಕಳಿ, ಕಥಕ, ಮಣಿಪುರಿ ಕುಚಿಪುದಿ ಆಗಬಹುದು. ಆದರೆ ಯಕ್ಷಗಾನ ನಾಟಕದ ಸ್ವರೂಪ–ಸಂಭಾಷಣೆ ಅದರ ಜೀವಾಳ. ಅದು ಕೇವಲ ಕುಣಿತವಲ್ಲ. ಈ ತಾತ್ವಿಕ ತಳಹದಿಯ ಮೇಲೆ ನನಗೆ ಅವರು ಮಾಡಿದ ಸಂಭಾಷಣೆಯ ಚ್ಯುತಿ ಒಪ್ಪಿಗೆಯಿಲ್ಲ.

11. ಒಂದು ಪಾತಳಿಯ ಮೇಲೆ ವಿಚಾರವಾದ ಅವರ ಕಲೆಯನ್ನು ಪೋಷಿ ಸಿದೆ. ಅದು ಪೂರ್ತಿ ಸಹಾನುಭೂತಿಪರ ಮಾನವತಾವಾದವಾದಾಗ ಸಂಪೂರ್ಣ ಕಲೆಯಾಗಿದೆ. ಇದಕ್ಕೆ ಉಜ್ವಲ ಉದಾಹರಣೆ – ಚೋಮನ ದುಡಿ, ಬೆಟ್ಟದ ಜೀವ, ಅಳಿದ ಮೇಲೆ. ಇವುಗಳಲ್ಲಿ ಅವರ ವಿಚಾರವಾದವೂ ಮಾನವತಾವಾದವೂ ಕೈಕೈ ಹಿಡಿದು ಓಡುತ್ತವೆ. ಆದಕ್ಕಾಗಿ ಅವು ಪೂರ್ಣ ಯಶಸ್ವಿ ಕಾದಂಬರಿಗಳು. ಅವುಗಳ ಲ್ಲಿಯೂ ದೋಷಗಳಿಲ್ಲದೆ ಇಲ್ಲ. ಆದರೆ ಪೂರ್ಣ ಯಶಸ್ಸಿನಲ್ಲಿ ದೋಷಗಳಿರಬಾರದೆಂಬ ನಿಯಮವೇನೂ ಇಲ್ಲ.

ಅನುಬಂಧ 1

## ಕೆಲವು ಅಧ್ಯಕ್ಷ ಭಾಷಣಗಳು

# ಕಾರಂತರ ಕಾದಂಬರಿಗಳ ವಿಮರ್ಶೆ

---

ಜಿ. ಎಸ್. ಆಮೂರ

### ಕೆಲವು ಅನಿಸಿಕೆಗಳು

ಕಾರಂತರ ಕಾದಂಬರಿಗಳ ವಿಮರ್ಶೆಯ ಬಗ್ಗೆ ಈಗಾಗಲೇ ಬಂದಿರುವ ಹಲವು ಲೇಖನಗಳಲ್ಲಿ ಕಾರಂತರ ಜೀವನ ಶ್ರದ್ಧೆ, ಕನಸುಗಾರಿಕೆ, ವಸ್ತುವಿನ ಗಟ್ಟಿತನ, ಅವರು ಪ್ರಭಾವಿಯಾಗಿ ಬಳಸುವಂತಹ ಸಾಂಕೇತಿಕತೆಯಂತಹ ಗುಣಾತ್ಮಕ ಅಂಶಗಳನ್ನು ಗುರುತಿಸಲಾಗಿದೆ. ಹಾಗೆಯೇ ಕಾರಂತರ ಕಾದಂಬರಿಗಳ ಮಿತಿಗಳನ್ನು ಗುರುತಿಸಲಿಕ್ಕಾಗಿ ಅವರ ಆದರ್ಶವಾದ, ವಾಸ್ತವಮಾರ್ಗ, ವೈಚಾರಿಕತೆಯ ದರ್ಶನ ಮುಂತಾದವುಗಳನ್ನೂ ಪರಿಶೀಲಿಸಲಾಗಿದೆ. ಈ ದಿನದ ವಿಚಾರ ಸಂಕಿರಣದಲ್ಲಿ ಮಂಡಿಸಲಾದ ಮೂರು ಪ್ರಬಂಧಗಳನ್ನು ಈ ವರೆಗೆ ಕಾರಂತರ ಬಗ್ಗೆ ಬೇರೆ ಬೇರೆ ಕಡೆ ನಡೆದಿರುವ ಚರ್ಚೆಯ ಹಿನ್ನೆಲೆಯಲ್ಲಿ ನೋಡಬೇಕು.

ಡಿ. ಆರ್. ನಾಗರಾಜ ಅವರು ತಮ್ಮ ಪ್ರಬಂಧದಲ್ಲಿ ಕಾರಂತರ ಕಾದಂಬರಿಗಳನ್ನು ಇಂದು ಬೆಳೆದಿರುವಂತಹ, ಕಾದಂಬರಿಯ ಪರಂಪರೆಗೆ ಜೋಡಿಸುವ ಪ್ರಯತ್ನ ಮಾಡಿದರು. ನಾನು ಅವರ ಪ್ರಬಂಧದ ಧ್ವನಿಗಿಂತ ಸ್ವಲ್ಪ ಬೇರೆಯಾದ ವಿಚಾರ ಹೊಂದಿರುವವನು.

ಕಾರಂತರಿಗಿಂತ ಮೊದಲು ಬಂದ ಕಾದಂಬರಿಗಳ ಬಗ್ಗೆ ಅವರು ಇನ್ನೂ ಸ್ವಲ್ಪ ಉತ್ಸಾಹದಿಂದ ಮಾತನಾಡಬಹುದಿತ್ತು. ಯಾಕೆಂದರೆ ಕಾರಂತರು ನಂಬಿಕೊಂಡಂತಹ ವಾಸ್ತವವಾದಿ ಸಂಪ್ರದಾಯ ನಮ್ಮಲ್ಲಿ ಮೊಟ್ಟಮೊದಲಿಗೇ ಬೆಳೆದಂತದ್ದು. ಗುಲ್ವಾಡಿ ವೆಂಕಟರಾಯರ ಇಂದಿರಾಬಾಯಿ ಅಥವಾ ಬೋಳಾರ ಬಾಬೂರಾಯರ ವಾಗ್ದೇವಿ ಕಾದಂಬರಿಗಳನ್ನು ನೋಡಿದರೆ ನಮ್ಮ ಕಾದಂಬರಿ ಮೊದಲು ಇಟ್ಟ ಹೆಜ್ಜೆ ಚಾರಿತ್ರಿಕವಲ್ಲ ಅಥವಾ ಕನಸುಗಾರಿಕೆಯದಲ್ಲ, ವಾಸ್ತವವಾದದ್ದು ಅನ್ನುವುದು ಸ್ಪಷ್ಟವಾಗುತ್ತದೆ. ಮೊಟ್ಟಮೊದಲಿನ ಕಾದಂಬರಿಗಳಲ್ಲಿ ವಾಗ್ದೇವಿ ಗಳಿಸಿದ ಯಶಸ್ಸು ಮೆಚ್ಚತಕ್ಕದ್ದು. ಇದು 1905ರ ಸುಮಾರಿಗೆ ಪ್ರಕಟವಾದದ್ದು ಅಂತ ಹೇಳಿದರು. ಇದು ಅಷ್ಟಾಗಿ ನಿಜವಲ್ಲ.

ವಾಗ್ದೇವಿ ಕಾದಂಬರಿಯ ನಾಯಕಿ ವಾಗ್ದೇವಿ ತನ್ನ ಲೈಂಗಿಕ ಆಕರ್ಷಣೆಯನ್ನು ಮೂಲದ್ರವ್ಯವಾಗಿಟ್ಟುಕೊಂಡು ಸಮಾಜದಲ್ಲಿ ಪ್ರಾಬಲ್ಯ ಪಡೆದುಕೊಳ್ಳುತ್ತಾಳೆ. ಇಲ್ಲಿನ ವರ್ಣನಾರೀತಿ, ಈ ಕಾದಂಬರಿ ಬೆಳೆದ ಮಾರ್ಗ ಹೆಚ್ಚಾಗಿ ವಾಸ್ತವ ಮಾರ್ಗ.

ಗಳಗನಾಥರು ಸಾಹಿತ್ಯ, ಸಂಸ್ಕೃತಿಗೆ ಕೊಟ್ಟ ದೇಣಿಗೆ ಬಹಳ ದೊಡ್ಡದು ನಿಜ. ಆದರೆ ಇದರಿಂದ ಕಾದಂಬರಿಯ ರಚನೆಗೆ ಹೇಗೆ ಮತ್ತು ಎಷ್ಟು ಸಹಾಯ ಆಯಿತು ಅನ್ನೋದು ನನ್ನ ಮಟ್ಟಿಗೆ ವಿವಾದಾಸ್ಪದವಾದ ವಿಷಯ.

ಇಲ್ಲಿ ಮಂಡಿಸಲಾದ ಪ್ರಬಂಧಗಳನ್ನು ನೋಡಿದರೆ, ಕಾರಂತರ ಕಾದಂಬರಿಗಳನ್ನು ಎರಡು ಭಾಗವಾಗಿ ವಿಂಗಡಿಸಿಕೊಳ್ಳುವುದರಲ್ಲಿ ಒಂದು ವಿಧವಾದ ಐಕಮತ್ಯ ಕಂಡು ಬಂದಿತು. ಡಾ. ಭೈರಪ್ಪನವರು ಹೇಳಿದ ಹಾಗೆ, ಕಾರಂತರ ಕೆಲವು ಕಾದಂಬರಿಗಳು ಹೆಚ್ಚು ಕಾವ್ಯಾತ್ಮಕ ಅಥವಾ ಸೃಜನಶೀಲತೆಯನ್ನು ಹೊಂದಿದ್ದರೆ ಉಳಿದವು ಸ್ವಲ್ಪ ಹೆಚ್ಚು ವಿಚಾರಾತ್ಮಕವಾಗಿ, ಅಷ್ಟು ಮಟ್ಟಿಗೆ ಕಾವ್ಯಗುಣವನ್ನು, ಸೃಜನಶೀಲ ಅಂಶಗಳನ್ನು ಕಳೆದುಕೊಂಡಿರುವಂತಹವು ಎನ್ನುವ ಈ ವಿಂಗಡಣೆಯನ್ನು ಮೂರು ಜನ ವಿಮರ್ಶಕರೂ ಕೂಡ ಸಮಾನವಾಗಿ ಒಪ್ಪಿಕೊಂಡ ಹಾಗೆ ಕಂಡುಬಂತು.

ಕಾರಂತರ ಜೀವನ ಶ್ರದ್ಧೆ ಬಹಳ ಸೀಮಿತವಾದದ್ದು ಎಂದು ಜಿ.ಎಚ್. ನಾಯಕರು ಹೇಳಿದರು. ಜಿ. ಎಚ್. ನಾಯಕರ ವಿಮರ್ಶಾಯ ವಿಧಾನ ಸ್ವಲ್ಪ 'Typology' ವಿಧಾನದ್ದು. ಅವರು ಕಾರಂತರ ಕಾದಂಬರಿಗಳ ನಾಯಕರನ್ನ ಸ್ಥೂಲವಾಗಿ ವಿಂಗಡಿಸಿಕೊಂಡು ಅವರ ಜೀವನ ಶ್ರದ್ಧೆಯ ವಿವರಗಳನ್ನು ಕಂಡುಕೊಳ್ಳಲು ಪ್ರಯತ್ನ ಪಟ್ಟರು. ಸಮಾಜ ಋಣ, ದುಡಿಮೆ, ಮುಂತಾದ ಭಾರತೀಯ ಮೌಲ್ಯಗಳ ಮೇಲೆಯೇ ಕಾರಂತರ ಕಾದಂಬರಿಗಳಲ್ಲಿ ಮೌಲ್ಯಗಳ ಕಲ್ಪನೆ ಅವಲಂಬಿಸಿದೆ ಅಂತ ಅವರು ಹೇಳಿದರು. ಅವರು ಹೇಳಿದ ಮುಖ್ಯವಾದ ಮಾತು ಇದು : "ಕಾರಂತರ ಕಾದಂಬರಿಗಳ ನಾಯಕರು ವೈಚಾರಿಕತೆಯ ತಿಕ್ಕಾಟಕ್ಕೆ ಮನಸ್ಸು ಕೊಡೋದಿಲ್ಲ. ಈ ವೈಚಾರಿಕ ಪ್ರಖರತೆಯಲ್ಲಿ ಹೊಸ ಮೌಲ್ಯಗಳನ್ನು ಕಂಡುಕೊಳ್ಳೋದಿಲ್ಲ." ಇದು ವಿಚಾರಕ್ಕೆ ಅರ್ಹವಾದ ಸಂಗತಿ. ಆದರೆ, ಕಾರಂತರು ಒಪ್ಪಿಕೊಳ್ಳುವಂಥ ಮಾನವತಾವಾದ, ಅಂದರೆ, ಧರ್ಮದ ಆಶ್ರಯವನ್ನು, ಸಂಪ್ರದಾಯದ ಆಶ್ರಯವನ್ನು ಬಿಟ್ಟುಕೊಟ್ಟು ಮಾನವನ ಜೀವನವನ್ನು ನಿಕಷವಾಗಿಟ್ಟುಕೊಂಡು, ಅನುಭವವನ್ನು ನಿಕಷವಾಗಿಟ್ಟುಕೊಂಡು, ಮಾನವೀಯ ಮೌಲ್ಯಗಳನ್ನು ಒಪ್ಪಿಕೊಂಡು ಇರುವಂಥ ದೃಷ್ಟಿ. ಈ ದೃಷ್ಟಿಯನ್ನು ಸಾಂಪ್ರದಾಯಿಕ ಅಂತ ಹೇಳೋದು ಕಷ್ಟ. ಯಾಕೆಂದರೆ, ಭಾರತೀಯ ಸಮಾಜದಲ್ಲಿ, ನಮ್ಮ ಕನ್ನಡ ಸಂಸ್ಕೃತಿಯ ಬಗ್ಗೆ ಹೇಳೋದಾದರೂ ಕೂಡ ಧರ್ಮ ಮತ್ತು ಸಂಸ್ಕೃತಿ ಇವುಗಳ ಹಿನ್ನೆಲೆಯಲ್ಲಿ, ನಮ್ಮ ಮೌಲ್ಯಗಳೆಲ್ಲ, ಧಾರ್ಮಿಕ ಮೂಲದವೇ ಆದವು. ಈ ಮೌಲ್ಯಗಳನ್ನ ಕಾರಂತರು ಪ್ರಶ್ನಿಸಿದರು. ಅನುಭವಕ್ಕೆ ಒಪ್ಪದಂತಹ ಮೌಲ್ಯಗಳನ್ನು ಅವರು ಒಪ್ಪಲಿಲ್ಲ. ಇವು ಸ್ಥಿರಸಮಾಜದ ಮೌಲ್ಯಗಳೇ ಇರಬಹುದು. ಆದರೆ, ಈ ಮೌಲ್ಯಗಳನ್ನು ಅರಸುವಂತಹ, ಅವರು ಆರಿಸುವ ವಿವರಗಳು ಕೂಡ ಧರ್ಮ ಅಲ್ಲ, ಅನುಭವ ಮತ್ತು ಮಾನವನ ಜೀವನ. ಈ ದೃಷ್ಟಿಯಿಂದ ಕಾರಂತರ ಮೌಲ್ಯದರ್ಶನ ನನಗೆ ಕ್ರಾಂತಿಕಾರಕವಾಗಿ ಕಾಣುತ್ತದೆ. ಧಾರ್ಮಿಕ ಕಲ್ಪನೆಗಳನ್ನು ಬಿಟ್ಟುಕೊಟ್ಟು,

ಧಾರ್ಮಿಕ ಮೂಲಗಳನ್ನು ಬಿಟ್ಟುಕೊಟ್ಟು, ಕೇವಲ ಮನುಷ್ಯನ ಜೀವನದಲ್ಲಿ, ಅನುಭವದಲ್ಲಿ ಅವರು ಈ ಮೌಲ್ಯಗಳನ್ನು ಅರಸಲು ತೊಡಗಿದರು. ಇದು ಕ್ರಾಂತಿಕಾರಕವಾದ ಕೆಲಸ. ಮುಂದೆ ಬಂದಂತಹ ಕಾದಂಬರಿಕಾರರೂ ಇದೇ ಕೆಲಸವನ್ನು ಮುಂದುವರೆಸಿಕೊಂಡು ಹೋದರು ಅಂತ ನನ್ನ ಅನಿಸಿಕೆ.

ನಾವು ಕಾದಂಬರಿಯ ಶೈಲಿಯ ಬಗ್ಗೆ ಮಾತಾಡೋವಾಗ ಒಂದು ಮಾತು ನೆನಪಿಡಬೇಕು. fictional style ಅಥವಾ ಕಾದಂಬರಿಯ ಶೈಲಿ ಅನ್ನುವುದು ಸಾಮಾಜಿಕ ಅವಶ್ಯಕತೆಯಾಗಿ ಬರುತ್ತದೆ. ಕಾದಂಬರಿಕಾರನ ವೈಯಕ್ತಿಕ ಶೈಲಿಯ ಮೂಲ ಅವನ ಅಂತರ್ಯದಲ್ಲಿರುತ್ತದೆ. ಅವನ unconscious ಅಥವಾ ಅವನ ಅನುಭವ ಅಥವಾ ಅವನಿಗೆ ಪರಿಚಿತವಾದ ಅನೇಕ ಅಂಶಗಳು ಅವನ ಶೈಲಿ, ಪ್ರತಿಮೆ. ಭಾಷೆ ಇವುಗಳಿಗೆ ಸಂಬಂಧಪಟ್ಟವಾದ್ದರಿಂದ ಕಾದಂಬರಿಕಾರನ ವೈಯಕ್ತಿಕ ಶೈಲಿಯ ಮೂಲವನ್ನ ಸೃಜನಶೀಲ ಸಾಹಿತ್ಯದ ಅಂತರ್ಯದಲ್ಲಿ ಹುಡುಕಬೇಕು. ಆದರೆ fictional style ಅಥವಾ ಕಾದಂಬರಿಯ ಶೈಲಿ ಇದು ಐತಿಹಾಸಿಕ ಬೆಳವಣಿಗೆಗೆ ಸಂಬಂಧಿಸಿದ್ದು, ಈ ದೃಷ್ಟಿಯಿಂದ ಕಾರಂತರ ಕಾದಂಬರಿಗಳನ್ನು ಅವರ ಕಾಲದಿಂದ ಬೇರ್ಪಡಿಸಿ ನೋಡಿದಾಗ–ಅಥವಾ ಇದು ಒಂದು ರೀತಿಯಿಂದ ಸಹಜ ಕೂಡ-ಒಂದು ಕಾದಂಬರಿಯ ಬೆಲೆಯನ್ನು ಕಟ್ಟುವಾಗ ಆ ಕಾದಂಬರಿಯ ನಂತರ ಬಂದ ಕೃತಿಗಳನ್ನು ಕೂಡ ನೋಡಬೇಕಾಗುತ್ತದೆ. ಪರಂಪರೆಯ ಕಲ್ಪನೆ ಕೂಡ ಪ್ರಯೋಗದಿಂದ ನಮಗೆ ಬದಲಾಗುತ್ತದೆ. ಈ ಮಾತಿನ ಹಿನ್ನೆಲೆಯಲ್ಲಿ ಐತಿಹಾಸಿಕ ದೃಷ್ಟಿಯ ಮಹತ್ವವನ್ನು ನೆನಪಿಡಬೇಕು. ಕಾರಂತರ ಕಾದಂಬರಿಗಳ ಇತಿಮಿತಿಗಳು, ಅವರು ನಂಬಿದ ತತ್ವಜ್ಞಾನದ, ಅವರು ಒಪ್ಪದಂತಹ ಜೀವನ ದರ್ಶನದ, ಮಾನವತಾವಾದದ ಇತಿಮಿತಿಗಳೇ ಅಂತ ನನ್ನ ಗ್ರಹಿಕೆ. ಇನ್ನು ಕೆ. ವಿ. ನಾರಾಯಣ್ ಅವರು ಮಹತ್ವದ ಪ್ರಶ್ನೆಗಳನ್ನು ಮುಂದಿಟ್ಟಿದ್ದಾರೆ. ನಾವು ಕಾದಂಬರಿಗಳನ್ನ ವಿಮರ್ಶೆ ಮಾಡುತ್ತಿರುವುದು ಪಾಶ್ಚಾತ್ಯ ವಿಚಾರಧಾರೆಯ ನೆರವಿನಿಂದ. ಪಾಶ್ಚಾತ್ಯರಿಗೆ ಇದ್ದ ಕಾದಂಬರಿಯ ಕಲ್ಪನೆಯನ್ನು ಆಧರಿಸಿ ನಾವು ವಿಮರ್ಶೆ ಮಾಡ್ತಾ ಇದ್ದೇವೆ. ಆದರೆ ಇದು ಕೇವಲ Anxiety ಆಗಿ ಉಳಿದಿದೆ. ನಮ್ಮ ಸಾಂಸ್ಕೃತಿಕ ಇತಿಹಾಸದಲ್ಲಿ, ಸಾಹಿತ್ಯದ ಇತಿಹಾಸದಲ್ಲಿ ಕಾದಂಬರಿಯ ರೂಪ ಹೊಸದಾದರೂ ಕಾಲ್ಪನಿಕ ಸಾಹಿತ್ಯ (Fiction) ನಮ್ಮಲ್ಲಿ ಜಾನಪದ ಮೂಲಗಳಲ್ಲಿ, ಬಾಣನ ಕಾದಂಬರಿ, ಕಥಾಸರಿತ್ಸಾಗರದಂತಹ ಸಂಸ್ಕೃತ ಮೂಲಗಳಲ್ಲಿ ಬಹಳ ಇವೆ. ಇವುಗಳಿಂದ ನಾವು ಈ ನಿರೂಪಣಾಶೈಲಿಯ ಸ್ವರೂಪವನ್ನು ಅಥವಾ ಕಲ್ಪನಾ ಸಾಹಿತ್ಯದ ಸ್ವರೂಪವನ್ನು ನಿರ್ಧರಿಸಲು ಸಾಧ್ಯವಾದೀತು. ಈ ರೀತಿಯ ತಾತ್ವಿಕ ದೃಷ್ಟಿಯಿಂದಲೂ ಕೂಡ ಅವರ ವಿಮರ್ಶೆ ಹಿಡಿದ ಹಾದಿ ಕೂಡ ಪಾಶ್ಚಾತ್ಯ ಕಾದಂಬರೀ ವಿಮರ್ಶೆಯ ಹಾದಿಯೇ. ಅಂದರೆ ಮತ್ತೆ ಮತ್ತೆ ಆವರ್ತನಗೊಳ್ಳುವ ಅಂಶಗಳ ಬಗ್ಗೆ ಸಾಮಾನ್ಯೀಕರಣ (Generalisation)ವನ್ನ ಮಾಡುವುದು. ಪಾಶ್ಚಾತ್ಯರು

ಮಾಡಿರುವ Structuralist ವಿಮರ್ಶೆಯ ಜಾಡಿನ ಪ್ರಯತ್ನ. ಇದನ್ನು ಅವರು ಬಹಳ ಚೆನ್ನಾಗಿ ಮಾಡಿದರು. ನಮಗೆ ಹೆಚ್ಚಾಗಿ ಇರುವಂತಹ Anxiety ಯನ್ನು ಅವರು ಹೇಳಿದರು. ಸಂಗೀತದ ಮಾತು ಬಂತು. ಸಂಗೀತದ ಲಯಗಳನ್ನು ಕಾರಂತರು ತಮ್ಮ ಕಾದಂಬರಿಯ ಶಿಲ್ಪದ ವಿನ್ಯಾಸಕ್ಕಾಗಿ ಬಳಸಿದಂತಹ ಕ್ರಮವನ್ನು ಅವರು ಹೇಳಿದರು. ಕಾರಂತರು ಕಾದಂಬರಿಯ ಬಗ್ಗೆ ಇಟ್ಟುಕೊಂಡ ಒಟ್ಟು ಶಿಲ್ಪದ ಕಲ್ಪನೆ, ಇದು ಕೇವಲ ನಮ್ಮ ಕನ್ನಡ ಸಂಸ್ಕೃತಿಯ ಮೂಲದ್ದೇ?

# ಕಾರಂತರು ವ್ಯಕ್ತಿಯಾಗಿ - ಕಾದಂಬರಿಕಾರರಾಗಿ

ಪಿ. ಲಂಕೇಶ್

ಕಾರಂತರ ಬಗ್ಗೆ ನಾವು ಮಾತನಾಡುವುದಕ್ಕೆ ಒಂದೇ ಒಂದು ಸಮರ್ಥನೆ ಏನು ಅಂದರೆ, ಕಾರಂತರು ಬರೀ ದಕ್ಷಿಣ ಕನ್ನಡವನ್ನ ಡಾಕ್ಯುಮೆಂಟ್ ಮಾಡಿದ್ದರೆ, ಸಾಕ್ಷ್ಯ ಚಿತ್ರವಾಗಿ ನಮಗೆ ಕೊಟ್ಟಿದ್ದರೆ, ನಾವು ಅವರನ್ನ ಓದುತ್ತಿರಲಿಲ್ಲ, ಚರ್ಚಿಸುತ್ತಿರಲಿಲ್ಲ. ಕಾರಂತರು ದಕ್ಷಿಣ ಕನ್ನಡ ಜನಜೀವನವನ್ನು ಫೋಟೋಗ್ರಾಫ್ ಮಾಡಿದ್ದರೆ ನಾವವರನ್ನ ಚರ್ಚಿಸುತ್ತಿರಲಿಲ್ಲ. ಆದರೆ ಈ ಕಾರಂತರು ಈ ಜನಜೀವನವನ್ನು ಸರಳ ರಗಳೆಯಲ್ಲಿ ಬರೆದಿದ್ದರೆ ಅವರು ಕಾದಂಬರಿಕಾರರಾಗುತ್ತಿರಲಿಲ್ಲ. ಬಹಳ ವಿಚಿತ್ರ ಇದು.

ಚೋಮನದುಡಿ ಕಾದಂಬರಿಯ ಕೇಂದ್ರ ಸಮಸ್ಯೆ ಹಸಿವು ಅಲ್ಲ; ಅವಮಾನ, ಹ್ಯೂಮಿಲಿಯೇಷನ್. ಒಬ್ಬ ಮನುಷ್ಯ ಹಸಿವಿನಿಂದ ದುರಂತಕ್ಕೆ ಈಡಾಗಲ್ಲ, ಬಡತನದಿಂದ ಈಡಾಗ್ತಾನೆ. ಆದರೆ ಬಡತನದ ಘೋರ ಸ್ವರೂಪ ಹುಲುಮನುಜನಲ್ಲಿ ಹೇಗೆ ವ್ಯಕ್ತವಾಗುತ್ತೆ ಅಂದರೆ, ಹ್ಯೂಮಿಲಿಯೇಷನ್‌ನಲ್ಲಿ, ಅವಮಾನದಲ್ಲಿ, ಮುಖಭಂಗದಲ್ಲಿ ವ್ಯಕ್ತವಾಗುತ್ತೆ. ಅದು ಅಲ್ಲಿನ ಸಮಸ್ಯೆ. ನೀವು ನಿಜವಾಗಲೂ ಕವಿಯಾಗಿದ್ದರೆ, ಕಾದಂಬರಿಕಾರರಾಗಿದ್ದರೆ, ನೀವು ಮಲ್ಲಿಗೆ ಹೂ ಅಂತ ಬರೀರಿ. ಅದರಿಂದ ವಾಸನೆ ಹೊರಡಕ್ಕೆ ಶುರುವಾಗುತ್ತೆ. ಒಬ್ಬ ಕವಿ ಸರಿಯಾದ ಸಂದರ್ಭದಲ್ಲಿ ಹೇಳಿದ ಕೂಡ್ಲೆ ಅದು ಸಂಕೇತವಾಗಿಬಿಟ್ಟಿರುತ್ತೆ, ಪ್ರೇಮ ಆಗಿಬಿಟ್ಟಿರುತ್ತೆ, ಆಗ ಅದು ನೆನಪಾಗಿಬಿಡುತ್ತೆ. ಅದೇ ಒಬ್ಬ ಮೂರ್ಖ ಹೇಳಿದರೆ ಆ ಮಲ್ಲಿಗೆಗೆ ಏನೂ ಬೆಲೆ ಇರಲ್ಲ. ಮಲ್ಲಿಗೆ ಮಲ್ಲಿಗೆಯಾಗೇ ಇರುತ್ತೆ, ಅದನ್ನ ಮಾರಬಹುದಷ್ಟೆ.

ಕಾದಂಬರಿ ನಿಮ್ಮ ವೃತ್ತಪತ್ರಿಕೆಯ ಗುಣವನ್ನು ಕಳೆದುಕೊಳ್ಳಲೇಕೂಡ್ದು. ಅದು ಕಳಕೊಂಡ ಕೂಡ್ಲೆ ಕಾದಂಬರಿ ಗುಣ ಸತ್ತುಬಿಡುತ್ತೆ. Promissory note ಅಂತ ಹೇಳಿದ್ರೆ, ಹೇಳೋದನ್ನ ಸಂಗ್ರಹವಾಗಿ ಗದ್ಯದ ಎಲ್ಲ ಗುಣಗಳನ್ನು ಉಪಯೋಗಿಸಿಕೊಂಡು ಪಾತ್ರ ಪೋಷಣೆ ಮಾಡುತ್ತ Promissory note ಗುಣದ ಹಾಗೆ It should be a document at one level. ಅದಕ್ಕೇ ಯಾವ ಕಾದಂಬರೀನು ಸರಳರಗಳೆಯಲ್ಲಿ ಗತಿ ಕಾಣುವುದಿಲ್ಲ. ನೀವು ನಾವು ಎಲ್ಲರೂನೂ ನಾಳೆ ಸರಳ ರಗಳೆಗಳಲ್ಲಿ ಬರೆದ ಕಾದಂಬರೀನ ಯಾರೂ ಓದೋದೇ ಇಲ್ಲ. ಇನ್ನೊಂದು, ಕಾದಂಬರೀಲಿ ಬರೀ ಡಾಕ್ಯುಮೆಂಟರಿ ಎಲಿಮೆಂಟ್ ಇದ್ದರೆ, ಅದು ಬರೀ ಸಾಕ್ಷ್ಯ ಚಿತ್ರದ

ಮಟ್ಟದಲ್ಲಿ ಕೆಲ್ಸ ಮಾಡ್ತ ಇದ್ದರೆ ಅದು ಕಾದಂಬರಿ ಆಗೋದೇ ಇಲ್ಲ. ಆದ್ದರಿಂದ ಕಾವ್ಯ ಮತ್ತು ಸಾಕ್ಷ್ಯ ಚಿತ್ರ ಎರಡೂ ಸೇರಿದ್ರಿಂದ್ಲೇ ಕಾದಂಬರಿ ಅಂತ ಓದೋದು. ಆ ದೃಷ್ಟಿಯಿಂದ ನೋಡಿದಾಗ ಕಾರಂತರು ಅತ್ಯುತ್ತಮ ಕಾದಂಬರಿಕಾರರು ಎಂಬುದ ರಲ್ಲಿ ಸಂಶಯವೇ ಇಲ್ಲ. ನೀವು ಎಷ್ಟೆಷ್ಟೋ ವಿವರಣೆಗಳನ್ನ ಹೇಳ್ತಾ ಹೋಗ್ತೀರ– ಕಾರಂತರು ಅಂಥ ಪಾತ್ರ ಸೃಷ್ಟಿ ಮಾಡಿದ್ದಾರೆ, ಇಂಥ ಪಾತ್ರ ಸೃಷ್ಟಿ ಮಾಡಿದ್ದಾರೆ ಅಂತ ತಾನೆ ವಿವರಿಸೋದು. ಆದರೆ ಕಾರಂತರು ನೋಡಿ, ಎಲ್ಲೂ ಗಿಲೀಟೇ ಇಲ್ಲ. ಎಲ್ಲೂ ನಿಮ್ಮನ್ನ ಮೋಸ ಮಾಡೋ ಗುಣಾನೆ ಅಲ್ಲ. ಯಾರನ್ನೂ ಮೆಚ್ಚಿಸೋಕೆ ಪ್ರಯತ್ನಿಸುವುದಿಲ್ಲವಲ್ಲ ಅಲ್ಲಿ ಪ್ರಾಮಾಣಿಕತೆ ಕಾಣಿಸ್ತದೆ.

ವನವಾಸ ಅಂತ ಹೇಳಿದ್ರೆ ವನ ಮತ್ತು ವಾಸ ಆಗೋದಿಲ್ಲ. ವನವಾಸ ಶ್ರೀರಾಮನಿಗೆ ಏನು ಮಾಡ್ತು, ಪಾಂಡವರಿಗೆ ಏನು ಮಾಡ್ತು, ಅದು ಮುಖ್ಯ. ಈ ವನವಾಸದಿಂದ, ಏಕಾಂತದಿಂದ ಮತ್ತು ಆ ರೀತಿಯ ನೋವಿನಿಂದ ಏನಾಯ್ತು ಅನ್ನೋದು ಮುಖ್ಯವಾದದ್ದು. ಸಮುದ್ರ ಕಾರಂತರಲ್ಲಿ ಒಂದು ಅನಂತವಾದ, ಅಪಾರ ವಾದ, ಜೀವನದ ಹಿನ್ನೆಲೆಯಾಗಿ ಬರುತ್ತೆ. ಆದರೆ ಆ ಜೀವನ ಸೃಷ್ಟಿಸುವಾಗ ಬರೀ ಸಮುದ್ರ ಮಾತ್ರವಲ್ಲ, ಇಡೀ ದಕ್ಷಿಣ ಕನ್ನಡ. ಇಷ್ಟೊಂದು ಸುಂದರವಾದ ಜಿಲ್ಲೆ ಇದು, ಇಲ್ಲಿ ಎಂತಹ ಅನ್ಯಾಯ, ಸ್ವಯಂ ವಿರೋಧ ಮತ್ತು ಮನುಷ್ಯ ಎಷ್ಟು ಕನಿಷ್ಠ ಆಗಿ ದ್ದಾನೆ, ದುಃಖ ಅನುಭವಿಸುತ್ತಿದ್ದಾನೆ, ಇಂಥ ಪ್ರಶ್ನೆಗಳನ್ನು ಕೇಳಿಕೊಂಡೇ ಬರೀತಾರೆ ಕಾರಂತರು. ಪ್ರಕೃತಿ ಅನ್ನೋದು ಸ್ಟೇಜ್ ಪ್ರಾಪರ್ಟಿ ಅಲ್ಲವೇ ಅಲ್ಲ. ಒಬ್ಬ ಮೂರ್ಖ ನಾದ ವ್ಯಕ್ತಿಗೆ, ಕಾದಂಬರಿಕಾರನಿಗೆ ಇದು ಸ್ಟೇಜ್ ಪ್ರಾಪರ್ಟಿ ಆಗುತ್ತೆ. ಕಾಡು ಇದ್ರೆ ಚೆನ್ನಾಗಿರುತ್ತೆ. ಒಂದು ಕಾಡನ್ನ ವರ್ಣನೆ ಮಾಡೋಣ, ಅನ್ನಿಸುತ್ತೆ. ಕಾರಂತರು ಸಹಜತೆಗೆ ಬಹಳ ಹತ್ತಿರವಾದ ಮನುಷ್ಯ. ನೀವು ಇದನ್ನ ಕೇಳ್ದಾಗ ಹೌದಪ್ಪ, ಹೌದೌದು ನಾನದನ್ನ ನೋಡ್ದೆ ಅಂತಾರೆ. ಆದರೆ ನಾನು ನೋಡಿ ದ್ದಕ್ಕಿಂತ ಬಹಳ ಚೆನ್ನಾಗಿದೆ ಅಲ್ಲ ಅನ್ನಿಸಬಹುದು. ಯಾವಾಗ ಅಂದ್ರೆ ಕಾದಂಬರಿ ಅರ್ಥಪೂರ್ಣವಾದಾಗ.

ಇನ್ನೊಂದು ಕಾರಂತರು ಸದಾ ಕೇಳಿಕೊಳ್ಳೋ ಪ್ರಶ್ನೆ ಅಂದರೆ, ನನ್ನ ಪ್ರಕಾರ, ಇದು ಪರಂಪರಾಗತವಾಗಿ ನಡಕೊಂಡು ಬಂದಿರೋ ಜೀವನ. ಕಾರಂತರಿಗೆ ಅನಾಗರಿಕ ಜನ ಅಂದರೆ ಆಸೆ. ಪಾರೋತಿ, ಸರಸೋತಿ ಅಂತೋರು, ಚೋಮನಂತೋರು. ಕಾರಂ ತರು ಚೋಮ ಅಂತ ಬರೀದೆ ಇದ್ದಿದ್ರೆ, ಚೋಮನ ಹೆಸರು ಗೊತ್ತೇ ಇರ್‍ತಿರಲಿಲ್ಲ. ಅಂಥ ಜನ ಯಾವ ಬದುಕನ್ನು ಬಾಳಿದ್ದಾರೆ. ಯಾವ ಮೌಲ್ಯಗಳನ್ನ ಬೆಳೆಸಿದ್ದಾರೆ, ಯಾರ ಕಲೆ ಯನ್ನ ನಮಗೆ ಬಿಟ್ಟು ಹೋಗಿದ್ದಾರೆ ಅಂತ ಸದಾ ಪ್ರಶ್ನೆ ಕೇಳ್ಕೋತಾರೆ ಕಾರಂತರು. ನಮ್ಮ ಸ್ನೇಹಿತರೊಬ್ಬರು ಹೇಳಿದರು : ಚೋಮನ ದುಡಿಯಲ್ಲಿ ದುಡಿ ಬಾರ್‍ಸೋದು ಅಗ್ನಿ, ಮರಳಿ ಮಣ್ಣಿಗೆಯಲ್ಲಿ ರಾಮ ಬಂದು ಸಮುದ್ರದ ದಂಡೆಯಲ್ಲಿ ಕೂತು

ಸೌಂದರ್ಯ ಸವೀತ ಸಂಗೀತ ಬಾರಿಸುವುದೇ ಅಗ್ಲಿ ಕೃತಕವಾಗಿದೆ ಅಂತ. ಆದರೆ ಕಾರಂತರು ಒಂದು ರೀತಿಯ ರೊಮ್ಯಾಂಟಿಕ್ ಕಾದಂಬರಿಕಾರರು. ರೊಮ್ಯಾಂಟಿಕ್ ಕಾದಂಬರಿಕಾರರಾಗಿ ಅವರು ಪಡಪೋಸಿ ಕೆಲಸ ಮಾಡೋದಿಲ್ಲ. ಅದೇ ಒಳ್ಳೇ ಗುಣ ಪಡಪೋಸಿ ಕೆಲ್ಸ ಇಲ್ದೆ ರೊಮ್ಯಾಂಟಿಕ್ ಆಗಿರೋದು. that is very lovely. ಅಲ್ಲಿ ಒಬ್ಬ ಚೋಮ ದುಡಿ ಬಾರಿಸ್ತಾ ಇದ್ದಾಗ, ಇಲ್ಲಿ ಒಬ್ಬ ರಾಮ ಸಮುದ್ರ ನೋಡ್ತಾ ಇದ್ದಾಗ, ನಿಮ್ಮ ಜೀವನದ ಸಣ್ಣತನಕ್ಕೆ ಅನಂತತೆ ಕಲ್ಪಿಸುವುದಿದೆಯಲ್ಲ ಅದು ಮೆಚ್ಚುವಂತದ್ದು.

ನಾನು ಕಾರಂತರ ದೋಷಗಳಿಗೆ ಬರ್ತೇನೆ. ಚೋಮನಂಥ ಸುಖಪುರುಷ ಅವನ ಯಜಮಾನ ಇದಾನಲ್ಲ ಅವನಲ್ಲ. ಕಾರಂತರು ಏನು ಮಾಡ್ತಾರೆ ಅಂದ್ರೆ, ಇನ್ನೊಬ್ಬ ರಾಗಿದ್ರೆ, ನಾವೇನು ಹೇಳ್ತಿದ್ವಿ. ಚೋಮನ ದುಡಿ ಕುರಿತು ಅನೇಕ ಪ್ರಶ್ನೆ ಕೇಳ್ತಿದ್ವಿ. ನಾವು ನೀವು ಕಾದಂಬರಿ ಬರೆದ್ರೆ ಈ ಯಜಮಾನನಿಗೆ ಹೊಲ ಮನೆ ಇರುತ್ತೆ. ಒಬ್ಬ ಮಗಳಿರ್ತಾಳೆ. ಅವಳನ್ನ ಚಿಕ್ಕಂದಿನಿಂದ ಬಹಳ ಚೆನ್ನಾಗಿ ಬೆಳೆಸಿರ್ತಾನೆ. ಈ ಹೆಣ್ಮಗ ಳಿಗೆ ತೊಂದ್ರೆ ಆದ ಕೂಡ್ಲೆ, ಗಂಡು ಮಗ ಸಾಹುಕಾರನ ಮಗಳನ್ನ ಪ್ರೀತಿಸಿದ ಕೂಡ್ಲೆ, ಅಲ್ಲಿ ಅನೇಕ ದುರಂತ ಆಗುತ್ತೆ. ಇವನಿಗೂ ದುರಂತ ಆಗುತ್ತೆ-ಅಂತ ಹೇಳ್ತೀವಿ. this becomes silly. ಈ ಡಾಕ್ಯುಮೆಂಟ್ ಡಾಕ್ಯುಮೆಂಟ್ ಅಲ್ಲದೆ, ಕಾರಂತರ ರೊಮ್ಯಾಂಟಿಕ್ ನೇಚರ್ ಮತ್ತು ಈ ಡಾಕ್ಯುಮೆಂಟರಿ ಗುಣ ಏನು ಅಂದರೆ, ಜೀವನ ದಲ್ಲಿ ಹೇಗೆ ಗೊಂದಲಮಯವಾಗಿ ಯಾವುದೇ ಒಂದು ಕಾರಣ ಇಲ್ದೆ ಎಷ್ಟು ಅರ್ಥರಹಿತವಾಗಿ ಚಲಿಸುತ್ತೆ ಅನ್ನೋದನ ಹಾಗಾಗೇ ಇಟ್ಟು ಬಿಡ್ತಾರೆ. ಚೋಮನ ಈ ಹುಡುಗರೆಲ್ಲ ಹೊರಟುಹೋಗ್ತಾರೆ. ಅಲ್ಲೊಬ್ಬ ಹಾಳಾಗಿ ಹೋಗ್ತಾನೆ. ಒಬ್ಬ ಸತ್ತು, ಇನ್ನೊಬ್ಬ ಕ್ರಿಶ್ಚಿಯನ್ ಆಗ್ತಾನೆ, ಆ ಹುಡುಗೀನ ಅವಮಾನ ಮಾಡ್ಬಿಟ್ಟು ಅವಳಿಗೆ ಒಂದು ಕಣ ಕೊಡಿಸ್ಬಿಟ್ಟು ಅವಳನ್ನ ಪ್ರೀತಿಸೋದು ಅಥವಾ ಶ್ರೀಮಂತರು ತಾವು ಮೊದಲೇ ಲವ್ ಮಾಡಿದ್ವಿ ಅಂತ ಹೇಳೋದೇ ಇಲ್ಲ. ಜೀವನದಲ್ಲಿ ಹೇಗಾಗುತ್ತೆ, ಏಕಾಗುತ್ತೆ ಅದನ್ನ ಹಾಗೆ ಇಟ್ಟು ಬಿಡೋದು, ಒಂದು ರೀತೀಲಿ ಡಾಕ್ಯುಮೆಂಟರಿ ಆಗಿರುತ್ತೆ. ಅದಕ್ಕೇ ಅದು ಅಷ್ಟೊಂದು ಪರಿಣಾಮಕಾರಿಯಾಗಿರೋದು. ಇನ್ನೊಂದು ದೃಷ್ಟಿಯಲ್ಲಿ ನೋಡಿದರೆ ಅದು ಬಹಳ ರೊಮ್ಯಾಂಟಿಕ್ ಆಗಿ ಕಾಣುತ್ತೆ. ಏಕೆ ಅಂದರೆ, ಅವನು ನೋವಾದಾಗಲೆಲ್ಲ ದುಡಿ ಬಾರಿಸ್ತಾ ಇರ್ತಾನೆ. ಇವನಿಗೆ ಏನೋ ಒಂದು ಪರಕೀಯತೆ ಇರುತ್ತೆ. ಅದನ್ನ ಹೇಳ್ತಾ ಇರ್ತಾನವನು. ಆದರೆ ಕಾರಂತರು ಮುಂದೆ ಹೋದ್ರೆ ಏನನ್ನುತ್ತೆ ಅಂದರೆ, ಚೋಮನ ಜೀವನ ಬಹಳ ಅರ್ಥಪೂರ್ಣವಾಗಿದೆ; ಅವನಿಗೆ ಎಲ್ಲಾ ಹ್ಯೂಮಿಲಿಯೇಷನ್ ಮತ್ತು ಅವಮಾನ ಇಟ್ಟುಕೊಂಡು ಕೂಡ ಬಹಳ ಅರ್ಥಪೂರ್ಣ ಆಗಿರುತ್ತೆ. ಆದರೆ ಯಜಮಾನ

ಇರ್‍ತಾನಲ್ಲ. ಅವನು ದುಡ್ಡು ಇಟ್ಕೋಳ್ಳೋದು, ಇಟ್ಕೊಂಡು ಅಪ್ಪನ ಮಾತು ಕೇಳೋದು ಇದೇ ಆಗಿರುತ್ತೆ. ಇದು ಮಹಾ ತಲೆ ತಿನ್ನುವ ಮತ್ತು ಮೂರ್ಖತನದಿಂದ ಕೂಡಿರುತ್ತೆ.

ಕಾರಂತರು ಡಾಕ್ಯುಮೆಂಟ್ ಮಾಡ್ಬಾಗ ಅದನ್ನ ನಾವು ಯೋಚನೆ ಮಾಡ್ಬೇಕು. ನಾವು ಸುಧಾರಣೆ ಮಾಡ್ತಾ ಮಾಡ್ತಾ ಮಧ್ಯಮ ವರ್ಗ ಜೀವನ ಸೃಷ್ಟಿ ಮಾಡ್ಬೇಕೆ ಅಥವಾ ನಿಜವಾಗಿಯೂ ಕ್ರಿಯಾಶೀಲತೆ ಇರುವಂತಹ, ಅವಮಾನ ಇಲ್ಲದಂತಹ ಜೀವನ ಸೃಷ್ಟಿ ಮಾಡಬೇಕೆ ಎಂದು ಯೋಚನೆ ಮಾಡ್ಬೇಕು. ಇದನ್ನ ನಾನು ನಿಮ್ಮ ಜೊತೆ ಯೋಚನೆ ಮಾಡ್ತಾ ಹೇಳ್ತಾ ಇದ್ದೇನೆ. ಇನ್ನೊಂದು, ಮಾಸ್ತಿ ಅವರು ಸೇರ್ದಾಗ ಹೇಳ್ತಾರೆ: ಏನಪ್ಪ, ಬ್ರಾಹ್ಮಣರು ಈ ಹರಿಜನರ ಬಗ್ಗೆ ಬರೆದರೆ ಹ್ಯಾಗೆ? ಚೋಮನ ಬಗ್ಗೆ ಕಾರಂತರು ಇಷ್ಟು ಚೆನ್ನಾಗಿ ಬರೆದಿದ್ದಾರೆ. ಹರಿಜನರು ಬರೆಯೋದಿಕ್ಕೆ ಆಗಲಿಲ್ಲ. ಅವರಲ್ಲಿ ಅನಕ್ಷರಸ್ಥರು ಬಹಳ ಇದ್ರು. ಅವರು ಈ ರೀತಿಯ ಎಕ್ಸ್‌ಪೋಸ್ ಆಗ್ತಾನೆ ಇರ್‍ಲಿಲ್ಲ. ಅದಕ್ಕೆ, ಇನ್ನೂ ಈ ಒಕ್ಕಲಿಗ, ಕುರುಬ, ಲಿಂಗಾಯತ ಇದಾರಲ್ಲ ಅವರೇ ಬರೆಯಬೇಕೇ ಅಥವಾ ಹರಿಜನರೇ ಹರಿಜನರ ಜೀವನ ಬರೆಯಬೇಕೇ, ಇದು ಬಹಳ ಮುಖ್ಯವಾದ ಪ್ರಶ್ನೆ. ಏಕೆ ಅಂದರೆ, ಇಷ್ಟು ಚೆನ್ನಾಗಿ ಬರೆದ ಮೇಲೆ ಹರಿಜನರಿಗೆ ಹೆದರಿಕೆಯಾಗುತ್ತೆ. ನಾವು ಇಷ್ಟು ಚೆನ್ನಾಗಿ ಬರೆಯುವುದಕ್ಕೆ ಆಗುತ್ತೋ ಇಲ್ವೋ ಅನ್ನೋದು. ಆದರೆ ಒಂದು ; ಚೋಮನದುಡೀಲಿ ಬರೋ ಅವಮಾನ, ಒಬ್ಬ ಹರಿಜನನೇ ಬರೆದಾಗ ಇನ್ನೂ ಅವಮಾನವಾಗಿ ಬರುತ್ತೆ. ಯಾವ ಹರಿಜನ ಬರೆದರೆ ಬರಬಹುದು ಎಂದು ಪ್ರಶ್ನೆ ಕೇಳೋ ವಿಷಯವಲ್ಲ ಇದು. ಯಾಕೆ ಹೇಳ್ತೀನೆ ಅಂದರೆ, ಕೆಲವು ಭಾವನೆಗಳನ್ನ ನಾವು ಉದಾ : ಗರ್ಭಿಣಿಯಾಗೋ ಭಾವನೆಯನ್ನ ಗಂಡಸು ಯಾವಾಗಲೂ ಅನುಭವಿಸಲು ಸಾಧ್ಯವಿಲ್ಲ. ಅದರ ಮೇಲೆ ಕಾದಂಬರಿ ಬರೆದರೆ ಸುಳ್ಳಾಗುತ್ತೆ. ಎಷ್ಟೇ ಊಹೆ ಮಾಡಿಕೊಂಡರೂ ಹೆಣ್ಣಿನ ನೋವು ಹೆಣ್ಣಿನದೇ, ಗಂಡಿನ ನೋವು ಗಂಡಿನದೇ. ಅದಕ್ಕಿಂತ ಹೆಚ್ಚಾಗಿ ಈ ಅವಮಾನ ಇದೆಯಲ್ಲ ಇದು ಬಹಳ ವಿಚಿತ್ರ. ನೀವು ಚಿಕ್ಕಂದಿನಲ್ಲಿ ಒಂದಲ್ಲ ಒಂದು ರೀತೀಲಿ ಅವಮಾನ ಅನುಭವಿಸದೇ ಇದ್ರೆ ಈ ಅವಮಾನ ಅರ್ಥವಾಗೋಲ್ಲ. ಈ ವಿಚಿತ್ರ ವಾದ ಪರಿಸ್ಥಿತಿಯಲ್ಲಿ ನಮ್ಮ ಮಾಸ್ತಿ ಅವರು, 'ವೆಂಕಟಿಗನ ಕತೆ ಬರೆದಾಗ, ಕಾರಂತರು 'ಚೋಮನದುಡಿ' ಬರೆದಾಗ ಎಷ್ಟು ಮಟ್ಟಿಗೆ ಚೆನ್ನಾಗಿರುತ್ತೆ ಅಂತ ನಾವು ಯೋಚನೆ ಮಾಡಬೇಕು. ಮಾಸ್ತಿ ಅಂತು ಬಹಳ ಕಿಲಾಡಿ. That is one of the most-beautiful thing.

ನಿಮ್ಮ ಜಾತಿ ಬಗ್ಗೆ ನೀವು ಬರೆದಾಗ ನಾರ್ಸಿಸ್ಟಿಕ್ ಆಗುತ್ತೋ ಏನೋ. ಇನ್ನೊಬ್ಬರು, ಬೇರೆ ಜಾತಿಯವರು ನಿಮ್ಮ ಜಾತಿ ಬಗ್ಗೆ ಬರೆದರೆ ಒಳ್ಳೆಯದು ಅಂತ ನನಗನ್ನಿಸುತ್ತೆ. ಕಾರಂತರು ಕುಡಿಯರ ಕೂಸು ಬರೆದಾಗ, ಅಷ್ಟು ಚೆನ್ನಾಗಿ ಬರೆದಿಲ್ಲ.

ಅದು ಹೋಗಿಬಿಟ್ಟು, ಸ್ಟಡಿ ಮಾಡ್ಬಿಟ್ಟು ಬರೆದಂತಿದೆ. ನೀವು ಹೋಗಿ ಸ್ಟಡಿ ಮಾಡಿ ಅಷ್ಟು ಚೆನ್ನಾಗಿ ಬರೋಲ್ಲ. ಆದರೆ ಚೋಮನ ದುಡಿ ಬರೆದಾಗ, ಅಷ್ಟೊಂದು ಆಳವಾಗಿ ಬರೆದಿದ್ದಾರಲ್ಲ, ಅದನ್ನ ಯೋಚನೆ ಮಾಡಬೇಕು. ಎಷ್ಟರ ಮಟ್ಟಿಗೆ ನಾವು ಇನ್ನೊಬ್ಬರ ಜೀವನದ ಬಗ್ಗೆ ಬರೆಯಲು ಸಾಧ್ಯ? ಡೇನಿಯಲ್ ಡಿಫೋ ಸಮುದ್ರ ನೋಡದೇ ಕಾದಂಬರಿ ಬರೆದ. ಅಲ್ಲಿಯ ಹ್ಯುಮಿಲಿಯೇಷನ್ ಯಾವ ರೀತಿಯ ಹ್ಯೂಮಿಲಿಯೇಷನ್, ಅವರು ಯಾವ ರೀತಿ ಜೀವನದ ವಿಸ್ತಾರವನ್ನು ಮತ್ತು ಜೀವನದ ನಿಜವಾದ ದುರಂತವನ್ನು ಅರ್ಥಮಾಡಿಕೊಂಡಿದ್ದಾರೆ. ಇದನ್ನ ನಿಮಗೆ ಪ್ರಶ್ನೆಯಾಗೇ ಬಿಟ್ಟಿದ್ದೀನಿ. 'ಇಲ್ಲಯ್ಯ ನಿಮಗೇನು ಗೊತ್ತಾಗುತ್ತೆ, ಬ್ರಾಹ್ಮಣರಿಗೆ, ನೀವು ಯಾಕೆ ಹರಿಜನರ ಮೇಲೆ, ಚೋಮನ ಮೇಲೆ ಬರೆದ್ರಿ' ಅಂದ್ರೆ ಯಾರಪ್ಪನ ಗಂಟೂ ಅಲ್ಲ. ಅವರು ಚೋಮನ ಮೇಲೆ ಬರೀಬೇಕು ಅಂತಿದ್ರು ಬರೆದರು. ಅವರ ಮೌಲ್ಯ ನಿರ್ಧಾರ ಮಾಡ್ಬೇಕಾದ್ರೆ ನಾವು, ಇವರು ಇನ್ನೊಬ್ಬ ಜಾತಿಯವರು, ಬೇರೆ ಜಾತಿಯ ಬಗ್ಗೆ ಬರೆದಾಗ, ಯಾವ ರೀತಿ ಆಗುತ್ತೆ ಅನ್ನೋದು ಬಹುಮುಖ್ಯ ಪ್ರಶ್ನೆ ಯಾಗೆ ಉಳಿಯುತ್ತೆ. ಇಷ್ಟೊಂದು ಹೇಳಿದ ಮೇಲೆ, ಇಷ್ಟು ದೊಡ್ಡ ಕಾದಂಬರಿಕಾರ ಕಾರಂತರಿಗೆ ನಾನು ಕೇಳಬೇಕಾದ ಪ್ರಶ್ನೆ ಕೆಲವಿದೆ. ಒಂದನೆ ಪ್ರಶ್ನೆ ಏನೂ ಅಂದ್ರೆ ಕಾರಂತರು ಮುಂಚಿನಿಂದಲೂ ವಿಚಾರವಾದಿಗಳು, ಬಹಳ ದೊಡ್ಡ ಕಾದಂಬರಿಕಾರರು. ಅದರಲ್ಲಿ ಒಂದು ಚೂರು ಪೋಸ್ ಇಲ್ಲ. ಅ.ನ.ಕೃ. ಕಾದಂಬರೀಲಿ ಬರೀ ಪೋಸ್ ಇರುತ್ತೆ. ಅವ್ರು ಕಲಾವಿದನಾಗಿ, ಪ್ರೇಮಿಯಾಗಿ ಪೋಸ್ ಆಗಿರ್ತಾರೆ. ಬರವಣಿಗೇಲೂ ಒಂಥರಾ ಪೋಸ್ ಇರುತ್ತೆ. ಲೇಖಕ ಆದವನು ಪೋಸ್ ಮಾಡಿದ್ರೆ ಬಹಳ ಅಸಹ್ಯವಾಗಿರುತ್ತೆ. ನೀವು ಮೆಚ್ಚಿ ಅಥವಾ ಬಿಡಿ ನನಗೆ ಹೀಗನ್ನಿಸುತ್ತೆ, ಇದನ್ನು ಭಾಷೆ ಯಲ್ಲಿ ನಾನು ಬರೀತೀನಿ ಅನ್ನೋ ಗುಣ ಇದೆಯಲ್ಲ ಕಾರಂತರಲ್ಲಿ, ರ್‍ಯಾಷನಲಿಸ್ಟ್ ಆಗಿರೋದು. ಬಹಳ ಬುದ್ಧಿವಂತರಾಗಿರಬೇಕು. ಆದರೆ ಕಾರಂತರಲ್ಲಿ ಇಷ್ಟೆಲ್ಲ ಇದ್ದರೂ ಕೂಡ, ಸಮುದಾಯದ ಬಗ್ಗೆ ಪ್ರೀತಿ ಮತ್ತು ಸಮತೆಯ ಬಗ್ಗೆ ನಿಜವಾದ ಪ್ರಜ್ಞೆ ಮುಂಚಿನಿಂದಲೂ ಇಲ್ಲ. ಯಾವ ಕಾದಂಬರೀನೇ ನೋಡಿ ಒಂದು ರೀತಿಯ ಪ್ರತಿಗಾಮಿ ಯಾಗಿ ಕಂಡು ಬರ್ತಾರೆ. ಪ್ರತಿಗಾಮಿಯಾಗಿ ಅಂತ ಹೇಳಿದರೆ, ಒಂದು ವ್ಯಕ್ತಿ ವಿಶಿಷ್ಟತೆ. ಒಬ್ಬ ಮನುಷ್ಯ ದೊಡ್ಡವನು, ವೈಯಕ್ತಿಕವಾಗಿ ಅವನು ಬುದ್ಧಿವಂತಿಕೆ ಯಿಂದ ಅವನೆಷ್ಟು ಆಸ್ತಿ ಮಾಡಿದ್ದಾನೆ, ಆ ಆಸ್ತಿ ಇಟ್ಕೊಂಡು ಅವನು ಜೀವನ ಮಾಡ್ತಿದ್ದಾನೆ. ಅವನಿಗೆ ಆಳುಕಾಳು ಇದಾವೆ, ಇದೂ ಒಂದು ರೀತಿಯ ವ್ಯವಸ್ಥೆ. ಹ್ಯಾಗೆ ಅಂತ ಹೇಳಿದರೆ ಅವನು ಪರಿಸ್ಥಿತಿಗೆ ವಿರುದ್ಧವಾಗಿ ನಡಕೊಳ್ಳೋದೆ ಇಲ್ಲ. ಇದು ಒಂದು ಕಾರಣ, ಏನೂ ಅಂದ್ರೆ ವೃತ್ತಿಪರ ಕಾದಂಬರಿಕಾರರಾದ್ದರಿಂದ ಬಹಳ ದೂರ ಹೋಗ್ಬಿಟ್ಟು ವಿರೋಧಿಸೋದಕ್ಕೆ ಆಗ್ತಿರಲಿಲ್ಲ. ಆದರೆ ತಮಗೆ ಅನ್ನಿಸಿದ್ದನ್ನ ಇದೇ ಸ್ಥಿತಿ ಅಂತ ಬರೀತಿದ್ರು. ಇನ್ನೊಂದು, ಕಾರಂತರು ಯಾವಾಗಲೂ ಭಾಷೆ ಬಗ್ಗೆ ಅಷ್ಟು ಕಾಳಜಿ ವಹಿಸೋದಿಲ್ಲ. ದಯವಿಟ್ಟು ಕ್ಷಮಿಸಿ, ನಾನು ಒಬ್ಬ ಲೇಖಕನಾದ್ದರಿಂದ ಹೇಳ್ತಿ

ದ್ದೇನೆ. ಸಮಸ್ಯೆ ಹೇಗೆ ಅಂದ್ರೆ, ಒಂದು ಕಾದಂಬರಿ ಬರೆದ ಕೂಡಲೇ ಮುಂದಿನ ಕಾದಂಬರಿಗೆ ಯಾವ ಶೈಲಿಯನ್ನ ಹೇಗೆ ಬಳಸಬೇಕು ಅನ್ನೋದು ಪ್ರಶ್ನೆ.

ಕಾರಂತರು ಒಂದು ಸಲ ಶಿವಮೊಗ್ಗಕ್ಕೆ ಬಂದರು. ಆಗ ನಾವೆಲ್ಲ ಸ್ನೇಹಿತರು ಸೇರ್ಬಿಟ್ಟು, ಒಂದು ವಸ್ತು ಕೊಟ್ಟೆವಿ, ಮಾತಾಡೋಕೆ. ಅದೇನು ಅಂದರೆ 'ಕಾದಂಬರಿ ಮತ್ತು ಜನಗಳ ನಡತೆ.' ನಡತೆ ಅಂದರೆ ಕಾದಂಬರಿಯ ಪ್ರಭಾವ. ಆಗ ನಾನು ಇಂಟರ್‌ಮಿಡಿಯೇಟ್‌ನಲ್ಲಿ ಇದ್ದೆ. ಇನ್ನೂ ನನಗೆ 22ವರ್ಷ. ಕಾಲೇಜ್ ಸೆಕ್ರೆಟರಿ ಯಾಗಿದ್ದೆ. ಕಾರಂತರು, ಇಡೀ ಭಾಷಣ ಜನರ ನಡತೆ ಮೇಲೆ ಮಾತಾಡಿದ್ರೆ ಹೊರತು ಕಾದಂಬರಿ ಮೇಲೆ ಮಾತಾಡಲೇ ಇಲ್ಲ. ಅವರು ಯಾವಾಗಲೂ ಕಾದಂಬರೀಲಿ 'ನಾವೆಲ್ ಫಾರಂ' ಅನ್ನ ಸೀರಿಯಸ್ಸಾಗಿ ತಗೊಳ್ಳಲಿಲ್ಲ. ಅವರು ಚಿತ್ರಕಲೆ ಬಗ್ಗೆ ಮಾತಾಡ್ತಾರೆ, ನೃತ್ಯದ ಬಗ್ಗೆ ಮಾತಾಡ್ತಾರೆ, ಅದೆಲ್ಲ ಕಾದಂಬರಿಯ ವಸ್ತು ಆಗಿರುತ್ತೆ. ನಿಮ್ಮ ದೊಡ್ಡ ಪಾತ್ರಗಳು ಅಂತಂದ್ರೆ ನಿಮಗೆಷ್ಟು ಗೊತ್ತಿದೆ ಅನ್ನೋದಲ್ಲ, ನೀವು ಎಷ್ಟು ಜೀವನವನ್ನು ಅನುಭವಿಸಿದ್ದೀರಿ ಅನ್ನೋದು ಅಷ್ಟು ಮುಖ್ಯ ಅಲ್ಲ. ಅದೂ ಬೇಕಾಗುತ್ತೆ ; ಈ ಜೀವನಾನುಭವ ನಿಮಗೆಷ್ಟು ಗೊತ್ತಿದೆ? ನೀವೆಷ್ಟು ಜೀವನದ್ವಾರ ಪಡೆದಿದ್ದೀರಿ, ಇದೆಲ್ಲವನ್ನು ಹೇಳೋದಕ್ಕೆ ಕಾದಂಬರಿ ಫಾರಂ ಅನ್ನ ಹುಡುಕೋದು ಇದೆಯಲ್ಲ ಬಹಳ ಕಷ್ಟ. ಒಂದು ಕಾದಂಬರಿ ಬರೆದ ಮೇಲೆ ಇನ್ನೊಂದು ಕಾದಂಬರಿ ಬರೆಯೋದಕ್ಕೆ ತುಂಬ ಕಷ್ಟ ಆಗುತ್ತೆ. ಕಾರಂತರಲ್ಲಿ ಈ ಫಾರಂ ಪ್ರಜ್ಞೆ, ಪ್ರಕಾರ ಪ್ರಜ್ಞೆ ಕಾಣ್ಸೋದು 'ಅಳಿದ ಮೇಲೆ' ಕಾದಂಬರೀಲಿ ಮಾತ್ರ. ಅಳಿದ ಮೇಲೆ ಬರೆದ ಮೇಲೆ ಏನಾಗುತ್ತೆ ಕಾರಂತರಲ್ಲಿ, ಒಬ್ಬ ಮನುಷ್ಯ ಸತ್ತ ಮೇಲೆ ಆ ಮೌಲ್ಯಗಳಿಗಾಗಿ ಹುಡುಕ್ಕೊಂಡು ಹೋಗ್ತಾನೆ. ಜೀವನದ ಬಗ್ಗೆ ಹುಡುಕ್ತಾ ಹೋಗೋದು ಅದಕ್ಕೆ ತಕ್ಕ ಫಾರಂನ ಪಡೀತ ಹೋಗ್ತದೆ. ತುಂಬ ಹಳೆಯ ಫಾರಂ; ಇಂಗ್ಲೀಷಿನ ಹಳೆಯ ಕಾದಂಬರಿಗಳ ರೀತೀಲಿ. ಆದರೆ ನೀವು ಸಾಹಿತಿಯಾಗಿ ಬರೀ ಅನುಭವವನ್ನು ಪಡೀತ, ಜೀವನದ ಬಗ್ಗೆ ಮಾತಾಡ್ತಾ, ಕಲೆಯ ಬಗ್ಗೆ ಮಾತಾಡ್ತಾ ಹೋದ್ರೆ ಏನಾಗುತ್ತೆ ಅಂದರೆ ಸಾಹಿತ್ಯ ನಿಮ್ಮ ಕೈ ಬಿಡುತ್ತ ಹೋಗುತ್ತೆ. ಇದು ಕಾರಂತರಲ್ಲಿ ಮುಂಚಿನಿಂದ ಬಂದದ್ದು. ಇದು ಜೀವನ, ಇಷ್ಟನ್ನ ನೋಡಿದ್ದೇನೆ, ಇಷ್ಟನ್ನ ಹೇಳಬಹುದು ಅಂತಾರೆ ಹೊರತು ಇದರಿಂದ ಹೇಗೆ ಹೇಳಿದರೆ ಕಾದಂಬರಿ ಆಗುತ್ತೆ, ನನ್ನ ಮುಂದಿನ ಕಾದಂಬರಿಯಲ್ಲಿ ಹೇಗೆ ಹೇಳಬಹುದು ಅಂತ ಯೋಚನೆ ಮಾಡೋದಿಲ್ಲ.

ಸಾಹಿತ್ಯದ ವಿದ್ಯಾರ್ಥಿ ಆದವನು ಈ ಫಾರಂ ಬಗ್ಗೆ ಚರ್ಚೆ ಮಾಡಬಹುದು ಆದರೆ ಲೇಖಕನಿಗೆ ಇದು ಬಹಳ ದೊಡ್ಡ ಸಮಸ್ಯೆ. ಯಾವ ಲೇಖಕನಿಗೆ ದೊಡ್ಡ ಸಮಸ್ಯೆ ಅಂದರೆ–ನಾನು ಬರೀತಾ ಇರೋದು ಜೀವಂತವಾಗಿದೆಯೋ ಇಲ್ವೋ ಅಂತ ಅನುಮಾನ ಇರುವವನಿಗೆ ಅದು ಬಹಳ ದೊಡ್ಡ ಸಮಸ್ಯೆ. ಕೆಟ್ಟ ಕಾದಂಬರಿಕಾರ ಸುಮ್ನೆ ಬರೀತ ಹೋಗ್ತಾನೆ. ಕಾರಂತರು ಒಳ್ಳೆಯ ಕಾದಂಬರಿಕಾರರಾದ್ದರಿಂದ ಹೇಳ್ತೀದ್ದೇನೆ.

ವರ್ಷಕ್ಕೊಂದು ಕಾದಂಬರಿ ಬರೀತಾರೆ, ವೃತ್ತಿ ಕಾದಂಬರಿಕಾರರಾಗಿ ಬರೀಲೇಬೇಕು, ಬರೀಲಿ ಬಿಡಿ. ಆದರೆ ಈ ವರ್ಷ ಕಾದಂಬರಿ ಬರೆಯೋವಾಗ ಏನಾದರೂ ಹೊಸ ರೀತಿಯಲ್ಲಿ ಹೊಸದಾಗಿ ಹೇಳುವ, ಹೊಸ ಸಮ್ಮಿಳನ, ಪದಗಳ ಸಮ್ಮಿಳನ ಏನಾದರೂ ಮಾಡ್ಬೇಕಾಗುತ್ತೆ ಅಂತ ಯೋಚನೆ ಮಾಡಬೇಕು. ಇ. ಎಮ್. ಫಾಸ್ಟರ್‌ಗೆ 'ಪ್ಯಾಸೇಜ್‌ಟು ಇಂಡಿಯಾ' ಬರೆಯೋದಕ್ಕೆ ಆ ಫಾರಂ ಸಿಗದೆ ಇದ್ರೆ, ಆ ಕಾದಂಬರೀನೆ ಬರೀತಿರಲಿಲ್ಲ. ಎಲ್ಲ ದೊಡ್ಡ ಕಾದಂಬರಿಕಾರರೂ ಅಷ್ಟೇನೆ. ಹೀಗೆ ಕಾರಂತರು ಯಾಕೆ ಆ ರೀತಿ ಆಗಲಿಲ್ಲ ಅಂತ ನನಗೆ ಆಶ್ಚರ್ಯ.

# ಭಾಷೆ: ಕಾದಂಬರಿ ಪ್ರಕಾರಕ್ಕೆ ಒಂದು ಸವಾಲು

---

**ಯಶವಂತ ಚಿತ್ತಾಲ**

ಶಿವರಾಮ ಕಾರಂತರ ಕಾದಂಬರಿಗಳಿಗೆ ಪ್ರತಿಕ್ರಿಯೆ ವ್ಯಕ್ತಪಡಿಸುವ ನೆಪದಲ್ಲಿ ಕಾದಂಬರಿ ಎನ್ನುವ ಸಾಹಿತ್ಯ ಪ್ರಕಾರದ ಬಗೆಗೆ ನನಗಿರುವ ವಿಚಾರಗಳನ್ನು ನಾನು ಹೇಳಬಯಸಿದ್ದೇನೆ. ಕಾರಂತರ ಕಾದಂಬರಿಗಳ ಬಗ್ಗೆ ಸಮಾಧಾನ ಅಥವಾ ಅಸಮಾಧಾನ ವ್ಯಕ್ತ ಆಗಬೇಕಾದರೆ ಈ ಸಮಾಧಾನ ಅಥವಾ ಅಸಮಾಧಾನ ಯಾವ ನೆಲೆಯಿಂದ ನೋಡಿದಾಗ ಆಗುವಂಥದ್ದು ಎಂದು ಅರಿಯುವುದು ಮುಖ್ಯವಾಗುತ್ತದೆ. ನಾನು ಕಾರಂತರ ಕಾದಂಬರಿಗಳನ್ನು ಹಿನ್ನೆಲೆಯಲ್ಲಿಟ್ಟುಕೊಂಡು ಮಾತನಾಡುತ್ತಿದ್ದೇನೆಯೇ ಹೊರತು ಯಾವುದೇ ನಿರ್ದಿಷ್ಟ ಕೃತಿಯ ಬಗೆಗಲ್ಲ.

ನಾನು ನಿಮ್ಮ ಇದಿರು ಇಂದು ಮಾತನಾಡಲು ಬಯಸಿದ್ದು ವಿಮರ್ಶಕನಾಗಿ ಅಲ್ಲ. ವಿಮರ್ಶಕನ ಪಾತ್ರ ನನ್ನ ಸಾಹಿತ್ಯ ಜಾಯಮಾನಕ್ಕೆ ಒಗ್ಗಿದ್ದಲ್ಲ. ನನಗೆ ಮಾತನಾಡಬೇಕು ಅನ್ನಿಸಿದ್ದು, ಮಾತನಾಡುವ ಧೈರ್ಯ ನಾನು ಮಾಡಿದ್ದು ಶಿವರಾಮ ಕಾರಂತರ ಗಾಢ ಪ್ರಭಾವಕ್ಕೆ ಒಳಗಾಗಿರುವ ಒಬ್ಬ ಲೇಖಕನಾಗಿ. ಬರೆಯುವ ಅನುಭವ, ಸೃಷ್ಟಿಸುವ ಅನುಭವ ಇಲ್ಲಿಯ ಮಾತುಗಳಿಗೆ ಅವತರಣಿಕೆಯ ಚಿಹ್ನೆಗಳಿಲ್ಲದ ಪ್ರಮಾಣವಾಗಿದೆ ಎನ್ನುವುದನ್ನು ಗಮನಿಸಬೇಕು.

ಒಳ್ಳೆಯ ಲೇಖಕನಾಗಲು ಹೊರಟವನು ಒಳ್ಳೆಯ ಓದುಗನೂ ಇರುತ್ತಾನೆ ಎಂಬ ತಿಳಿವಳಿಕೆ; ಒಳ್ಳೆಯ ವಿಮರ್ಶಕ ಎಲ್ಲಕ್ಕೂ ಮೊದಲು ಒಳ್ಳೆಯ ಓದುಗನಿಂದಲೇ ಎಂಬ ಆಗ್ರಹ ಇಲ್ಲಿ ಗ್ರಹೀತ ಹಿಡಿದ ಸಂಗತಿಗಳಾಗಿವೆ. ಹಾಗೆಯೇ, ಕೃತಿಯೊಂದು ಹೇಳ ಬಯಸಿದ್ದನ್ನು ಕೃತಿಯೇ ಹೇಳಬೇಕು, ಅದರ ಅರ್ಥ ಪ್ರಪಂಚದ ಹಲವು ಸಾಧ್ಯತೆಗಳು ವಾಚಕರ ಸೃಜನಶೀಲ ಪ್ರತಿಕ್ರಿಯೆಗಳಲ್ಲೇ ನಿಜವಾಗಬೇಕೆಂಬುದೂ ನನ್ನ ನಂಬಿಕೆಯಾಗಿದೆ. ಕೊನೆಗೂ ವಿಮರ್ಶೆ ಮೊದಲಾಗುವದು ಕೃತಿಯೊಂದಕ್ಕೆ ಸೃಜನಾತ್ಮಕವಾಗಿ ಸ್ಪಂದಿಸಿದ ನಂತರವೇ—ಈ ಸ್ಪಂದನವನ್ನು ತಾನೇ ಅರಿಯಲು ಹೊರಟಾಗ.

ತೊಂದರೆ ಇದಿರಾಗುವದು ಇಲ್ಲೇ: ಹೀಗೆ ತಿಳಿದದ್ದನ್ನು ಇನ್ನೊಬ್ಬನಿಗೆ ತಿಳಿಸಲು ಹೊರಟಾಗ ಕೇವಲ ಸೃಜನಶೀಲ ಓದುಗ ಸ್ಥಿತಿಯಲ್ಲಿ 'ರಸಾಸ್ವಾದನೆ'ಯ ಹಂತದಲ್ಲಿ ಅನುಭವಿಸಿದ್ದನ್ನು ದಾಟಿ ನೇರವಾಗಿ ವಿಮರ್ಶೆಯ ಕ್ಷೇತ್ರದಲ್ಲೇ ಕಾಲಿರಿಸುವಾಗ.

ಕೃತಿ ಕೊಟ್ಟ ಅನುಭವವನ್ನು 'ವಿಶ್ಲೇಷಿಸುತ್ತ', ಕಾರಣ ಸಹಿತ ರುಜುವಾತುಪಡಿಸುತ್ತ ಇನ್ನೊಬ್ಬನಿಗೆ ತಿಳಿಸಲು ಹೊರಟಾಗ ಅನನ್ಯ ಅನುಭವವಾದದ್ದು 'ಶಾಸ್ತ್ರ'ದ ಮೆರುಗನ್ನು ಪಡೆಯುತ್ತ ಸಾಮಾನ್ಯವಾಗುತ್ತದೆ. ಆ ಹೊತ್ತಿಗೆ ನಾವು ಮೂಲ ಕೃತಿಯಿಂದ ಬಹು ದೂರ ಹೋಗಿರುತ್ತೇವೆ. ನಮಗೆ ಇದಿರಾದದ್ದು ಹೊಚ್ಚ ಹೊಸತಾದದ್ದು— ಈ ವರೆಗೂ ಕಂಡೇ ಇರದ್ದು. ಅದರ ಅರ್ಥ ಮಾಡಿಕೊಳ್ಳಲು ಹೊರಟದ್ದು ಮಾತ್ರ ಈ ಮೊದಲೇ ಗೊತ್ತಿದ್ದರ ಮುಖಾಂತರವೇ, ಗೊತ್ತಿದ್ದ ಸಂಗತಿಗಳಲ್ಲೇ ವಿಶ್ಲೇಷಿಸುವ ಮುಖಾಂತರವೇ! ಹೀಗಾಗಿ, ಕೊನೆಗೂ ನಮ್ಮ ಗ್ರಹಿಕೆಗೆ ದಕ್ಕುವದು ಕಣ್ಣೆದುರು ಮೂಡಿನಿಂತ ಹೊಚ್ಚ ಹೊಸ ಆಕೃತಿಯಲ್ಲವೇ ಅಲ್ಲ. ಅದರಲ್ಲಿಯ ಪರಿಚಿತ ಅಂಶಗಳು ಮಾತ್ರ. ವಿಮರ್ಶಾ ಶಾಸ್ತ್ರದ ಕೆಲವು ಮೂಲಭೂತವಾದ ಮಿತಿಗಳು ಪ್ರಕಟವಾಗುವದೇ ಇಲ್ಲಿ—ಹೊಚ್ಚ ಹೊಸತಾದದ್ದನ್ನು ನಮಗೆ ಈಗಾಗಲೇ ಗೊತ್ತಿರುವ ಸಂಗತಿಗಳ ಸಂಕೀರ್ಣವಾದ ಹೊಸ ಹೊಂದಾಣಿಕೆಯೆನ್ನುವ ನಿಲುಗಡೆಗೆ ಬರುವುದರಲ್ಲಿ.

ಕಾರಂತರ ಕಾದಂಬರಿಗಳನ್ನು ಕುರಿತು ಈ ವರೆಗೆ ನಡೆದ ಗೋಷ್ಠಿಗಳ ಶೀರ್ಷಿಕೆಗಳನ್ನು ಗಮನಕ್ಕೆ ತಂದುಕೊಂಡರೂ ನನ್ನ ಮಾತಿನ ಅರ್ಥವಾದೀತು.

ಆದ್ದರಿಂದಲೇ ಕಾರಂತರ ಒಟ್ಟೂ ಸಾಹಿತ್ಯಕ್ಕೆ ಇಡಿಯಾಗಿ ಈ ಗೋಷ್ಠಿಯಲ್ಲಿ ವ್ಯಕ್ತವಾದ ಪ್ರತಿಸ್ಪಂದನೆಯನ್ನು ನಾನೇ ಮತ್ತೆ ವಿಶ್ಲೇಷಿಸಿ ಈ ಗೋಷ್ಠಿಯ ಶೀರ್ಷಿಕೆಯ ಔಚಿತ್ಯವನ್ನು ಕೆಡಿಸಲಾರೆ. ಬದಲು, ಕಾರಂತರ ಕಾದಂಬರಿ ಸಾಹಿತ್ಯದ ಅಭ್ಯಾಸದಲ್ಲಿ ನನಗೆ ಮಹತ್ವದವೆಂದು ತೋರಿದ ಎರಡು ಸಂಗತಿಗಳ ಮೇಲೆ ನನ್ನ ಲಕ್ಷ್ಯ ಕೇಂದ್ರೀಕರಿಸಲಿದ್ದೇನೆ :

1. ಕಾರಂತರ ಕಾದಂಬರಿಗಳಲ್ಲಿ ಅನುಭವಕ್ಕೆ ಆಕೃತಿ ಮೂಡಿಸುವ ಪ್ರಕ್ರಿಯೆಯ ಸ್ವರೂಪವನ್ನು ಅರಿಯುವದು.

2. ಅವರ ಕೃತಿಗಳು ಎಷ್ಟರ ಮಟ್ಟಿಗೆ ಈ ಮೊದಲು ವಿವರಿಸಿದ 'ವಿಶ್ಲೇಷಣೆ'ಯನ್ನು ಧಿಕ್ಕರಿಸುವಂಥ, ವಿಶ್ಲೇಷಣೆಯ ಪ್ರಯತ್ನಕ್ಕೇ ಆಹ್ವಾನವಾಗುವಂಥ ಸೃಜನಕ್ರಿಯೆಯ ಫಲವಾಗಿವೆಯೆಂದು ತಿಳಿಯುವದು.

ಇಂಥ ಪರೀಕ್ಷೆಯನ್ನು ದಾಖಲಿಸುವ ನನ್ನ ಭಾಷೆ, ನುಡಿಕಟ್ಟುಗಳು ಇಂಗ್ಲಿಷ್ ಸಾಹಿತ್ಯದ ವಿದ್ಯಾರ್ಥಿಗಳೂ ಶಿಕ್ಷಕರೂ ಆದ ಡಾ. ಅನಂತಮೂರ್ತಿ, ಹಾಗೂ ಡಾ. ಶಂಕರ ಮೊಕಾಶಿ ಅವರ ನುಡಿಕಟ್ಟಿನಿಂದ ಭಿನ್ನವಾಗುವುದು ಸಹಜವಾಗಿದೆ. ನಮ್ಮ ಗ್ರಹಿಕೆಯ ಜಗತ್ತನ್ನು ನಿಶ್ಚಯಿಸಿದ ಪ್ರಭಾವಗಳೂ ವಿಭಿನ್ನವಾಗಿವೆ. ಇದರಿಂದಾಗಿ, ಅವರಿಬ್ಬರೂ ಈಗಾಗಲೇ ವ್ಯಕ್ತಪಡಿಸಿದ ವಿಚಾರಗಳಿಗೆ ಹೊಸತೊಂದು ಆಯಾಮ ಸೇರಿಕೊಂಡೀತು, ಹೆಚ್ಚಿನ ಖಚಿತತೆ ಬಂದೀತು ಎಂದು ಆಶಿಸುತ್ತೇನೆ. ಮನುಷ್ಯನ binocular ದೃಷ್ಟಿಯ ಔಚಿತ್ಯ ಇದೇ ಎಂಬುದನ್ನು ಜೀವಶಾಸ್ತ್ರ

ತಿಳಿಸುತ್ತದೆ. ಒಂದು ಕಣ್ಣಿಗೆ ಕಂಡದ್ದನ್ನು ಇನ್ನೊಂದು ನಿರಾಕರಿಸುವುದಿಲ್ಲ. ಬದಲಾಗಿ ಎರಡೂ ಕೂಡಿ ಕಂಡದ್ದಕ್ಕೆ ಹೊಸ 'ಆಳ' ಹುಟ್ಟುತ್ತದೆ. ಇಷ್ಟೇ, ಈ three dimensional ನೋಟಕ್ಕೆ ಕಾರಣ ತಿಳಿದಾಗ ಮಾತ್ರ ಆಶ್ಚರ್ಯವಾಗಬಹುದು. ಕಾಣ್ಕೆಗೆ 'ಆಳ' ಮೂಡುವದು ನೋಟಗಳಲ್ಲಿಯ ಹೊಂದಾಣಿಕೆಯಿಂದಾಗಿ ಅಲ್ಲ, ಅವುಗಳಲ್ಲಿಯ ಅಂತರದ ಮೂಲಕ !

ಸಾಹಿತ್ಯದ ಸಂದರ್ಭದಲ್ಲಿ ಉಲ್ಲೇಖಗೊಳ್ಳುವ ಅನುಭವ—'ಅನುಭವ ಸಮೃದ್ಧಿ', 'ಅನುಭವದ ಗಟ್ಟಿತನ', 'ಅನುಭವವವೇ ಸಾಹಿತ್ಯದ ಮೂಲ ದ್ರವ್ಯ' ಮೊದಲಾದ ಮಾತುಗಳಲ್ಲಿ ಒಂದು ಕೆಟ್ಟ 'ಕ್ಲೀಷೆ'ಯಾಗಿ ಬಹಳ ಕಾಲವಾಗಿದೆ. ಅನುಭವವನ್ನು ಯಾವ ಅರ್ಥದಲ್ಲಿ ಗ್ರಹಿಸುತ್ತೇವೆ ಎಂಬುದನ್ನು ಸ್ಪಷ್ಟಪಡಿಸಿಕೊಳ್ಳು ವದು ಕಾರಂತರ ಕಾದಂಬರಿಗಳ ಸಂದರ್ಭದಲ್ಲಿ ಅತ್ಯಂತ ಮಹತ್ವದ್ದಾಗುತ್ತದೆ. ಅನುಭವವನ್ನು–ರಚನಾ ವಿನ್ಯಾಸವುಳ್ಳ ಭಾವನೆಯನ್ನಾಗಿ, ಆಕೃತಿ ಮೂಡಿದ ಅನು ಭೂತಿಯನ್ನಾಗಿ- emotion with a structure or a feeling with a pattern—(ಗ್ರೆಗರಿ ಬೇಟ್ಸನ್ ಮನಸ್ಸನ್ನು ವ್ಯಾಖ್ಯಾನಿಸುವ ವಿಧಾನವಿದು) ಎಂಬುದಾಗಿ ಗ್ರಹಿಸಿದಲ್ಲಿ ಸೃಜನಶೀಲ ಸಾಹಿತ್ಯಕ್ಕೆ ಮೂಲವಾಗುವ, ಸೃಷ್ಟಿಗೆ ಆಹ್ವಾನ ವಾಗುವ ಸಂಗತಿ ಅನುಭವ ಆದದ್ದಲ್ಲ—ಅನುಭವವಾಗಲು ತಪ್ಪಿದ್ದು, ಅನುಭವ ವಾಗಲು ನಿರಾಕರಿಸುವಂಥದ್ದು. ಅನುಭವದೊಳಗಿನ ಕಂದರಗಳಿಗೆ, ಬಿರುಕುಗಳಿಗೆ ಅನುಭವದೊಳಗೆ ಸೇರಿಕೊಂಡದ್ದಕ್ಕಿಂತ ಹೆಚ್ಚಾಗಿ ಬಿಟ್ಟು ಹೋದದ್ದಕ್ಕೆ ಕಾರಣ ವಾಗುವಂಥದ್ದು— the gaps, the missing links rather than a completed pattern ! ಈಗಾಗಲೇ ಬೆಳಕಾದುದಕ್ಕಿಂತ ಹೆಚ್ಚಾಗಿ ಬೆಳಕಾಗುವ ತವಕದಲ್ಲಿದ್ದ ಕತ್ತಲೆಯ ಅಂಶಗಳೇ ಸೃಷ್ಟಿಗೆ ಪ್ರಚೋದನೆಯಾಗುತ್ತವೆ. ಸಾಹಿತ್ಯದ ಹಿಂದೆ ಕೆಲಸ ಮಾಡುವ–'ಇನ್ನೊಬ್ಬನಿಗೆ ಮುಟ್ಟಬೇಕು' ಎನ್ನುವಂಥ ತುಡಿತಕ್ಕೆ ಕಾರಣವೇ ಇದು. ಇನ್ನೊಬ್ಬನಿಗೆ ಮುಟ್ಟುವ ಮುಖಾಂತರವೇ, ಇನ್ನೊಬ್ಬನಿಗೆ ಮುಟ್ಟು ತಿರುವಾಗಲೇ ಅನುಭವದೊಳಗಿನ ಕತ್ತಲೆ ಬೆಳಗಿಕೊಳ್ಳುವ ಸೋಜಿಗ ಹಾಗೂ ಅಂತಃ ಕರಣಕ್ಕೆ ಸಮಾಧಾನ ತರುವಂಥ 'ಆಕೃತಿ' ಮೂಡುವ ಚೇತೋಹಾರಿಯಾದ ಬಗ್ಗೆ ಎರಡೂ ಸ್ವತಃ ಸೃಷ್ಟಿಸಿದವನಿಗೆ ಹೇಗೋ ಹಾಗೆಯೇ ಸೃಜನಶೀಲ ಓದುಗನಿಗೂ ಸಂತೋಷ ಹುಟ್ಟಿಸುತ್ತವೆ. 'ಆಕೃತಿ'ಯ ಹುಟ್ಟು ಹಾಗೂ ಬೆಳವಣಿಗೆ ಮಾನವ ಮನಸ್ಸು ಯಾವತ್ತೂ ತೊಡಗಿಸಿಕೊಂಡಿರುವ ಕ್ರಿಯೆಯಾಗಿದೆ. ಇದು, ಮಾನವ ಮನಸ್ಸು ಆವಿಷ್ಕಾರಗೊಳ್ಳುವ ಎಲ್ಲ ಕ್ಷೇತ್ರಗಳಿಗೂ ಸಾಮಾನ್ಯವಾದದ್ದು—ಸಂಬಂಧಗಳು ಸಾಧ್ಯವೇ ಇಲ್ಲ ಎಂದುಕೊಂಡಲ್ಲೆ ಸಂಬಂಧವೊಂದು ಗಕ್ಕನೆ ಹುಟ್ಟಿಕೊಳ್ಳಲು ಕಾರಣ ವಾಗುವ ಸೃಜನ-ಪ್ರಕ್ರಿಯೆಗೇ ಮೂಲಭೂತವಾದದ್ದು.

ಕಾರಂತರ ಬಹಳಷ್ಟು ಕಾದಂಬರಿಗಳಲ್ಲಿ ಇಂಥದ್ದು ಸಂಭವಿಸುವುದೇ ಇಲ್ಲ. ಆದ್ದರಿಂದಲೇ ಒಂದು ಮರೆಯಲಾಗದ ಅನುಭವವಾಗಿ ನಮ್ಮನ್ನು ತಟ್ಟುವುದರಲ್ಲಿ, ಕಾಡುವುದರಲ್ಲಿ ಸೋಲುತ್ತವೆ ಎಂದು ತೋರುತ್ತದೆ. ಇದಕ್ಕೆ ಕಾರಣ : ಕಾದಂಬರಿಯನ್ನು ಬರೆಯುವುದಕ್ಕಿಂತ ಬಹಳ ಮೊದಲೇ ತಿಳಿದ, ತಿಳಿದುಕೊಂಡ ಸಂಗತಿಗಳು-ಪ್ರಜ್ಞೆಯ ಪಾತಳಿಯನ್ನು ಮುಟ್ಟಿದ ಸಂಗತಿಗಳು - completed patterns–ಕಾದಂಬರಿಗೆ ವಸ್ತುವಾಗುತ್ತವೆಯೆ ಹೊರತು ಕಾದಂಬರಿಯು ಮುಖಾಂತರವೇ ಪ್ರಜ್ಞೆಗೆ ಬರುವ ಸಂಗತಿಗಳಲ್ಲ.

ಕಾರಂತರು 'ಗೆದ್ದ ದೊಡ್ಡಸ್ತಿಕೆ'ಗೆ ಬರೆದ ಮುನ್ನುಡಿಯಲ್ಲಿ ಬರುವ ಕೆಲವು ಮಾತುಗಳು ಸ್ವತಃ ಕಾರಂತರೇ ಕಾದಂಬರಿ ಎನ್ನುವ ಸಾಹಿತ್ಯ ಪ್ರಕಾರದ ಬಗೆಗೆ ಇಟ್ಟು ಕೊಂಡ ಕಲ್ಪನೆಯನ್ನು ಸೂಚಿಸುತ್ತವೆ–"ಅಂಥ ಮೌಲ್ಯಗಳೊಡನೆ ಹೊಂದಿಕೊಳ್ಳಲಾರದ ಕೆಲವಾದರೂ ವ್ಯಕ್ತಿಗಳು ಸಮಾಜದಲ್ಲಿ ಉಳಿದುಕೊಂಡಿದ್ದಾರೆಂದು ತೋರಿಸುವದು ಈ ಬರಹದ ಗುರಿ." ಬರಹ ತನ್ನ ಗುರಿಯನ್ನು ಮುಟ್ಟಿಯೇ ಮುಟ್ಟುತ್ತದೆ ಎಂಬುದರ ಬಗ್ಗೆ ಸಂಶಯವಿಲ್ಲ. ಯಾಕೆಂದರೆ ಅಂಥ ಹಾದಿ ತುಳಿಯುವಾಗ 'ಧುತ್' ಎಂದು ಇದಿರಾಗಬಹುದಾದ, ಹಾದಿಯ ದಿಕ್ಕನ್ನೇ ಬದಲಿಸಬಹುದಾದ 'ಅನೂಹ್ಯಕ್ಕೆ' ಇಲ್ಲಿ ಅವ ಕಾಶವೇ ಇಲ್ಲ. ದಾಸ್ತಾವಿಸ್ಕ್ಕಿ crime and punishment ಬರೆಯುವ ಪೂರ್ವ ಹಾಕಿ ಕೊಂಡ 'ಯೋಜನೆ' ಹಾಗೂ ಅವನ ಮೂಲ ಸಂಕಲ್ಪವನ್ನು ಧಿಕ್ಕರಿಸಿ ಬೆಳೆದು ಬಂದ ಪ್ರತ್ಯಕ್ಷ ಕೃತಿ ಇವುಗಳನ್ನು ನೆನೆದರೆ ನನಗೆ ಸೂಚಿಸಬೇಕಾದದ್ದೇನು ಎನ್ನುವದು ಹೊಳೆ ದೀತು. ಸ್ಪಷ್ಟಪಡಿಸಬಯಸುವ ಸಂಗತಿ : ಸುಪ್ತ ಪ್ರಜ್ಞೆಯೊಡನೆಯ ಮುಖಾಮುಖಿ ಕಾರಂತರ ಸಾಹಿತ್ಯದಲ್ಲಿ ಇಲ್ಲವೇ ಇಲ್ಲ ಎನ್ನುವಷ್ಟರ ಮಟ್ಟಿಗೆ ಅಪರೂಪವಾಗಿದೆ.

ಕಾರಂತರ ಕಾದಂಬರಿಗಳಲ್ಲಿ ಅಸಮಾಧಾನಕ್ಕೆ ಕಾರಣವಾಗುವ ಇನ್ನೊಂದು ಸಂಗತಿ ಭಾಷೆ ಹಾಗೂ ಕಾಲ ಯೋಜನೆಗಳಿಗೆ ಸಂಬಂಧಿಸಿದ್ದು.

ಒಳ್ಳೆಯ ಭಾಷೆಯೆಂದರೆ ಅದ್ಭುತವಾದ ಶಬ್ದ ಸಂಗ್ರಹವಾಗಲೀ, ಶಬ್ದ ಜೋಡಣೆಯ ಮೇಲಿನ, ವಾಕ್ಯರಚನೆಯ ಮೇಲಿನ ಪ್ರಭುತ್ವವಲ್ಲ. ಸೃಜನ ಪ್ರಕ್ರಿಯೆಯ ಅನ್ಯೋನ್ಯ ಭಾಗವಾದ ಭಾಷೆಯ ಬಳಕೆ ಕೂಡ ಸೃಜನಶೀಲ ಸಾಹಿತ್ಯದಲ್ಲಿ ಕೇವಲ ಪ್ರಜ್ಞಾಪಾತಳಿಯಲ್ಲಷ್ಟೇ ನಡೆಯುವಂಥದ್ದಲ್ಲ. 'ಅನುಭವ'ದ ಹಾಗೆಯೇ ಭಾಷೆ ಕೂಡ ಕ್ಲೀಷೆಯಾಗಬಾರದೆಂಬ ದೃಷ್ಟಿಯಿಂದ ಈ ವಿಷಯವನ್ನು ಕುರಿತ ನನ್ನ ತಾತ್ಪೂರ್ತಿಕವಾದ ವಿಚಾರವನ್ನು ನಿಮ್ಮ ಮುಂದಿಡುವ ಧೈರ್ಯ ಮಾಡುತ್ತಿದ್ದೇನೆ.

ಸಮಕಾಲೀನ ಮಾನವನ ಪ್ರಜ್ಞೆಯ ಗಡಿಗಳ ಮೇಲೆ ಸುದ್ದಿ (information) ಗಳ ಮುಖಾಂತರ ದಾಳಿ ಮಾಡುವ ಜಗತ್ತು ಎಂದಿಗಿಂತ ಹೆಚ್ಚು ವಿಶಾಲವಾದದ್ದು, ಜಟಿಲವೂ ಗೊಂದಲಮಯವೂ ಆದದ್ದು. ಎಡ್ವರ್ಡ್ ಡಿ ಬೋನೋ ಒಂದೆಡೆಯಲ್ಲಿ

ಹೇಳುತ್ತಾರೆ: "ಈ ಹೊತ್ತಿನ ಮಾನವ ಸುದ್ದಿಯ ಭಾರವಾದ ಹೊರೆಯಡಿಗೆ ನರಳುತ್ತಿದ್ದಾನೆ. ಶಿಕ್ಷಣದ ಮೂಲಕ, ನಿಯತಕಾಲಿಕ, ವೃತ್ತ ಪತ್ರಿಕೆಗಳ ಮೂಲಕ, ದೂರದರ್ಶನ, ಜಾಹೀರಾತುಗಳ ಮೂಲಕ, ಸುತ್ತಮುತ್ತಲ ಜನರಿಂದ ತಿಳಿಯುವ ವರ್ತಮಾನದ ಮೂಲಕ ಅವನ ಮೇಲೆ ಸುದ್ದಿಯ ಪ್ರಹಾರ ನಡೆಯುತ್ತದೆ." ದಿನ ಪತ್ರಿಕೆಯ ಮುಖಪುಟವೊಂದರ ಪ್ರಕಟವಾಗುವ ಸುದ್ದಿಗಳ ಮುಖಾಂತರ ನಮ್ಮಲ್ಲಿ ಒಂದೇ ಕಾಲಕ್ಕೆ, ಒಂದೇ ಸಂಗತಿಯ ಬಗ್ಗೆ—ಮನುಷ್ಯನ ಬಗ್ಗೆ, ಅವನ ಗ್ರಹಿಕೆಯ ವಿಶ್ವದ ಬಗ್ಗೆ—ನಮ್ಮಲ್ಲಿ ಮೊಳೆಯುವ ಭಾವನೆಗಳನ್ನು ಲಕ್ಷ್ಯಕ್ಕೆ ತಂದುಕೊಳ್ಳಲು ಪ್ರಯತ್ನ ಮಾಡಿದರೂ ನನ್ನ ಮಾತಿನ ಅರ್ಥವಾದೀತು. ನಿನ್ನೆಯ 'ಹಿಂದೂ' ದಿನಪತ್ರಿಕೆಯ ಮುಖ ಪುಟದ ಸುದ್ದಿಗಳ ಶೀರ್ಷಿಕೆಗಳನ್ನು ಓದಿದಾಗ ಹುಟ್ಟಿದ ಭಾವನೆಗಳನ್ನು ಹೀಗೆ ಪಟ್ಟಿ ಮಾಡಬಹುದೇನೋ: ಜಿಗುಪ್ಸೆ - ಭಯ - ಸೋಜಿಗ - ದಿಗಿಲು - ಸಂತೋಷ - ರೋಷ - ಸಿಟ್ಟು - ದ್ವೇಷ - ಪ್ರೀತಿ - ಅಸೂಯೆ ಇತ್ಯಾದಿ. ಇವು ಬೇರೆ ಬೇರೆ ಸಂಗತಿಗಳ ಬಗ್ಗೆ, ಬೇರೆ ಬೇರೆ ಕಾಲಕ್ಕೆ ಹುಟ್ಟಿದ ಭಾವನೆಗಳಲ್ಲ. ಈ ಹೊತ್ತು ನಾವೇ ಸಿದ್ಧಪಡಿಸಿದ ಸುದ್ದಿ ಮಾಧ್ಯಮ ( information system )ದ ಮೂಲಕ ಒಂದೇ ಸಂಗತಿಯ ಬಗ್ಗೆ ಒಂದೇ ಕಾಲಕ್ಕೆ ಹುಟ್ಟುವ–ಒಂದಕ್ಕೊಂದು ವಿರುದ್ಧವಾದ-ಹಲವು ಭಾವನೆಗಳು. ಇಂಥ ಭಾವನೆಗಳನ್ನು ಒಟ್ಟಾಗಿಯೇ ಪ್ರಜ್ಞೆಗೆ ತರುವದು ಶಕ್ಯವಾಗುವುದಿಲ್ಲ. ಯಾಕೆಂದರೆ ಅಂಥ ಶಬ್ದ ಭಾಷೆಯಲ್ಲಿ ಇಲ್ಲವೇ ಇಲ್ಲ. ಎಂಥ ಶಬ್ದ ?—ಒಂದಕ್ಕೊಂದು ವಿರುದ್ಧವಾದ ಇಷ್ಟೊಂದು ಭಾವನೆಗಳನ್ನು-ಸಂಯುಕ್ತ ಭಾವನೆಗಳನ್ನು (composite feelings)—ಹಿಡಿಯುವ ಶಬ್ದ ! ಇಂಥ ಶಬ್ದಗಳಿಗೆ ಒಂದೆರಡು ಉದಾಹರಣೆ ಗಳನ್ನು ಕೊಡಬಹುದು. ಎರಿಕ್ ಫ್ರಾಮ್ ಕೊಡುವ ಉದಾಹರಣೆಯಿದು—Ambivalence. ಸಿಗ್ಮಂಡ್ ಫ್ರಾಯ್ಡ್ ಹುಟ್ಟಿಸಿದ ಶಬ್ದವಿದು. ಫ್ರಾಯ್ಡ್ ತಾನು ಕಂಡು ಹಿಡಿದ ಒಂದು ವಾಸ್ತವ ಸಂಗತಿಯನ್ನು – ಮಗನಿಗೆ ತಂದೆಯ ಬಗ್ಗೆ ಒಂದೇ ಕಾಲಕ್ಕೆ ಅನ್ನಿಸುವ ಪ್ರೀತಿ ಹಾಗೂ ದ್ವೇಷದ ಭಾವನೆಗಳನ್ನು – ಸೂಚಿಸಲು ಬಳಸಿದ ಶಬ್ದ–ಆ್ಯಂಬೀವೆಲೆನ್ಸ್ ! Awe ಕೂಡ ಇಂಥ ಜೋಡು ಭಾವನೆಯನ್ನು ವ್ಯಕ್ತಪಡಿಸುವಂಥದ್ದೇ- admiration ಮತ್ತು fear. ಕನ್ನಡದ 'ದಿಗಿಲು'ಗೆ ಕೂಡ ಇದೇ ಅರ್ಥ: ಕೌತುಕ ಮತ್ತು ಭಯ. ಹೀಗೆ ಎರಡೆರಡು ಭಾವಗಳನ್ನು ಹಿಡಿಯುವ ಶಬ್ದಗಳು ಕೂಡ ವಿರಳವಾಗಿರುವ ಭಾಷೆಯಲ್ಲಿ ಹತ್ತು ಹತ್ತು ಭಾವನೆಗಳನ್ನು ಹಿಡಿಯುವ ಶಬ್ದ ಹುಟ್ಟುವದು ಸಾಧ್ಯವಿಲ್ಲ. ಇರುವ ಸಾಧ್ಯತೆಯೊಂದೇ—ಹೈಫನೇಟೆಡ್ (hyphenated) ಶಬ್ದಗಳ ಬಳಕೆ: ಭಯ cum ಜಿಗುಪ್ಸೆ cum ಪ್ರೀತಿ cum ದ್ವೇಷ cum ... ಹೀಗೆ, ಅಥವಾ ಭಯ-ಜಿಗುಪ್ಸೆ-ಪ್ರೀತಿ-ದ್ವೇಷ ... ಎಂದು ಮುಂತಾಗಿ ಈ ಭಾವನೆಗಳನ್ನು ವರ್ಣಿಸಬಹುದು. ನಾನಿನ್ನೂ ವಿದ್ಯಾರ್ಥಿ ಯಾಗಿದ್ದಾಗ ಎಂ. ಎನ್. ರಾಯ್ ಅವರ ಭಾಷಣ ಕೇಳಲು ಹೋಗುತ್ತಿದ್ದೆ.

ಕ್ರಾಂತಿಯ ಬಗ್ಗೆ ಮಾತನಾಡುವಾಗ, ಕ್ರಾಂತಿ ಬರಿಯ ಒಂದು ಕ್ಷೇತ್ರದಲ್ಲಿ ಆದರೆ ಉಪಯೋಗವಿಲ್ಲ, ಎಲ್ಲ ಕ್ಷೇತ್ರಗಳಲ್ಲೂ ಒಂದೇ ಕಾಲಕ್ಕೆ ಆಗಬೇಕು ಅನ್ನುತ್ತಿದ್ದರು. ಹಾಗೂ ಹಾಗೆ ಒಂದೇ ಕಾಲಕ್ಕೆ ಕ್ರಾಂತಿಯಾಗಬೇಕಾದ ಕ್ಷೇತ್ರವನ್ನು Socio-Economico – Politico – Cultural — ಎಂದು ವರ್ಣಿಸುತ್ತಿದ್ದರು. ಇಂಥ ವಾಸ್ತವತೆಯನ್ನು ನಿರ್ದೇಶಿಸಬಲ್ಲ ಶಬ್ದ ಭಾಷೆಯಲ್ಲಿ ಇಲ್ಲದ ಕಾರಣ ಸೋಶಿಯೋ-ಇಕಾನೋಮಿಕೋ-ಪೊಲಿಟಿಕೋ-ಕಲ್ಚರಲ್ ಎನ್ನುವ ಹೊಸ ಹೈಫನೇಟೆಡ್ ಶಬ್ದಗಳನ್ನವರು ಬಳಸಬೇಕಾಯಿತು. ಇಂಥ ಹಿನ್ನೆಲೆಯಲ್ಲಿ ನಾನು ಕೇಳಬಯಸುವ ಪ್ರಶ್ನೆ ಇದು : ಇಂದಿನ ಮಾನವನಲ್ಲಿ ಒಂದೇ ಕಾಲಕ್ಕೆ ಹುಟ್ಟುವ ಹತ್ತು ಹಲವು ಭಾವನೆಗಳಿಗೆ ಆಕೃತಿ ಮೂಡಿಸಬಲ್ಲ ಶಬ್ದಗಳು ಭಾಷೆಯಲ್ಲೇ ಇಲ್ಲದಿರುವಾಗ ಇಡಿಯ ಕಾದಂಬರಿಗೆ ಕಾದಂಬರಿಯೇ ಇಂಥ ಒಂದು 'ಹೈಫನೇಟೆಡ್' ಭಾಷೆಯ ಹಾಗೆ ಕೆಲಸ ಮಾಡುವದು ಶಕ್ಯವಿಲ್ಲವೆ? ಕಾದಂಬರಿಯಲ್ಲಿ ಬರುವ ಭಾಷೆಯ ಬಗ್ಗೆ ನಾನು ಕೇಳುತ್ತಿಲ್ಲ. ಕಾದಂಬರಿಯೇ ಒಂದು ಭಾಷೆಯಾಗುವ ಸಾಧ್ಯತೆಯ ಬಗ್ಗೆ ಕೇಳುತ್ತಿದ್ದೇನೆ

ನಿಜವಾಗಿ ಯಶಸ್ವಿಯಾದ ಸೃಜನಶೀಲ ಕಾದಂಬರಿ ಹರಳುಗಟ್ಟಿದ ಅರ್ಥವಾಗಿದೆ. ನಮ್ಮ ಸಂಯುಕ್ತ ಭಾವನೆಗಳಿಗೆ (Composite feelings) ಮೂಡಿದ ಅರ್ಥಪೂರ್ಣ 'ಆಕೃತಿ'ಯಾಗಿದೆ. ಸಂಯುಕ್ತ ಭಾವನೆಗಳೆಂದೇನೇ ಹೊರತು 'ಸಂಕೀರ್ಣ' (complex) ಭಾವನೆಗಳಲ್ಲ. ಕಾದಂಬರಿ ಅನ್ನುವ ಸಾಹಿತ್ಯ ಪ್ರಕಾರದಲ್ಲಿ ನಾನು ಇಷ್ಟು ದೊಡ್ಡದನ್ನು ಬಯಸುತ್ತಿರುವ ಹಿನ್ನೆಲೆಯಲ್ಲಿ ಕಾರಂತರ ಯಾವ ಕಾದಂಬರಿಯನ್ನು ತೆಗೆದುಕೊಂಡರೂ ಆಶ್ಚರ್ಯಕ್ಕೆ ಕಾರಣವಾಗುವ ಸಂಗತಿ, ಅವುಗಳ ಭಾಷೆಯ ಬಗೆಗಿನ ಔದಾಸೀನ್ಯ ! ವಾಸ್ತವವಾಗಿ. ನಮ್ಮಲ್ಲಿ ಭಾಷೆಯ ಬಗೆಗಿನ ಎಚ್ಚರದ ಪ್ರಯತ್ನ ಆದದ್ದೇ ನವ್ಯ ಸಾಹಿತ್ಯದಲ್ಲಿ. ನನಗೆ ಮತ್ತೆ ಇಲ್ಲಿ ವಿವಾದ ಬೇಕಾಗಿಲ್ಲ. ಆದರೂ ಯಾರಾದರೂ ಗುರುತಿಸಬಹುದಾದ ನವ್ಯ ಸಾಹಿತ್ಯದ ಸ್ಪಷ್ಟ ಸಾಧನೆಯಿದು-ಉಳಿದೆಲ್ಲವನ್ನೂ ಬಿಟ್ಟರೂ ಕೂಡ, ಭಾಷೆಯ ಬಗ್ಗೆ ಹೊಸ ಪ್ರಜ್ಞೆ ಹುಟ್ಟಿದ್ದೇ ನವ್ಯ ಸಾಹಿತ್ಯದ ಮುಖಾಂತರ ಎನ್ನಬೇಕು.

ನಾನು ಮನಸ್ಸಿನಲ್ಲಿಟ್ಟುಕೊಂಡ ಭಾಷಾ ಪ್ರಯೋಗಕ್ಕೆ ಕೆಲವು ಉದಾಹರಣೆಗಳನ್ನು ಕೊಡಬಹುದು. ಮೊದಲನೆಯದಾಗಿ ನನಗೆ ಪ್ರಿಯವಾದ ಕಾಫ್ಕಾ ಸಾಹಿತ್ಯ. ಚಿತ್ತಾಲರ ಮೇಲೆ ಕಾಫ್ಕಾನ ಪ್ರಭಾವವಿದೆ ಎನ್ನುತ್ತಾರೆ. ಆದರೆ ಯಾವ ರೀತಿಯಿಂದ ಕಾಫ್ಕಾ ಚಿತ್ತಾಲರಿಗೆ ಪ್ರಿಯ? 'ಟ್ರಾಯಲ್' ಆಗಲೀ 'ಕ್ಯಾಸಲ್' ಆಗಲೀ—ಇಡೀ ಕಾದಂಬರಿಯೇ ಒಂದು ಭಾಷೆ. ಅದರಲ್ಲಿ ಶಬ್ದಗಳಿವೆ, ವಾಕ್ಯರಚನೆಯಿದೆ. ತುಂಬ ಸಾಂಪ್ರದಾಯಿಕವೇ ಆದರೂ ಇಡೀ ಕಾದಂಬರಿಯ ಭಾಷೆಯನ್ನು ಶಬ್ದಗಳಲ್ಲಿ ವಿಶ್ಲೇಷಿಸುವುದು ಶಕ್ಯವಲ್ಲ. ನನಗೆ ಉಲ್ಲೇಖಿಸಬೇಕಾದ ಇನ್ನೊಂದು ಕಾದಂಬರಿ ಮೆಲ್ವಿಲ್‌ನ 'ಮೋಬೀಡಿಕ್'. ಸಾಹಿತ್ಯದ ಹೊರಗೆ ಹೋಗಿ ಹೇಳಬಹುದಾದರೆ ನಮ್ಮ

ಸಂಯುಕ್ತ ಭಾವನೆಗಳಿಗೆ ಇಂಥ ಇಮೇಜ್ ಹುಟ್ಟುವದು Mythologyಯಲ್ಲಿ, ನಮ್ಮ ಕನಸುಗಳಲ್ಲಿ. ಕನಸುಗಳೇ ಒಂದು ಹೈಫನೇಟೆಡ್ ಜಗತ್ತು. ಭಾಷೆ, ಪುರಾಣ ಗಳೂ ಕೂಡ. ನಾವು ಒಂದು ಆಧುನಿಕ ಪುರಾಣವನ್ನು ಸೃಷ್ಟಿಸಬೇಕಾದರೆ ಇಂಥದ್ದನ್ನು ಮಾಡಲೇಬೇಕು—'Hundred years of solitude'ನಲ್ಲಿ ಮಾರ್ಕ್ವಿಜ್ ಮಾಡಿದ ಹಾಗೆ.

ಕಾರಂತರ ಕಾದಂಬರಿಗಳ ಭಾಷೆಯ ಹಿನ್ನೆಲೆಯಲ್ಲಿ ಇಷ್ಟು ಹೇಳಿದ್ದರಿಂದ ವಿಷಯ ದಿಂದ ಬಹಳ ದೂರ ಹೋಗಿಲ್ಲ ಅಂದುಕೊಂಡಿದ್ದೇನೆ. ಇವತ್ತು ನಾನು ಪ್ರಸ್ತಾಪಿಸ ಬೇಕೆಂದುಕೊಂಡಿದ್ದ ಕಾಲಯೋಜನೆ ಹಾಗೂ ಪರಿಸರಗಳನ್ನು ಕುರಿತ ಅಂಶಗಳನ್ನು ಬಿಟ್ಟುಕೊಡುತ್ತೇನೆ. ಸದ್ಯ, ಈ ವಿಷಯಗಳಲ್ಲಿ ಕೂಡ ಅವರ ಬಹಳಷ್ಟು ಕೃತಿಗಳು ಮನಸ್ಸಿಗೆ ತೃಪ್ತಿ ಕೊಡುವಂಥವುಗಳಲ್ಲ ಎಂದಿಷ್ಟೇ ಹೇಳಬಯಸುತ್ತೇನೆ.

ಕೊನೆಯಲ್ಲಿ, ಕಾರಂತರ ಕಾದಂಬರಿಗಳಿಂದಲೇ ಪ್ರಭಾವಿತನಾದ ಒಬ್ಬ ಲೇಖಕ, ಬಹು ಮುಖ್ಯವಾಗಿ ಅವರ ಭಾಷೆಯಿಂದಲೇ ಪ್ರಭಾವಿತನಾಗಿದ್ದ ಲೇಖಕ ಈಗ ಕಾರಂತರ ಸಾಹಿತ್ಯದ ಬಗ್ಗೆ ಅಸಮಾಧಾನ ವ್ಯಕ್ತಪಡಿಸಲು ಹೊರಟದ್ದು ಸ್ವಲ್ಪ ಧಾರ್ಷ್ಟ್ಯದ ಮಾತಾಗಿ ತೋರಬಹುದು. ಆದರೆ ನಾನಿದನ್ನು ಯಾವ ಅರ್ಥದಲ್ಲಿ, ಯಾವ ಸನ್ನಿವೇಶದಲ್ಲಿ ಹೇಳುತ್ತಿದ್ದೇನೆ ಎಂಬುದನ್ನು ಮನಗಾಣಬೇಕು ಎಂದು ಪ್ರಾರ್ಥಿಸುತ್ತೇನೆ. ಕೊನೆಗೂ ಕಾರಂತರ ಕಾದಂಬರಿಗಳ ಮುಖಾಂತರ ನಮ್ಮನು ತಟ್ಟುವುದು ಕಾರಂತರ ಮನಸ್ಸೇ. ಅನೇಕ ವಿಚಾರಗಳ ಬಗ್ಗೆ ಆಸಕ್ತಿ ಇಟ್ಟುಕೊಂಡಿರುವ ಹಾಗೂ ಹಾಗೆ ಆಸಕ್ತಿ ಇಟ್ಟುಕೊಂಡಿರುವುದರಿಂದಲೇ ನಮ್ಮಲ್ಲೂ ಆಸಕ್ತಿ ಹುಟ್ಟಿಸುವ ಮನುಸ್ಸು. The solid fact behind all Karanth's fiction is Karanth' himself !

ಅನುಬಂಧ 2

ಕೆಲವು ಪ್ರಬಂಧಗಳನ್ನು ಕುರಿತ ಪ್ರಶ್ನೋತ್ತರಗಳು

# ಕನ್ನಡ ಕಾದಂಬರಿ ಪರಂಪರೆ ಮತ್ತು ಕಾರಂತರು

---

ಡಿ. ಆರ್. ನಾಗರಾಜ್

ಪ್ರಶ್ನೆ : ಕಾರಂತರನ್ನು ಡಿ. ಆರ್. ನಾಗರಾಜ ಅವರು ಮಹಾ ವಾಸ್ತವ ವಾದಿ ಕಾದಂಬರಿಕಾರ ಎಂದರು. ಆದರೆ ಅವರ ಮೂಕಜ್ಜಿ ಅತೀಂದ್ರಿಯ ಶಕ್ತಿ ಪಡೆದು, ಒಂದು ರೀತಿ ಮನಸ್ಸಿನಲ್ಲಿ ಅನ್ನಿಸುವ ವಿಚಾರಗಳನ್ನು ಸ್ಫೋಟಿಸುವ ಪಾತ್ರ ವಾಗುವ ಸಂದರ್ಭದಲ್ಲಿ ಅದು "un natural" ಎನ್ನಿಸುವುದಿಲ್ಲವೆ?

ಉತ್ತರ : 'ಮಹಾ ವಾಸ್ತವವಾದಿ' ಅಥವಾ ಗ್ರೇಟ್‌ರಿಯಲಿಸಂ ಬಗೆಗೆ ತುಂಬ ಸರಳೀಕೃತ ಕಲ್ಪನೆ ನಿಮಗಿರುವ ಹಾಗೆ ಕಾಣುತ್ತದೆ. ಟಾಲ್‌ಸ್ಟಾಯ್‌ನಲ್ಲಿ, ದಾಸ್ತೊವಸ್ಕಿಯಲ್ಲಿ ಈ ರೀತಿಯ un natural ಸಂಗತಿಗಳು ಸಾಕಷ್ಟಿವೆ. ಈ ವಿಷಯ ಹಾಗಿರಲಿ. 'ಮೂಕಜ್ಜಿ' ದೊಡ್ಡ ಕಾದಂಬರಿ ಎಂದು ನನಗೆ ಅನ್ನಿಸುವುದಿಲ್ಲ. ಏಕೆಂದರೆ, ಅಲ್ಲಿ ಕಾರಂತರ ವಿಚಾರಗಳೇ ಮುಖ್ಯವಾಗಿ, ಜೀವನಾನುಭವದ ಸಂಕೀರ್ಣತೆ ಸತ್ತು ಹೋಗಿದೆ. ಮೂಕಜ್ಜಿಯ ಕಾರಂತರು ನನಗೆ ಪ್ರಿಯವಾದವರಲ್ಲ.

ಪ್ರಶ್ನೆ : ಮೂಕಜ್ಜಿಯ ಕನಸುಗಳಲ್ಲಿ ಕಾರಂತರ ವೈಚಾರಿಕ ಪ್ರಜ್ಞೆ, ಪ್ರಧಾನ ವಾಗಿ ಜೀವನ ಸಂಬಂಧಗಳ ಕೊರತೆ ಇದೆಯೆನ್ನಿಸುವುದಿಲ್ಲವೆ?

ಉತ್ತರ : ಹೌದು, ಜೀವನ ಸಂಬಂಧಗಳ ಕೊರತೆ ಇದೆ ಎಂಬ ಕಾರಣಕ್ಕಾಗಿಯೆ ಅದು ಡಲ್ಲಾದ ವೈಚಾರಿಕ ಥೀಸಿಸ್ ಆಗಿಬಿಟ್ಟಿದೆ.

ಪ್ರಶ್ನೆ : ಚೋಮನದುಡಿ ಕಲಾವಿದ ಸಂವೇದನೆಯುಳ್ಳ ನಾಯಕಪಾತ್ರ ಹೊಂದಿದೆಯೇ? ಹೇಗೆ?

ಉತ್ತರ : ಚೋಮ ಮೂಲತಃ ಕಲಾವಿದ ಸಂವೇದನೆಯುಳ್ಳ ಪಾತ್ರವೇ. ಈ ಪಾತ್ರ ಮಧ್ಯಮ ವರ್ಗೀಯ ಸಂವೇದನೆ ಹೊಂದಿರುವ ಪಾತ್ರ ಎಂದು ನನ್ನ ವಿಶ್ಲೇಷಣೆ. 'ಮರಳಿ ಮಣ್ಣಿಗೆ'ಯ ರಾಮನಿಗೂ ಈ ಚೋಮನಿಗೂ ಆಳವಾದ ಸಾಮ್ಯಗಳಿವೆ ಎಂಬುದನ್ನು ಗಮನಿಸಿ.

# ಕಾರಂತರ ಕಾದಂಬರಿಗಳಲ್ಲಿ ರಾಜಕಾರಣದ ನೆಲೆಗಳು

---

ಡಿ. ಎಸ್. ನಾಗಭೂಷಣ

ಪ್ರಶ್ನೆ : ರಾಜಕಾರಣದಿಂದ ವ್ಯಕ್ತಿಗೆ ಬರುವ ಸಾಮಾಜಿಕ ವ್ಯಕ್ತಿತ್ವದಿಂದಾಗಿ ಉಂಟಾಗುವ ಪರಿಣಾಮವೆಂದರೆ ಕುಟುಂಬದ ವಿಘಟನೆ. ಕುಟುಂಬದ ವಿಘಟನೆ ಮೂಲಭೂತವಾಗಿ ಕಾರಂತರಿಗೆ ಸಹ್ಯವಲ್ಲದ ಸಂಗತಿಯಾಗಿರುವುದರಿಂದ ಈ ದಿಕ್ಕಿನಲ್ಲಿ ಆಲೋಚನೆ ಸಾಧ್ಯವಿಲ್ಲವೆ?

ಉತ್ತರ: ಕುಟುಂಬದ ವಿಘಟನೆಗೆ ಸಾಮಾಜಿಕ ವ್ಯಕ್ತಿತ್ವ ಕಾರಣವಾಗಬಲ್ಲುದಾದರೆ ರಾಜಕಾರಣದಿಂದಷ್ಟೇ ಅಲ್ಲ, ಇನ್ನಿತರ ಸಂಗತಿಗಳಿಂದಲೂ ಉಂಟಾಗುವ ಸಾಮಾಜಿಕ ವ್ಯಕ್ತಿತ್ವದಿಂದಲೂ ಕುಟುಂಬದ ವಿಘಟನೆ ಆಗಬೇಕು. ಉದಾಹರಣೆಗೆ, ನೃತ್ಯಪಟು ಆಗುವುದರಿಂದ, ಪತ್ರಕರ್ತನಾಗುವುದರಿಂದ ಇತ್ಯಾದಿ. ಆದರೆ ಹಾಗೇನೂ ಆಗಬೇಕಿಲ್ಲ. "ಔದಾರ್ಯದ ಉರುಳಿನಲ್ಲಿ"ಯ ರಾಧಾಕೃಷ್ಣನ ಕುಟುಂಬವಾಗಲೀ ಅಥವಾ "ಮೂಜನ್ಮ"ದ ಚಂದ್ರಕಾಂತ ಗುಪ್ತರ ಕುಟುಂಬವಾಗಲಿ ಈ ದುರಂತದ ಹತ್ತಿರಕ್ಕೂ ಸುಳಿಯುವುದಿಲ್ಲ ವಾಸ್ತವವಾಗಿ ರಾಜಕಾರಣ (ಮೊದಲಿನದರಲ್ಲಿ ಸೇವಾತ್ಮಕ ರಾಜಕಾರಣ, ಎರಡನೆಯದರಲ್ಲಿ ವ್ಯಾವಹಾರಿಕ ರಾಜಕಾರಣ) ಕುಟುಂಬದ ಬಂಧಗಳನ್ನು ಇನ್ನಷ್ಟು ಬಿಗಿಗೊಳಿಸುವುದನ್ನು ಅಲ್ಲಿ ಕಾಣಬಹುದು. ಬಿಕ್ಕಟ್ಟು ಎನ್ನಬಹುದಾದ ಪರಿಸ್ಥಿತಿ ಬರುವುದು "ಸಮೀಕ್ಷೆ"ಯಲ್ಲಿ ಮಾತ್ರ. ಆದರೆ ಈ ಕಾದಂಬರಿಯಲ್ಲಿ ರಾಜಕಾರಣ, ಮನುಷ್ಯನು ಮಾಗುವ ಕ್ರಿಯೆಯನ್ನು ಮಂಡಿಸುವ ಕಾರಂತರ ಪ್ರಯತ್ನದ (ಯಾವುದು ಅರ್ಥವತ್ತಾದ ಬಾಳು? ಅರ್ಥವರಿಯಲೆತ್ನಿಸಿ, ಅದರಂತೆ ಬಾಳಲೆತ್ನಿಸಿದ ಸೋಲೂ ಯಶಸ್ವಿಯಾದುದಲ್ಲವೇನು? ಬಾಳಿನಲ್ಲಿ ಕಾಣಸದ ಅರ್ಥ ಎಲ್ಲಿದ್ದರೇನು? ಯಾರ ಸಲುವಾಗಿ ಅದಿರಬೇಕು?–ಮುನ್ನುಡಿ, "ಸಮೀಕ್ಷೆ") ಒಂದು ಆನುಷಂಗಿಕ ಮುಖ ವಾಗಿ ಮಾತ್ರ ಬರುತ್ತದೆ. ನಿಜ, ಇಲ್ಲಿ ಬದುಕೇ ದೊಡ್ಡದಾಗಿ ರಾಜಕಾರಣ ಮೂಲೆ ಸೇರುತ್ತದೆ. ಆದರೆ ಇದೇನೂ ಬದುಕು ಮತ್ತು ರಾಜಕಾರಣದ ನಡುವಣ ವೈರುಧ್ಯ ಗಳ ಪ್ರಶ್ನೆಯಾಗಿ ಬರುವುದಿಲ್ಲ. ಆದುದರಿಂದ ಕಾರಂತರ ಕಾದಂಬರಿಗಳ ಹಿನ್ನೆಲೆ ಯಲ್ಲಿ ರಾಜಕಾರಣ–ಸಾಮಾಜಿಕ ವ್ಯಕ್ತಿತ್ವ - ಕುಟುಂಬ ವಿಘಟನೆಯ ಪ್ರಶ್ನೆ ಸಾರ್ವತ್ರಿಕ ಆಲೋಚನೆಯಂಥಹುದಕ್ಕೇನೂ ಎಡೆ ಮಾಡುವುದಿಲ್ಲ.

ಪ್ರಶ್ನೆ : ಹಣ ಗಳಿಸುವುದು ಮತ್ತು ಅಧಿಕವಾಗಿ ಆಸ್ತಿ ಸಂಗ್ರಹಿಸುವ ಜನರ ಬಗ್ಗೆ ಸಹಾನುಭೂತಿ ತೋರುವ ಕಾರಂತ ಸಮಾಜವಾದವನ್ನು ಯಾವ ರೀತಿ ಅರ್ಥೈಸಿದ್ದಾರೆ?

ಉತ್ತರ: ಕಾರಂತರ ಪ್ರಪಂಚದಲ್ಲಿ ಶ್ರಮ ಒಂದು ಮೌಲ್ಯ. ಇಷ್ಟು ಪವಿತ್ರ ಮೌಲ್ಯವನ್ನು ಆಧಾರವಾಗುಳ್ಳ ಕಾರಂತರ ಪ್ರಪಂಚದ ಒಂದು ವೈಚಿತ್ರ್ಯವೆಂದರೆ ಎಲ್ಲ ಹಣ ಗಳಿಕೆಯ ಹಾಗೂ ಆಸ್ತಿ ಸಂಗ್ರಹಣೆಯ ಮೂಲ ಈ ಹಣ ಗಳಿಸುವವನ ಅಥವಾ ಆಸ್ತಿ ಸಂಗ್ರಹಿಸುವವನ ಒಟ್ಟಾರೆ ಶ್ರಮವೆಂದೇ ಬಗೆಯುವುದು. ಹೀಗೆ, ಶ್ರಮ ಅಥವಾ ದುಡಿಮೆ ಎನ್ನುವುದು ಒಂದು ಏಕೀಕೃತ ಘಟಕವೆಂದು ಭಾವಿಸುವ ಕಾರಂತರು ಸಹಜವಾಗಿಯೇ ಶ್ರಮವೆಂಬುದೊಂದು ಸಂಕೀರ್ಣ ಘಟಕ – ಅದಕ್ಕೆ ಹತ್ತಾರು ಕೈಗಳೂ, ಬಾಯಿಗಳೂ ಇವೆ– ಎಂದು ಗುರುತಿಸುವ ಸಮಾಜವಾದವನ್ನು ಕೇವಲ ವ್ಯಂಗ್ಯ, ಕಟಕಿ ಹಾಗೂ ಅಪಹಾಸ್ಯಗಳ ಮೂಲಕವೇ ಅರ್ಥೈಸಲು ಹೋಗಿ ಅಪಾರ್ಥಿಸಿದ್ದಾರಷ್ಟೇ.

ಪ್ರಶ್ನೆ : ಕಾರಂತರ ರಾಜಕೀಯ ಕಾದಂಬರಿಗಳು ಅಷ್ಟೊಂದು ಯಶಸ್ವಿಯಾಗದಿರಲು ಅವರಿಗೆ ವ್ಯವಸ್ಥಿತವಾದ ರಾಜಕೀಯ ವಿಚಾರ ಪ್ರಣಾಲಿ (ideolgy) ಇರದಿರುವುದು ಮುಖ್ಯಕಾರಣವೇ ?

ಉತ್ತರ: ನಿಜ. ಆದರೆ ಕಾರಂತರು ಯಾವುದೇ–ವಾದಿ ಆಗಬೇಕೆಂದಲ್ಲ. ಕನಿಷ್ಠ ಅವರು ರಾಜಕಾರಣ ಕುರಿತು ವ್ಯವಸ್ಥಿತವಾಗಿ ವಿಚಾರ ಅಥವಾ ಆಲೋಚನೆ ಮಾಡಬಲ್ಲರಾಗಿದ್ದರೆ ಸಾಕಿತ್ತು. ರಾಜಕಾರಣವೆಂದರೆ ಕೇವಲ ಸಾರ್ವಜನಿಕ ವ್ಯವಸ್ಥಾಪನೆ (Public Management) ಯಲ್ಲ, ಅದೊಂದು ಚರಿತ್ರೆ, ವರ್ತಮಾನ ಹಾಗೂ ಭವಿಷ್ಯಗಳನ್ನು ತೊಡಗಿಸಿಕೊಂಡ ಕ್ರಿಯಾಲಹರಿ ಎಂಬ ಮೂಲಭೂತ ಅರಿವೇ ಅವರಲ್ಲಿ ಕಾಣದಾಗಿದೆ.

ಪ್ರಶ್ನೆ: ಕಾರಂತರು ಉಳುವವನದೇ ಭೂಮಿ ಎನ್ನುವುದನ್ನು ಗೇಲಿ ಮಾಡಿದ್ದಾರೆ ಎಂದಿದ್ದೀರಿ. ಆದರೆ 'ಚೋಮನ ದುಡಿ'ಯ ಚೋಮನ ಪಾತ್ರದ ಮೂಲಕ ಅವರು ಹೇಳಲು ಹೊರಟಿರುವ ಅಂಶ ಯಾವುದು ?

ಉತ್ತರ: ನಾನು ಮೊದಲೇ ಹೇಳಿರುವೆ: ಶ್ರಮವನ್ನು ಕಾರಂತರು ಒಂದು ಪವಿತ್ರ ಮೌಲ್ಯವೆಂದು ಪರಿಗಣಿಸುತ್ತಾರೆ. 'ಚೋಮನ ದುಡಿ'ಯಲ್ಲಿ ಈ ಶ್ರಮ ಗಟ್ಟಿ ಮುದೆಯಂತೆ ಶ್ರಮವಾಗಷ್ಟೆ ಉಳಿದಿದೆ; ಅದು ತನ್ನೊಳಗಿನ ರಾಜಕೀಯ ಸಾಧ್ಯತೆಗಳನ್ನು ಪ್ರಕಟಿಸಿಯೇ ಇಲ್ಲ. ಕಾದಂಬರಿಯ ಚೌಕಟ್ಟೇ ಹಾಗಿದೆ. ಹೊಲೆಯನೊಬ್ಬನ ಬದುಕಿನ 'ದಾರುಣ' ಚಿತ್ರ ಮಾತ್ರ ಅಲ್ಲಿದೆ. ಆದುದರಿಂದಲೇ ಚೋಮನ ಪಾತ್ರದ ಹಿಂದೆ ಕಾರಂತರ ಸಹಾನುಭೂತಿ ಕಾಣುವಂತಿದೆ. ಆದರೆ, ಭೂಮಿಯ ಪ್ರಶ್ನೆ ಸಾರ್ವತ್ರೀಕರಣಕ್ಕೆ ಒಳಗಾಗಿ ರಾಜಕೀಯ ಸತ್ವ ಗಳಿಸಿಕೊಂಡು 'ಉಳುವವನದೇ ಭೂಮಿ' ಎಂದಾದಾಗ ಕಾರಂತರ ಸಹಾನುಭೂತಿ ಕರಗಿ ಹೋಗುತ್ತದೆ. 'ಚೋಮನ ದುಡಿ'ಯ ಚೋಮನ ಪಾತ್ರ, ಕಾರಂತರು ಮುಂದಿನ ದಿನಗಳಲ್ಲಿ ರಾಜಕೀಯವಾಗಿ ಸರ್ವತ್ರ ಪ್ರಬುದ್ಧಗೊಳ್ಳಲು ನಿರಾಕರಿಸಿದ್ದಾರೆ ಎಂಬುದನ್ನು ಖಚಿತಪಡಿಸುತ್ತದಷ್ಟೆ.

ಇಲ್ಲಿ ಇನ್ನೊಂದು ಅಂಶವನ್ನು ಗಮನಿಸಬಹುದು. ಕಾರಂತರು "ಚೋಮನ ದುಡಿ" ಬರೆದದ್ದು 1937 ರಲ್ಲಿ – ಸ್ವಾತಂತ್ರ್ಯ ಸಮರದ ಹಿಂದಿದ್ದ ಕನಸುಗಳು ನಿಗಿನಿಗಿಸುತ್ತಿದ್ದಾಗ. ಬರಲಿರುವ ಹೊಲಸು ರಾಜಕಾರಣದ ಸೂಚನೆಗಳೂ ಇಲ್ಲದಿದ್ದಾಗ.

# ಕಾರಂತರ ಕಾದಂಬರಿಗಳಲ್ಲಿ ಧರ್ಮ

---

ಕೆ. ಸತ್ಯನಾರಾಯಣ

ಪ್ರಶ್ನೆ: ಕಾರಂತರು ಧರ್ಮದ ಬಗ್ಗೆ ತಮ್ಮ ಅನಿಸಿಕೆಗಿಂತ ಹೆಚ್ಚಾಗಿ ಧರ್ಮದ ಬಗ್ಗೆ ಜನತೆಯ ಅನಿಸಿಕೆಗೆ ಹೆಚ್ಚು ಪ್ರಾಶಸ್ತ್ಯವನ್ನು ತಮ್ಮ ಕಾದಂಬರಿಗಳಲ್ಲಿ ಕೊಟ್ಟಿದ್ದಾರೆ ಎನಿಸುತ್ತದೆ, ಅಲ್ಲವೆ?

ಉತ್ತರ: ಒಂದು ದೃಷ್ಟಿಯಿಂದ ಹೌದು ಮತ್ತು ಮತ್ತೊಂದು ದೃಷ್ಟಿಯಿಂದ ಇಲ್ಲ. ತೀರಾ ಈಚಿನ ಕಾದಂಬರಿಗಳನ್ನು ಬಿಟ್ಟರೆ ಕಾರಂತರು ತಮ್ಮ ವಿಚಾರಗಳ ಬಗ್ಗೆ ಅಷ್ಟು ಹೆಚ್ಚು ಹಠ ಮಾಡುವುದಿಲ್ಲ. ತಮ್ಮ ನಂಬಿಕೆಗಳನ್ನು ಮತ್ತು ತಮ್ಮ ಪಾತ್ರದ ನಂಬಿಕೆಗಳನ್ನು ಅನುಭವದೊಡನೆ ಮುಖಾಮುಖಿಯಾಗಿಸಿ ಪರೀಕ್ಷಿಸುವ ಪ್ರಾಮಾಣಿಕತೆ ಕಾರಂತರಿಗಿರುವುದರಿಂದ ಅವರ ಮುಖ್ಯ ಮತ್ತು ಯಶಸ್ವಿಯಾದ ಕಾದಂಬರಿಗಳಲ್ಲಿ ಅನಿಸಿಕೆಗಳ ಪ್ರಾಶಸ್ತ್ಯದ ಪ್ರಶ್ನೆ ಬರುವುದಿಲ್ಲ. ಆದರೆ ಕಾರಂತರು ವಿಫುಲವಾಗಿ ಬರೆದಿರುವುದರಿಂದ ಈ ಪ್ರಶ್ನೆಗೆ ಪುರಾವೆಯನ್ನು ಕೂಡ ಹುಡುಕಬಹುದು. ಆದರೆ ಕಾರಂತರ ಕೋರ್ ಏನಿದೆ ಅದು ಇದಕ್ಕಿಂತ ದೊಡ್ಡದು.

ಪ್ರಶ್ನೆ : ಕಾರಂತರು ಧಾರ್ಮಿಕ ಪಾತ್ರಗಳನ್ನು ಸೃಷ್ಟಿಸುವಾಗ ಅದನ್ನು ಕೇವಲ ವೈಭವಿಸುತ್ತಾರೆಯೇ ವಿನಃ ಅದರ ಇತರ ಮಿತಿಗಳನ್ನು ಹೇಳುವುದಿಲ್ಲವೆನಿಸುವುದಿಲ್ಲವೆ?

ಉತ್ತರ: ವೈಭವೀಕರಣ ಕಾರಂತರಲ್ಲಿದೆ. ಆದಕ್ಕಾಗಿ ಅವರು ಯಕ್ಷಗಾನ, ಚಿತ್ರಕಲೆಯನ್ನು ಹಿಡಿದುಕೊಂಡಿದ್ದಾರೆ ಕಾರಂತರ ಕಾದಂಬರಿಗಳಲ್ಲಿ ವ್ಯಕ್ತವಾಗುವ. ಕಾಲ, ಪರಿಸರ, ಜೀವನ ಶ್ರದ್ಧೆಗೂ ಈಗಿನದಕ್ಕೂ ಇರುವ ವ್ಯತ್ಯಾಸದಿಂದ ಇಂತಹ ಪ್ರಶ್ನೆಗಳು ಉದ್ಭವಿಸಬಹುದು. ನನ್ನ ತಾಯಿ-ತಂದೆ ಅಥವಾ ಅದಕ್ಕೂ ಹಿಂದಿನ ಪೀಳಿಗೆಯವರಿಗೆ ಕಾರಂತರ ಪಾತ್ರಗಳು ವೈಭವೀಕರಣಕ್ಕೆ ಒಳಗಾದ ಹಾಗೆ ಕಾಣದಿರಬಹುದು. ಕಾರಂತರನ್ನು ಕುರಿತು ಇಂತಹ ಪ್ರಶ್ನೆಗಳು ಮತ್ತೆ ಮತ್ತೆ ಬಂದಿದ್ದರೂ ಇದರಲ್ಲಿ ಜೀವನ ದೃಷ್ಟಿಯ ಭಿನ್ನತೆಯ ಪ್ರಶ್ನೆಯೆಷ್ಟು, ಕಾರಂತರ ಪಾತ್ರವಿನ್ಯಾಸವನ್ನ, ಪ್ರಶ್ನಿಸುವುದೆಷ್ಟು – ಎಂಬುದು ಹೆಚ್ಚು ಸ್ಪಷ್ಟವಾಗುವುದಿಲ್ಲ. ಈ ವಿಚಾರ ಸಂಕಿರಣದಲ್ಲಿ ಶ್ರೀ. ಜಿ. ಎಚ್. ನಾಯಕರ ಭಾಷಣದಲ್ಲೂ ಈ ಪ್ರಶ್ನೆಯನ್ನು ಎತ್ತಲಾಗಿದೆ.

ಪ್ರಶ್ನೆ : ಶುದ್ಧ ಧಾರ್ಮಿಕ ಪಾತ್ರಗಳನ್ನೂ ಕಾರಂತರು ತಮ್ಮ ಕಾದಂಬರಿಗಳಲ್ಲಿ ಕೀರ್ತಿಸುವುದು (ಅಳಿದ ಮೇಲೆ'ಯ – ಅಜ್ಜಿ...ಮುಂ.), ಅವು ತಮ್ಮ ಬದುಕನ್ನು ಚೊಕ್ಕಟವಾಗಿಟ್ಟುಕೊಂಡ ರೀತಿಗೆ ಬೆರಗಾಗಿಯೇ ವಿನಃ ಕನ್ಸರ್‌ವೇಟಿವ್ ನಿಲುವನ್ನು ಪ್ರತಿಪಾದಿಸಲಲ್ಲ. ಇದು ಎಲ್ಲ ಸಹೃದಯ ಕಾದಂಬರಿಕಾರನಿಗಿರಬೇಕಾದ ನಿಲುವು ಕೂಡಾ ಅಲ್ಲವೇ ?

ಉತ್ತರ : ಹೌದು.

ಪ್ರಶ್ನೆ : ಕಾರಂತರು ಮೂಲಭೂತವಾಗಿ ಧರ್ಮವನ್ನು ಅವರ ಕಾದಂಬರಿಗಳಲ್ಲಿನ ಪಾತ್ರಗಳಲ್ಲಿ ಕಾಣುವುಕ್ಕಿಂತ ಅವರು ಒಂದು ತತ್ವದ ಪ್ರತಿಪಾದಕರಾಗಿ ಸ್ವಯಂ ತಾವೇ ವಿವರಿಸುವುದೇ ಆಗಿದೆ ಅನಿಸುತ್ತದೆ ಅಲ್ಲವೆ?

ಉತ್ತರ : ಎರಡನೇ ಪ್ರಶ್ನೆಗೆ ನೀಡಿರುವ ಉತ್ತರವನ್ನು ಗಮನಿಸಬೇಕಾಗಿ ಕೋರಿಕೆ. ಹಾಗೆಯೇ ಕಾರಂತರು ಕಾದಂಬರಿಕಾರರಾದ್ದರಿಂದಲೇ ನಮ್ಮ ಅನೇಕ ಧಾರ್ಮಿಕ ಕಲ್ಪನೆಗಳನ್ನು ವಿಸ್ತರಿಸಿದ ಬಗೆಯನ್ನು ಕುರಿತು ಈ ಪ್ರಬಂಧದಲ್ಲಿ ಹೇಳಿರುವ ಭಾಗವನ್ನು ಓದಿ.

ಪ್ರಶ್ನೆ : ಕಾರಂತರು Critical realist ಆಗಿರುವುದರಿಂದ ಅವರಲ್ಲಿ ಸಮಾಜದ ಮಿಥಿಕಲ್ ಜೀವನ ಧಾರೆ ಮತ್ತು ವೈಚಾರಿಕ ಜೀವನದ ಕ್ರಮ ಇವೆರಡೂ ಸೇರುತ್ತವೆ ಅಲ್ಲವೇ? ಈ ಹಿನ್ನೆಲೆಯಲ್ಲಿ ಧರ್ಮವೂ ಅವರಲ್ಲಿ ಅಂತರ್ ಸಂಬಂಧದ ವಿಶ್ಲೇಷಣೆಗೆ ಗುರಿಯಾಗುತ್ತದೆ. ನಿಮಗೆ ಸಮ್ಮತವೇ?

ಉತ್ತರ : ಸಮ್ಮತ.

## ಕಾರಂತರ ಕಾದಂಬರಿಗಳಲ್ಲಿ ನಿಸರ್ಗ–ಮಾನವ ಸಂಬಂಧಗಳು

---

ಪೋಲಂಕಿ ರಾಮಮೂರ್ತಿ

ಪ್ರಶ್ನೆ: ವಾಸ್ತವ ದೃಷ್ಟಿಯ ಕಾರಂತರು ಕಾಡನ್ನು ಅದೇ ದೃಷ್ಟಿಯಿಂದ ಕಂಡಿದ್ದಾರೆ. ಅದರಲ್ಲಿ ಭೂಮವನ್ನು ಕಾಣುವ ಬಯಕೆ ಏಕೆ?

ಉತ್ತರ: ಕಾಡು ಸಹಜವಾಗಿಯೇ, ವಾಸ್ತವವಾಗಿಯೇ ದೊಡ್ಡದು, ಭೂಮವಾದದ್ದು, ಅಲ್ಲವೇ? ಮರ ಮನುಷ್ಯನಿಗಿಂತ ದೊಡ್ಡದು, ಎತ್ತರಕ್ಕೆ, ಆಕಾಶಕ್ಕೆ ಬೆಳೆಯುವಂಥಾದ್ದು, ಅದರ ಎತ್ತರವನ್ನು ಕಂಡು ಮನುಷ್ಯ ಹಿಗ್ಗುತ್ತಾನೆ; ತಾನೂ ಅದರಂತೆ ಎತ್ತರಕ್ಕೆ ಬೆಳೆಯುವ ಉತ್ಕರ್ಷದಿಂದ ಮರ ಹತ್ತುತ್ತಾನೆ, ಮರಕೋತಿ ಆಡುತ್ತಾನೆ, ಉಯ್ಯಾಲೆ ಕಟ್ಟಿ ತೂಗುತ್ತಾನೆ, ಹಕ್ಕಿಯಾಗುತ್ತಾನೆ. ಮರದ ಎತ್ತರದಲ್ಲಿ ಹಿಗ್ಗು-ಹರ್ಷಗಳಿರುವಂತೆಯೇ ಆ ಎತ್ತರದಿಂದ ಬೀಳುವ ಭಯವೂ ಅದರಲ್ಲಿದೆ. ಹರ್ಷ, ಭಯ—ಎರಡೂ ಎತ್ತರದ ಬಗೆಗಿನ ಸಹಜ ಪ್ರತಿಕ್ರಿಯೆಗಳು. ಭಯ ಸಾಮಾನ್ಯವಾಗಿ ಬಾಲಿಶವಾದ, ಪ್ರಿಮಿಟಿವ್ ಪ್ರತಿಕ್ರಿಯೆ; ಹಿಗ್ಗು, ಆನಂದ ಪ್ರೌಢವಾದ, ವೃದ್ಧಿದಾಯಕ ಮನೋವೃತ್ತಿ. ಮರಗಳು ಕಾನ್ರಾಡನ ಕಥೆಯೊಂದರಲ್ಲಿ ಹೀಗೆ ಕಾಣುತ್ತವೆ: Going up that river was like travelling back to the earliest beginnings of the world, when vegetation rioted on the earth and the big trees were kings (Heart of Darkness). ಕಾಡಿನಲ್ಲಿ ಮರಗಳೇ ಸಾರ್ವಭೌಮರು. ಕಾರಂತರ ಬೆಟ್ಟದ ಜೀವದಲ್ಲಿ ಮರಗಳು ಹೀಗಿವೆ: 'ಇತ್ತಡಿಗಳಲ್ಲಿ ದೆವ್ವದಂಥ ಮರಗಳು ನೀರಲ್ಲಿ ತಮ್ಮ ಬಿಂಬಗಳನ್ನು ತಾವೇ ಕಂಡು ನಗುವಂತಿತ್ತು? ಕಾರಂತರ ಮರಗಳು ದೈತ್ಯರು, ಅಟ್ಟಹಾಸದಿಂದ ಭಯಗೊಳಿಸುವವರು. ಕಾರಂತರು ಕಾಡಿನಲ್ಲಿ ಭಯ ಕಾಣುತ್ತಾರಾಗಲಿ, ಅಷ್ಟೇ (ಕನಿಷ್ಟ ಪಕ್ಷದಲ್ಲಿ) ನಿಜವೂ, ವಾಸ್ತವವೂ ಆದ ಅದರ ಭೂಮವನ್ನು ಗ್ರಹಿಸುವುದಿಲ್ಲ. ಇದೊಂದು ಬಾಲಿಶವಾದ ಸಾಂಪ್ರದಾಯಿಕ ಸಂವೇದನಾ ಮನೋವೃತ್ತಿ; ಭಾರತೀಯ ಸಂಸ್ಕೃತಿಯಲ್ಲಿ ಅನೂಚಾನವಾಗಿ ಬೆಳೆದು ಬಂದ 'ವನವಾಸ' ಪ್ರವೃತ್ತಿ.

ಪ್ರಶ್ನೆ: ಕಾರಂತರ ನಿಸರ್ಗ—ಮಾನವನ ಸಂಬಂಧವನ್ನು ಕೇವಲ ಮೂರು ಕಾದಂಬರಿಗಳ ಕಥಾ ಹಂದರದ ಮೂಲಕ ನೋಡಿದ್ದೀರಿ. ನಿಸರ್ಗ—ಮಾನವನ ಘರ್ಷಣಾತ್ಮಕ ಸಂಬಂಧ ಕಾರಂತರಲ್ಲಿ ಚಿತ್ರಿತವಾಗಿರುವ ಬಗೆ ಮಹತ್ವದ್ದಲ್ಲವೇ?

ಉತರ: ಪ್ರಾತಿನಿಧಿಕವೆನಿಸಿಕೊಂಡ ಮೂರು ಕಾದಂಬರಿಗಳ ಬಗ್ಗೆ ಈ ನನ್ನ ಲೇಖನ ವೆಂಬುದು ಸ್ಪಷ್ಟವಿದೆ. ಇಲ್ಲಿ ನಿಸರ್ಗ–ಮಾನವ ಸಂಬಂಧದ ಬಗ್ಗೆ ಪ್ರಸ್ತಾಪವಿದೆ. 'ಘರ್ಷಣೆ' ಒಂದು ದುರದೃಷ್ಟ ಪದ ; ಪರಸ್ಪರ ಉಜ್ಜುವ, ತಿಕ್ಕಿ ಸವೆಸುವ, ಒಂದ ನ್ನೊಂದು ಲಯಗೊಳಿಸುವ ಕ್ರಿಯೆಯನ್ನು ಸೂಚಿಸುವ ಪದ. 'ಸಂಬಂಧ' ಎಂಬ ಪದದಲ್ಲಿ ಒಡನಾಟವಿದೆ, ಪರಸ್ಪರತೆಯಿದೆ, ಬಾಂಧವ್ಯವಿದೆ. ಇಬ್ಬರು ಎದುರಾಳಿ ಗಳಲ್ಲೂ, ವೈರಿಗಳಲ್ಲೂ ಒಂದು ವಿಶೇಷ ರೀತಿಯ ಕದನದ, ಕಾದಾಟದ ಸಂಬಂಧವಿದೆ, ವಿರೋಧ ಪ್ರೇಮದ ಅನುಬಂಧವಿದೆ.

ಪ್ರಶ್ನೆ ಸೂಚಿಸುವಂತೆ ಕಾರಂತರ ನಿಸರ್ಗ-ಮಾನವ 'ಘರ್ಷಣೆ' ಕಾದಂಬರಿಗಳ ವಸ್ತು. ನಿಸರ್ಗ-ಮಾನವ ಒಂದನ್ನೊಂದು ಇಲ್ಲವಾಗಿಸುವಲ್ಲಿ ಬಾಳು. ಕಾಡನ್ನು ಸುಟ್ಟು ಕತ್ತಿಯಿಂದ ತರಿದು, ಕಾಡುಮೃಗಗಳನ್ನು ಕೊಂದು, ಮಾನವ ಸಾಗುವಳಿ ಮಾಡಿ ಜೀವಿಸಬೇಕು. ಕರಿಯ ಆನೆಯನ್ನು ಪಳಗಿಸಿ ಸವಾರಿ ಮಾಡಿದಾಗ್ಯೂ ಅದು ಅವನ ಜೀವನೋಪಾಯಕ್ಕಲ್ಲ ; ಖುಷಿಗೆ, ಆಟಕ್ಕೆ. ಅದು ಕೊನೆಗೆ ಸುಬ್ರಹ್ಮಣ್ಯ ಸ್ವಾಮಿಗೆ ಕಾಣಿಕೆಯಾಗಿ ಸಲ್ಲಬೇಕು. ಕಾಡನ್ನು ಕೊಲ್ಲುವಲ್ಲಿ ಗೋಪಾಲಯ್ಯನಿಗೆ ಅಗ್ಗದ ಖುಷಿ ಇದೆ. ತನ್ನ ವಿಧ್ವಂಸಕ ಪರಾಕ್ರಮವನ್ನು ಶಿವರಾಮಯ್ಯನ ಮುಂದೆ ಬಣ್ಣಿಸುವಲ್ಲಿ, ದೇರಣ್ಣನನ್ನು ಪ್ರೇರೇಪಿಸಿ ಅವನಿಂದ ತನ್ನ ಪ್ರಶಂಸೆಯನ್ನು ಆಲಿಸುವಲ್ಲಿ, ದತ್ತು ಮಗನಂತಿರುವ ನಾರಾಯಣ ಅವನನ್ನು ದೇವರ ಸಮಾನನಾಗಿ ಕಂಡು ಅವನ ಪರಾಕ್ರಮವನ್ನು ಕೊಂಡಾಡುವಲ್ಲಿ ಗೋಪಾಲಯ್ಯ ಪುರುಷಾರ್ಥಕತೆಯ ತೃಪ್ತಿ ಯಿಂದ ಸುಮ್ಮಾನದಿಂದ ತೂಗುತ್ತಾನೆ. ನಿರೂಪಕನಾದ ಶಿವರಾಮಯ್ಯನೂ ಪರಾ ಕ್ರಮಕ್ಕೆ 'ಭಲೆ' ಎಂದು ಪುಷ್ಟಿಕೊಡುತ್ತಾನೆ. ಕಾಡನ್ನು ಕಾಪಾಡುವ ಸರ್ಕಾರ ಗೋಪಾಲಯ್ಯನಿಗೆ ಶತ್ರು; ಕಾಡಿನ ಗಂಭೀರ ಪ್ರಾಣಿಗಳಾದ ಆನೆ ಹುಲಿಗಳು ಅವನ ಪಾಲಿಗೆ ಪಿಡುಗು. ಶಿವರಾಮಯ್ಯ, ರಾಜ ಗಾಂಭೀರ್ಯದ ಹುಲಿ ಬೋನಿಗೆ ಬಿದ್ದು ಗುಂಡಿಗೆ ಸತ್ತಾಗ ಮರುಕದ ಮಾತೊಂದನ್ನು ಎಸೆದರೂ, ಆ ಹುಲಿಯ ಮೀಸೆ ಕೀಳು ತ್ತಾನೆ, ಅದರ ಚರ್ಮದ ಕೊಡುಗೆಯ ಆಶ್ವಾಸನೆಯನ್ನು ಸ್ವೀಕರಿಸುತ್ತಾನೆ. ಮೂಲತಃ ಬರಹಗಾರನನ್ನು ಪ್ರತೀಕಿಸುವ ಶಿವರಾಮಯ್ಯನ ಸಂವೇದನೆ ಸಾಂಪ್ರದಾಯಿಕ ಜಡತೆ ಯದು, ಬೂರ್ಜ್ವಾ ಮಟ್ಟದ್ದು; ಗೆಯ್ಮೆಯನ್ನು ಗೆಯ್ಮೆಯಾಗಿಯೇ ಏಕಪಕ್ಷೀಯ ವಾಗಿ ಕೀರ್ತಿಸುವ, ಅದನ್ನೊಂದು ಪರಮ ಮೌಲ್ಯವಾಗಿ ಕಾಣುವ ಲೌಕಿಕದ್ದು.

ಪ್ರಶ್ನೆ: ಮರಳಿ ಮಣ್ಣಿಗೆ ಕಾದಂಬರಿಯಲ್ಲಿ ಕಡಲು ಸಾವಿನ ಸಂಕೇತ ಎಂದಿರಿ, ಹೇಗೆ? ನನಗೆ ಅದು ಜೀವನೋತ್ಸಾಹದ ಪ್ರತೀಕ ಎನಿಸುತ್ತದೆ. ನಿಮ್ಮ ಅಭಿಪ್ರಾಯ ವೇನು?

ಉತ್ತರ: ಈ ಪ್ರಶ್ನೆಗೆ ಲೇಖನದಲ್ಲಿ ಸವಿಸ್ತಾರವಾದ ಉತ್ತರವಿದೆ. ಕಡಲು ಮರಳಿ ಮಣ್ಣಿಗೆಯಲ್ಲಿ ಸಾವಿನ ಆಶಯದ (death wish) ಪ್ರತೀಕವಾಗಿ ಉದ್ದಕ್ಕೂ ಬೆಳೆದು

ಕೊಂಡು ಬರುತ್ತದೆ. ರಾಮೈತಾಳರಿಗೆ ಕಡಲು ಶ್ರಾದ್ಧಕ್ಕೆ ಹೋಗುವ ಮಾರ್ಗ, ಗೆಲ್ಲನ್ನು ಕೊಡುವ ಸಾವಿನ ದವಡೆ, ವಂಶವನ್ನು ಲಯಗೊಳಿಸುವ ಶೋಷಕ ಸಂಕೇತವಾದರೆ, ರಾಮುನಿಗೆ ಅದು ಗರ್ಭದ ಕರೆ (Call of the womb), ಅವನನ್ನು ತಾಯಿಗೆ ಮರಳಿಸುವ, ಗರ್ಭದ ನೆಮ್ಮದಿಗೆ ಹಿಂತಿರುಗಿಸುವ, ಸಾವಿನ ಕರೆ. ರಾಮುನಿಗೆ ಕಡಲು ಮದ್ರಾಸಿನಲ್ಲೂ ಬೊಂಬಾಯಿಯಲ್ಲೂ ತಾಯಿಯ ಕರೆಯಾಗಿ ಕಾಡಿ, ಕೊನೆಗೆ ತಾಯ್ನಾಡಿನ ಕಡಲಿಗೆ, ತಾಯ ಗರ್ಭಕ್ಕೆ ಅವನನ್ನು ಹಿಂತಿರುಗಿಸುತ್ತದೆ; ತಾಯಿಮಕ್ಕಳನ್ನು ಸಾವಿನ ದಾಂಪತ್ಯದಲ್ಲಿ ಕೂಡಿಸುತ್ತದೆ. ಕಡಲು ತಾಯಿ-ಮಕ್ಕಳ ಕಲೆಯ (ಸಂಗೀತ, ಚಿತ್ರಕಲೆಗಳ) ಮಾಧ್ಯಮವಾಗುವುದರಲ್ಲೂ ಅದು ಬಾಳಿನ ವಿಮುಖತೆಯನ್ನು ಸಂಕೇತಿಸುತ್ತದೆ.

ಪ್ರಶ್ನೆ : ಕಾಡು–ನಿಸರ್ಗ negative ಆಗಿ ಕಾರಂತರು ಬಳಸಿಕೊಂಡಿರುವುದು ಭಾರತೀಯ ಸಂಪ್ರದಾಯ ಪರಂಪರೆ ಹೇಗೆ? ನಿಸರ್ಗ, ಭಾರತಿಯ ಪರಂಪರೆಯಲ್ಲೂ positiveಆಗಿಯೇ ಬಂದಿದೆಯಲ್ಲವೆ (in the wordsworthian sense)?

ಉತ್ತರ: ಇದಕ್ಕೆ ಲೇಖನದ ಪೀಠಿಕೆಯಲ್ಲಿ ಪೂರ್ಣ ವಿವರವಿದೆ; ಲೇಖನದ ಒಳಗೂ ಸಮರ್ಥನೆ, ಸಾಕ್ಷ್ಯಗಳಿವೆ. 'ವನವಾಸ', 'ಕಾಡು' ಈ ಎರಡು ಪದ, ಪದ-ಪುಂಜಗಳನ್ನು ಎಲ್ಲಿಯಾದರೂ 'ಹೇಗಾದರೂ positive ಆದ ಅರ್ಥಗಳಲ್ಲಿ ಉಪಯೋಗಿಸಲಾಗಿದೆಯೇ? ಕಡಲನ್ನು ದಾಟಿದರೆ ಜಾತಿ ಕೆಡುವ ಭಯವಿದೆ, ಅಲ್ಲವೇ? ಕಾಡು ಎನ್ನುವ ಕ್ರಿಯಾಪದವೂ 'ತೊಂದರೆಕೊಡು' 'ಪೀಡಿಸು' ಎನ್ನುವ ಅರ್ಥಗಳಲ್ಲಿ 'ಕಾಡು' ಎಂಬ ಪದದಿಂದಲೇ ಹುಟ್ಟಿದ negative ಪದವಲ್ಲವೇ? (ಕಾಡು–Jungle ; ಕಾಡ) jungle fellow ; ಕಾಡು-to treat harshly, give trouble; ಕಾಟ–trouble annoyance)

ಕಾಡು - ನಿಸರ್ಗ ಹಿತವಾಗಿ, positive ಆಗಿ ಬರಬೇಕಾದರೆ ಅದು ಮಾನವನ ಕೈವಾಡದಿಂದ, ಮಾನವೀಕರಿಸಿದ ಆಶ್ರಮ, ಉದ್ಯಾನವನ, ವಿಹಾರವಾಗಿರಬೇಕು-ಕಣ್ವಾಶ್ರಮದಂತೆ. ಕಾಳಿದಾಸ ಶಾಕುಂತಲದಲ್ಲಿ ನಿಸರ್ಗವನ್ನು ಮಾನವೀಕರಿಸಿದ್ದಾನೆ. ಶಕುಂತಲೆ ಮರಗಿಡಗಳಿಗೆ ನೀರೆಯುತ್ತಾಳೆ; ಜಿಂಕೆ ಅವಳ ಕೈಯಿಂದ ನೀರು ಕುಡಿಯುತ್ತದೆ. ಇಲ್ಲಿ ಶಕುಂತಲೆ ನಿಸರ್ಗದೊಂದಿಗೆ ತಾಯ್ತನದ (mother nature, foster mother, ವರ್ಡ್ಸ್‌ವರ್ತನ ಪರಿಕಲ್ಪನೆಯಂತೆ) ಸಲಹುವಿಕೆಯಲ್ಲಿ, ಅನುಬಂಧದಲ್ಲಿ ವ್ಯವಹರಿಸುತ್ತಾಳೆ. ನಿಸರ್ಗ ಅವಳಿಗೆ 'ಬಟ್ಟೆ' ಕೊಡುತ್ತದೆ ; ಅವಳು ಮಗುವಾಗಿದ್ದಾಗ ಅವಳನ್ನು ಹಕ್ಕಿ ಸಾಕಿದೆ 'ಶಕುಂತಲ' ಹೆಸರು ಅದನ್ನು ಸೂಚಿಸುತ್ತದೆ). ಆದರೆ ಅವು ಹೇಳಿಕೆಗಳಷ್ಟೆ. ನಿಸರ್ಗ ಒಂದು presence ಆಗಿ (ವರ್ಡ್ಸ್‌ವರ್ತ್‌ನಲ್ಲಿ ಬರುವಂತೆ), active agent ಆಗಿ, ಒಂದು ಶಕ್ತಿ ವಿಶೇಷ' ಕೇವಲಾನುಭವವಾಗಿ, ಶಾಕುಂತಲದಲ್ಲಿ ಬರುವುದಿಲ್ಲ. ಹಾಗೂ ನಮ್ಮ ಕಾವ್ಯಗಳಲ್ಲಿ, ಸಂಸ್ಕೃತಿ ಪರಂಪರೆಯಲ್ಲಿ ಸಾಮಾನ್ಯವಾಗಿ ಕಂಡುಬರುವುದಿಲ್ಲ.

ಪ್ರಶ್ನೆ : ಕಾರಂತರು ಬದುಕಿನ ವೈಪರೀತ್ಯಗಳನ್ನೆಲ್ಲ ನಿಸರ್ಗದಲ್ಲಿ ಸಂಕೇತವಾಗಿ ಸೂಚಿಸಿದ್ದಾರೆಯೆ?

ಉತ್ತರ: ನಿಸರ್ಗ-ಮಾನವ ಸಂಬಂಧ, ಒಡನಾಟ, ಪರಸ್ಪರತೆ, ಮೇಳವಿಸುವಕೆ ಅಥವ ಸ್ಪಂದನವಿದ್ದಲ್ಲಿ ಈ ಪ್ರಶ್ನೆಗೆ ಅವಕಾಶವಿದೆ. ಎಲ್ಲಿ ಒಂದನ್ನೊಂದು ಇಲ್ಲವಾಗಿ ಸುತ್ತೋ, ಎಲ್ಲಿ ನಿಸರ್ಗ ಮಾರಕಶಕ್ತಿವಿಶೇಷವಾಗಿದೆಯೋ, ಅಲ್ಲಿ ನಿಸರ್ಗ ಬದುಕಿನ ವೈಪರೀತ್ಯಗಳನ್ನು, ಸಂಕೇತಿಕತೆಯನ್ನು. ಅಂತಹ ಆತ್ಮೀಯತೆಯನ್ನು ಪಡೆದು ಕೊಳ್ಳಲಾರದು.

ಮರಳಿ ಮಣ್ಣಿಗೆಯಲ್ಲಿ ಕಡಲು ಕನಲಿ ಐತಾಳರ ಮದುವೆಗೆ ನೀರೆರಚುವಲ್ಲಿ, ಆ ವಂಶದ ಮದುವೆಗಳಿಗೆಲ್ಲಾ ತಣ್ಣೀರಿಕ್ಕುವಲ್ಲಿ ಅದೊಂದು ಕೆಡುಕಿನ, ಅಪಶಕುನದ, ಕಾಡಾಟದ 'ಶನಿ'ಯಾಗಿ ಕಂಡು ಬರುತ್ತದೆ. ನಾಗವೇಣಿ-ರಾಮರ ಅನುಬಂಧವನ್ನು ಬೆಸೆಯುವಲ್ಲೂ ಅದೊಂದು ಮೋಹಕ ಮೃತ್ಯುವಾಗಿ ಬಿಡುತ್ತದೆ. ನಿಸರ್ಗ ಬದುಕಿನ ವೈಪರೀತ್ಯಗಳನ್ನು ಸಂಕೇತಿಸುವುದಿಲ್ಲ; ಮೂಲತಃ ಸಾವನ್ನು ಸಂಕೇತಿಸುತ್ತದೆ. ಮಾನವನನ್ನು ಕೊಲ್ಲುತ್ತಾ ಹೋಗುತ್ತದೆ—ಐತಾಳರ ವಂಶ ಬಂಜೆಗೊಳ್ಳುವಂತೆ, ಗೋಪಾಲಯ್ಯನ ವಂಶ ಲಯಗೊಳ್ಳುವಂತೆ (ಮಗ ಓಡಿ ಹೋಗುತ್ತಾನೆ, ಮಗಳು ಪ್ರಸವದಲ್ಲಿ ಸಾಯುತ್ತಾಳೆ), ಕೆಂಚನ ವಂಶ ಕರಗುತ್ತಾ ಕರಿಯನಲ್ಲಿ ಕೊನೆಗಾಣ ಬಹುದಾದ ಶಂಕೆಯಂತೆ, ಹಾಗೂ, ಕರಿಯನಂತೆ ಕುಡಿಯರನ್ನು ಪ್ರತಿನಿಧಿಸುವ ಕರಡಿ ತುಕ್ರನ ಸಂಸಾರವೂ ಬಂಜೆಗೊಳ್ಳುವಂತೆ.

ಪ್ರಶ್ನೆ: ಕುವೆಂಪು ಅವರು ತಮ್ಮ ಕಾದಂಬರಿಗಳಲ್ಲಿ ಕಾಡನ್ನು ನೋಡುವ ಹಾಗೂ ಚಿತ್ರಿಸುವ ರೀತಿಗೂ ಕಾರಂತರು ಕಾಡನ್ನು ನೋಡುವ ಹಾಗೂ ಚಿತ್ರಿಸಿರುವ ರೀತಿಗೂ ಇರುವ ಮುಖ್ಯ ವ್ಯತ್ಯಾಸಗಳನ್ನು ತಿಳಿಯಪಡಿಸುವಿರಾ?

ಉತ್ತರ: ಕುವೆಂಪು ಅವರ ಕಾದಂಬರಿಗಳನ್ನು ತುಂಬ ಹಿಂದೆ ಓದಿದ್ದೆನಾದ್ದರಿಂದ ಅವುಗಳ ಬಗ್ಗೆ ಹೇಳಲಾರೆ. ಆದರೆ ಅವರ ಕಾವ್ಯದ ಕೆಲವೆಡೆಗಳಲ್ಲಿ ಕಾಡು-ನಿಸರ್ಗ ಹೇಗೆ ಚಿತ್ರಿತವಾಗಿದೆ ಎಂಬುದನ್ನು ಸೂಕ್ಷ್ಮವಾಗಿ ಲೇಖನದಲ್ಲಿ ತೋರಿಸಿದ್ದೇನೆ.

ಪ್ರಶ್ನೆ: ಕಾರಂತ, ಕುವೆಂಪು, ತೇಜಸ್ವಿ ಈ ಮೂವರು ನೋಡಿರುವ ನಿಸರ್ಗ ದಲ್ಲಿ, ಏನಾದರೂ ಭಿನ್ನರೀತಿ ಉಂಟೆ? ತಿಳಿಸಿ.

ಉತ್ತರ: ಕಾರಂತರ ಬಗ್ಗೆ ಹೇಳಿದ್ದೇನೆ. ಕುವೆಂಪು ಅವರಲ್ಲಿ ನಿಸರ್ಗ ಭೂಮವಾ ಗುತ್ತಾ, ಅನುಭವದಲ್ಲಿ ಸಾಕ್ಷಾತ್ಕಾರಗೊಳ್ಳುತ್ತಾ ಅಧ್ಯಾತ್ಮದ ಹಂತವನ್ನು, ಸ್ವಲ್ಪ ಪ್ರಜ್ಞಾ ಪೂರ್ವಕವಾಗಿಯೇ, ಕೆಲವೊಮ್ಮೆ ಪ್ರೇರಣೆಯ ಒತ್ತಡದಿಂದಲೂ, ಏರುತ್ತಾ ಬರು ತ್ತದೆ. ಅಂದರೆ ನಿಸರ್ಗದೊಡನೆ ತಾದಾತ್ಮ್ಯತೆ, ಅದರ ಭೂಮಸಾಕ್ಷಾತ್ಕಾರತೆ ಅತ್ಯಂತ ಸಹಜವಾಗಿಯೂ, ಅನಾಯಾಸವಾಗಿಯೂ ಬಂದಾಗಲೂ, ಆ ಅನುಭವದ ಆಧ್ಯಾತ್ಮಿಕ

ಮಜಲು, ಅಂದರೆ conscious ಆದಂತಹ ಆಧ್ಯಾತ್ಮೀಕರಣತೆ ಕೆಲವೊಮ್ಮೆ ಹೇರಿ ದಂತೆ ಕಂಡುಬರುತ್ತದೆ. ಇದನ್ನು ಎತ್ತಿ ತೋರಿಸುವಂತೆ ಆ ಆಧ್ಯಾತ್ಮಿಕ ಆಯಾಮ ಸಂಸ್ಕೃತ ಪದ ಭೂಯಿಷ್ಟವಾಗಿಬಿಡುತ್ತದೆ.

ಆದರೆ ತೇಜಸ್ವಿಯವರಲ್ಲಿ ನಿಸರ್ಗಾನುಭವ, ಅದರ ಬೆರಗು, ಗಾಂಭೀರ್ಯ ಭೂಮತೆ, ವಿರಾಟತೆ ಅತ್ಯಂತ ಆನುಷಂಗಿಕವಾಗಿ, ನಮಗೆ ಗೊತ್ತಿಲ್ಲದೆ, ಅನಾಯಾಸ ವಾಗಿ ಆಗಿಬಿಡುತ್ತದೆ. ತೇಜಸ್ವಿಯವರಲ್ಲಿ ಯಾವ ಸನ್ನಾಹವೂ ಇಲ್ಲ, ಪೂರ್ವ ಪ್ರೇರಣೆಯೂ ಇಲ್ಲ—ಅದೊಂದು ಗಕ್ಕನೆ ಆಗುವ ಅನುಭವ. ಆ ಅನುಭವ ಅಧ್ಯಾತ್ಮ ವನ್ನು ಅರಸುವುದಿಲ್ಲ, ಬಯಸುವುದಿಲ್ಲ. ಅದು ಅದಾಗಿರುವುದರಿಂದಲೇ ಅದು ಪ್ರಬಲವಾದ, ಖಾಸಾ, ತನಗೆ ತಾನೇ ಅಧ್ಯಾತ್ಮ—ಕರ್ವಾಲೋದಲ್ಲಿನ ಮಿಂಚುಳ್ಳಿಯ ಪ್ರಸಂಗದಂತೆ (ಲೇಖನದಲ್ಲಿ ಸೂಕ್ಷ್ಮವಾಗಿ ಕಾಣಿಸಲಾಗಿದೆ). ಕುವೆಂಪು ಅವರಲ್ಲಿ ಭಾಷೆ ಸಂಸ್ಕೃತೀಕರಣಗೊಂಡರೆ, ತೇಜಸ್ವಿಯವರಲ್ಲಿ ಅದು ತದ್ವಿರುದ್ಧವಾಗಿ, ಅಚ್ಚಗನ್ನಡ ದತ್ತ, ಅದರ ವ್ಯಾವಹಾರಿಕ ಸಂಭಾಷಣೆಯತ್ತ, ಗ್ರಾಮ್ಯದತ್ತ, ದೇಶೀಕರಣ ಗೊಳ್ಳುತ್ತಾ, ಅದರ ಅತ್ಯಂತ ಪ್ರಬಲಾನುಭವಗಳಲ್ಲಿ ಅವ್ಯಯೀಕರಣಗೊಳ್ಳುತ್ತದೆ. ಈ ಬಗ್ಗೆ ನನ್ನ 'ಕರವಾಲೋ ಕಥೆ ವಿಮರ್ಶೆ'ಯಲ್ಲಿ (ರುಜುವಾತು–1) ವಿವರವಿದೆ. ಕುವೆಂಪು ಅವರ ಸಂಸ್ಕೃತ, ಅಂತಹ ಕೆಲವು ಸನ್ನಿವೇಶಗಳಲ್ಲಿ, ಪ್ರಜ್ಞಾಪೂರ್ವಕವಾಗಿ ಹೇರಿದ ಸಂದರ್ಭಗಳಲ್ಲಿ, ಅಧ್ಯಾತ್ಮವನ್ನು ಬೋಧಿಸುತ್ತದೆ; ತೇಜಸ್ವಿಯವರ ಅವ್ಯಯ ಅಧ್ಯಾತ್ಮಾನುಭವವನ್ನು ಆಗಿಸುತ್ತದೆ.

ಪ್ರಶ್ನೆ: ನಿಸರ್ಗ (ನಿಮ್ಮ ಅರ್ಥದಲ್ಲಿ ಕಾಡು-ಕಡಲು) ಮಾರಕ ಶಕ್ತಿಯಾಗಿ ಬರುತ್ತದೆ ಎನ್ನುವುದಕ್ಕಿಂತ, ಮನುಷ್ಯನ ಅಗಾಧ ಸಾಮರ್ಥ್ಯಗಳನ್ನು ಹೊರತರುವ ಶಕ್ತಿಯಾಗಿದೆ, ಎನ್ನಬಹುದಲ್ಲವೇ? ಇದಕ್ಕಾಗಿಯೇ ಕಾರಂತರ ಅತಂತ್ರ ನಾಯಕರು ಮತ್ತೆ ನಿಸರ್ಗಕ್ಕೆ ಬರುತ್ತಾರಲ್ಲವೇ?

ಉತ್ತರ: 'ಮನುಷ್ಯನ ಅಗಾಧ ಸಾಮರ್ಥ್ಯ'ವೆಂಬ ಬಾಯಿ ತುಂಬುವ ಮಾತು ಗಳನ್ನಾಡಿದ್ದೀರಿ. 'ಮನುಷ್ಯನ ಅಗಾಧ ಸಾಮರ್ಥ್ಯ' ಗೋಪಾಲಯ್ಯ ಕಾಡಿಗೆ ಬೆಂಕಿ ಇಕ್ಕುವಲ್ಲಿ, ಕತ್ತಿಯಿಂದ ಕಾಡನ್ನು ಸವರುವ, ಬೋನಿಗಿಕ್ಕಿದ ನಿಸ್ಸಹಾಯಕ ಹುಲಿಯನ್ನು ಇನ್ನಿಬ್ಬರು ಗಂಡಸರೊಂದಿಗೆ ಗುಂಡಿಕ್ಕಿ ಕೊಲ್ಲುವಲ್ಲಿ, ಸತ್ತ ಹುಲಿಯ ಮೀಸೆ, ತೊಗಲು ಕೀಳುವಲ್ಲಿ ಇದೆಯೇ? ಕರಿಯ ಮಳೆಗೆ ಸಿಕ್ಕಿಬಿದ್ದ ಆನೆಮರಿಯನ್ನು ಸಾಕಿ ಸವಾರಿ ಮಾಡಿ ಸುಬ್ರಹ್ಮಣ್ಯದ ಸ್ವಾಮಿಗೆ ಪ್ರದಕ್ಷಿಣೆ ಹಾಕಿಸಿದ್ದರಲ್ಲಿದೆಯೇ? ಪದವೀಧರನಾದ ರಾಮ ಮದ್ರಾಸಿನಲ್ಲಿ ಕೆಲಸ ಸಿಗದೆ, ಕಲಾವಿದನಾದ ರಾಮ ಬೊಂಬಾಯಿಯಲ್ಲಿ ಕಸಬು ಕಾಣದೆ, ಮರಳಿಮಣ್ಣಿಗೆ (ಸಾವಿಗೆ?) ಮರಳಿ, ಸರಸೋತಿ-ಪಾರೋತಿಯರ ಗಾಣದೆತ್ತಿನ ಗೆಯ್ಮೆಗೆ ಕೈಹಾಕಿ ಕೂಲಿ ಕೊಡಲಾರದ ದಾರಿದ್ರ್ಯಕ್ಕೆ ಶಪಿಸುತ್ತಾ ತಾನೂ ಮೀನುಗಾರರಂತೆ ಮೀನು ಹಿಡಿದು ದುಡ್ಡು ಮಾಡಬಹುದಲ್ಲಾ ಎಂದೂ

ಚಿಂತಿಸುವ, ಕೊನೆಗೆ ಹೆಂಡತಿಯಾಗಬಹುದಾದವಳ ಮುಖವನ್ನು ನೋಡುವ ಮುಂಚೆ ಅವಳು ಸರಸೋತಿಯಂತೆ ದುಡಿಯಬಹುದಾದ ಸರಸ್ವತಿ ಹೆಸರಿನ ಗಾಣದೆತ್ತೆಂದು ತಿಳಿದಷ್ಟಕ್ಕೆ ಒಪ್ಪಿಗೆಯನ್ನು ತಾಯಿಗೆ ತಿಳಿಸಿ, ಮದುವೆಯಾಗಲು ಹೊರಟ 'ತಾಯಿಗ್ಗಂಡ'—ಇಲ್ಲಿ ಈ ಪದವನ್ನು ಬೈಗುಳವಾಗಿಯಾಗಲೀ ಮೌಲಿಕ ಪದವಾಗಿಯಾಗಲೀ ಉಪಯೋಗಿಸದೆ ಕೇವಲ ವಾಸ್ತವ ನಿರೂಪಣೆಯ (descriptive technical word) ಪಾರಿಭಾಷಿಕ ಪದವಾಗಿ ಬಳಸಿದ್ದೇನೆ—ರಾಮನಲ್ಲಿದೆಯೇ ?

'ಅತಂತ್ರ ನಾಯಕರು' ಎಂದಿದ್ದೀರಿ. ನಿಸರ್ಗಾವಲಂಬನೆಯೇ ಅವರನ್ನು ಅತಂತ್ರರನ್ನಾಗಿಸಿದೆಯಲ್ಲವೇ ? ಎಲ್ಲಿ ಅವರನ್ನು ನಿಸರ್ಗ 'ಸ್ವತಂತ್ರ'ಗೊಳಿಸಿದೆ ? ಕೊಡಲಿ ಕುಡುಗೋಲು ಬಿಟ್ಟರೆ ಗೋಪಾಲಯ್ಯನಿಗೆ, ಕುಡಿಯರಿಗೆ ಉಳಿಗಾಲವಿದೆಯೇ ? ಕಡಲು ಕರೆ('ಕರೆ' 'ಮಳೆಗರೆ')ಯದಿದ್ದರೆ ರಾಮನಿಗೆ ಬೇಸಾಯವುಂಟೆ, ಕಸುಬುಂಟೇ ?

ಪ್ರಶ್ನೆ: ರಾಮನಿಗೆ ಕಡಲಿನ ಅದಮ್ಯವಾದ ಆಕರ್ಷಣೆ ಇರುತ್ತದೆ. ಅದನ್ನು ಮಾನವನಿಗೆ ಸಾವಿನ ಬಗ್ಗೆ ಇರುವ ಆಕರ್ಷಣೆ ಎನ್ನುತ್ತೀರಾ ?

ಉತ್ತರ: ದಯವಿಟ್ಟು ಲೇಖನವನ್ನು ಮತ್ತು ಮೂರನೇ ಪ್ರಶ್ನೆಯ ಉತ್ತರವನ್ನು ನೋಡಿ.

## ಕಾರಂತರ ಕಾದಂಬರಿಗಳಲ್ಲಿ ಗಂಡು-ಹೆಣ್ಣಿನ ಸಂಬಂಧ

ಟಿ. ಪಿ. ಅಶೋಕ

ಪ್ರಶ್ನೆ : ಗಂಡು-ಹೆಣ್ಣಿನ ಸಂಬಂಧಗಳನ್ನು ಚಿತ್ರಿಸುವಲ್ಲಿನ ಕಾರಂತರ ವಿಪರೀತ ಮಾನವೀಯ ದೃಷ್ಟಿ "ಮೈಮನಗಳ ಸುಳಿಯಲ್ಲಿ" ಅಂತಹ ವೇಶ್ಯಾಜೀವನದ ದುರಂತತೆಯನ್ನು ಮೂಡಿಸಬೇಕಾದ ಕಾದಂಬರಿಯನ್ನು ಕೂಡಾ ಆ ಅನುಭವ ತಟ್ಟದಂತೆ ಮಾಡುತ್ತದೆಯೆನಿಸುವುದಿಲ್ಲವೇ ?

ಉತ್ತರ : "ಮೈಮನಗಳ ಸುಳಿಯಲ್ಲಿ" ಕಾದಂಬರಿ ಕೇವಲ ವೇಶ್ಯಾಜೀವನದ ದುರಂತತೆಯನ್ನು ಚಿತ್ರಿಸುವ ಕಾದಂಬರಿ ಎಂದು ಹೇಳಿದರೆ ಆ ಕೃತಿಗೆ ಅಪಚಾರವಾಗುತ್ತದೆ. ಕಾದಂಬರಿ ವೇಶ್ಯಾಜೀವನಕ್ಕೆ ಸಂಬಂಧಿಸಿದ್ದೇ; ಆ ಜೀವನದ ದುರಂತತೆಯನ್ನೂ ದಾಖಲಿಸುವಂಥದ್ದೇ. ಆದರೆ ಕಾದಂಬರಿಯನ್ನು ಸೂಕ್ಷ್ಮವಾಗಿ ವಿಶ್ಲೇಶಿಸಿದಾಗ ಅದಕ್ಕೆ ಇನ್ನೂ ಹಲವು ಮಗ್ಗುಲುಗಳಿರುವುದನ್ನು ಗಮನಿಸಬಹುದು. "ಕೇವಲ ಮನುಷ್ಯರು"ಗೆ ಮುನ್ನುಡಿ ಬರೆಯುತ್ತ ಕಾರಂತರೇ ಈ ವಿಷಯವನ್ನು ಸ್ಪಷ್ಟಪಡಿಸಿದ್ದಾರೆ : "ನನ್ನ ಹಿಂದಣ ಕಾದಂಬರಿ "ಮೈಮನಗಳ ಸುಳಿಯಲ್ಲಿ" ಲೈಂಗಿಕ ಜೀವನದ ನಾಲ್ಕು ಮುಖಗಳನ್ನು ತೋರಿಸುವ ಸಲುವಾಗಿ ಬರೆದುದು. ಅದನ್ನೇ ಹಲವರು ಅದು ಮಂಜುಳೆಯೆಂಬ ಸೂಳೆಯ ಬದುಕು ಎಂಬ ಅನುಕಂಪವನ್ನು ತೋರಿ, ಮುಖ್ಯ ಸಮಸ್ಯೆಯನ್ನೇ ಮರೆತವರಂತೆ ನನಗೆ ಮೆಚ್ಚಿಕೆಯ ಪತ್ರ ಬರೆದರು. ಸೂಳೆಯ ಸಲುವಾಗಿ ಅವರು ಕೊಟ್ಟ ರಿಯಾಯಿತಿ ಅವಳ ಬಳಿಗೆ ಬಂದವರ ಪಾಲಿಗೆ ಅವರು ಕೊಟ್ಟರೋ ತಿಳಿಯೆ".

"ಮೈ ಮನಗಳ ಸುಳಿಯಲ್ಲಿ" ಗಂಡು-ಹೆಣ್ಣಿನ ಸಂಬಂಧವನ್ನು conceptual ಆಗಿ ಅರ್ಥ ಮಾಡಿಕೊಳ್ಳುವ ಪ್ರಯತ್ನವಿದೆ. ಪೂರ್ಣತೆ-ಅಪೂರ್ಣತೆಗಳ ಡಯಲೆಕ್ಟಿಕ್‌ನಲ್ಲಿ ಗಂಡು-ಹೆಣ್ಣಿನ ಸಂಬಂಧದ ಮೂಲವನ್ನು ತಳಮುಟ್ಟ ಶೋಧಿಸಿಬಿಡುವ ಸಾಹಸವನ್ನು ಇಲ್ಲಿ ಕಾಣುತ್ತೇವೆ. "ಈ ಕಾದಂಬರಿಗೊಂದು ಪ್ರಸ್ತಾವನೆ ಅವಶ್ಯವೇ ಎಂದು ಕೇಳಿದರೆ, ಇಡೀ ಬಾಳಿನ ಒಂದು ನಿಗೂಢವಾದ ಸಮಸ್ಯೆಗೆ ಪ್ರಸ್ತಾವನೆ ಬರೆಯುವ ಪ್ರಯತ್ನ ಅನ್ನಬೇಕಾಗಿದೆ" ಎಂದು ಮುನ್ನುಡಿಯಲ್ಲಿ ಬರೆದುಕೊಳ್ಳುವ ಕಾರಂತರೇ ವಸ್ತುವಿನ ಆಳ, ವಿಸ್ತಾರಗಳನ್ನು ಸೂಕ್ಷ್ಮವಾಗಿ ಧ್ವನಿಸುತ್ತಾರೆ. ಈ ಕಾದಂಬರಿಯ ಕತೆ "ಒಬ್ಬಳು ವಾರಾಂಗನೆಯ ಸುತ್ತುವರಿಯುವಂಥದು" ಎಂದು ಕಾರಂತರು ಮುನ್ನುಡಿಯಲ್ಲಿ ತಿಳಿಸುತ್ತಾರೆ. ಆದರೆ, "ಕಾರಂತರ ಮಾನವೀಯ ದೃಷ್ಟಿ

ಆಕೆ ವೇಶ್ಯೆಯಾಗಿರುವ ಮೊದಲು ಒಬ್ಬ ಮನುಷ್ಯ ಪ್ರಾಣಿಯಾಗಿರುತ್ತಾಳೆ ಎನ್ನು ವುದನ್ನು ತೋರಿಸುತ್ತದೆ...ಕಾದಂಬರಿ ಒಬ್ಬ ಅಸಾಧಾರಣ ವೇಶ್ಯೆಯನ್ನು ಸಹಾನು ಭೂತಿಯಿಂದ ಕಂಡು ಬರೆದ ಚಿತ್ರವಾಗಿದೆ ಎಂದು ಹೇಳಿದರೆ ಕಾದಂಬರಿಯನ್ನು ಕುರಿತು ಹೆಚ್ಚು ಹೇಳಿದಂತಾಗುವುದಿಲ್ಲ ಎಂಬ ಪ್ರೊ. ವಿ. ಎಂ. ಇನಾಂದಾರ್ (ಶಿವರಾಮಕಾರಂತ: ಬದುಕು-ಬರಹ) ಅವರ ಮಾತುಗಳನ್ನು ನಾನು ಅನುಮೋದಿಸು ತ್ತೇನೆ. ಇದೇ ರೀತಿಯಲ್ಲಿ (ಸಾಕ್ಷಿ 33ರಲ್ಲಿ) ಡಿ. ಕೆ. ಸೀತಾರಾಮಶಾಸ್ತ್ರಿಗಳು "ಮೈ ಮನ ಗಳ ಸುಳಿಯಲ್ಲಿ" ಕಾದಂಬರಿ ಕುರಿತ ಲೇಖನದಲ್ಲಿ ಮಾಡಿರುವ ಕೆಳಗಿನ ಹೇಳಿಕೆಗಳಿಗೂ ನನ್ನ ಸಮರ್ಥನೆ ಇದೆ : ಈ ಕಾದಂಬರಿ, "ಗರತಿಯಲ್ಲದವಳ ಆತ್ಮ ಕಥನವಾದರೂ ದಾಂಪತ್ಯದಲ್ಲಿನ ಸಾರ್ಥಕ್ಯ, ಸಾಫಲ್ಯಗಳನ್ನು ವಿವೇಚಿಸಿರುವ, ತೃಪ್ತಜೀವನದ ಹಾದಿ ಯನ್ನು ಅರಿಯುವ ಪ್ರಯತ್ನವೇ ಈ ಕಾದಂಬರಿಯಾಗಿರುವುದು ಇಲ್ಲಿನ ವಿಶೇಷ ವಾಗಿದೆ", "ಮನುಷ್ಯ ಜೀವನದ ಪ್ರಬಲ ಶಕ್ತಿಯಾದ ಲೈಂಗಿಕ ಸಂಬಂಧದ, ಹೆಣ್ಣು-ಗಂಡುಗಳ ಸಂಬಂಧದ ಎಲ್ಲ ಮುಖಗಳನ್ನು ಪರಿಶೀಲಿಸುವುದರ ಮೂಲಕ ಬಾಳಿನ ಅರ್ಥ, ಗುರಿಗಳನ್ನು ಗುರುತಿಸಿ 'ನಮ್ಮ ಮೌಲ್ಯ ಪ್ರಜ್ಞೆಯನ್ನು ಹಿಗ್ಗಿಸುವುದರಿಂದ ಈ ಕಾದಂಬರಿ ಮಹತ್ತ್ವದ್ದಾಗುತ್ತದೆ."

ಹಾಗೆ ನೋಡಿದರೆ ವೇಶ್ಯಾ ಜೀವನದ ಚಿತ್ರಣ ಕಾರಂತರ ಕಾದಂಬರಿಗಳಲ್ಲಿ ಹೊಸದೇನಲ್ಲ. ಅವರ ಮೊದಲ ಮುಖ್ಯ ಕಾದಂಬರಿ "ಕನ್ಯಾಬಲಿ" ಸುಸಂಸ್ಕೃತ ತರುಣಿಯೊಬ್ಬಳು ವೇಶ್ಯೆಯಾಗಬೇಕಾಗಿ ಬಂದ ಅಸಹಾಯಕತೆ, ಅನಿವಾರ್ಯತೆ ಗಳನ್ನು ಚಿತ್ರಿಸುವಂಥದೇ ಆಗಿದೆ. "ಮೈಮನಗಳ ಸುಳಿಯಲ್ಲಿ"ಗೆ ಮುನ್ನುಡಿ ಬರೆಯುತ್ತ ಕಾರಂತರು ಹೇಳುತ್ತಾರೆ : "ಹಿಂದೆ, 'ಸೂಳೆಯ ಸಂಸಾರ' ಎಂಬ ಕಾದಂಬರಿಯನ್ನು ಒಬ್ಬ ಸಮಾಜ ಸುಧಾರಕನ ದೃಷ್ಟಿಯಿಂದ ಬರೆದುದುಂಟು. ಅದರ ಎರಡನೆಯ ಆವೃತ್ತಿಗೆ 'ಕನ್ಯಾಬಲಿ'ಯೆಂದು ಹೆಸರಿಸಿದ್ದುಂಟು, ಪ್ರಕಾಶಕರು ಮೊದಲು ಕೊಟ್ಟ ಹೆಸರಿಗೆ ಅಂಜಿದರೆಂದು." "ಮನುಷ್ಯ ಬರಿಯ ಪಶುವಲ್ಲವಷ್ಟೆ ! ಆತ ಮನೋ ದೇಹಿ. ಈ ಎರಡರ ಸಂಯೋಗ ಯಾವ ಯಾವ ರೀತಿಗಳಲ್ಲೆಲ್ಲ ಪ್ರಕಟಗೊಳ್ಳಬಲ್ಲದು ?" ಈ ಪ್ರಶ್ನೆ ಕಾರಂತರನ್ನು ಯಾವತ್ತೂ ಕಾಡಿದೆ. "ಮೈಮನಗಳ ಸುಳಿಯಲ್ಲಿ" ಈ ಕುರಿತ ಪ್ರಬುದ್ಧ ಶೋಧನೆಯಿದೆ.

ಈ ಕಾದಂಬರಿಯ ಪ್ರಧಾನ ಅಂಶವಾದ ಮಂಜುಳೆಯ ವ್ಯಕ್ತಿವಿಶಿಷ್ಟ ಸಂವೇದನೆ ಗಳನ್ನೂ, ಅವಳನ್ನೂ ಮೀರಿದ ಲೈಂಗಿಕ ಸಂಬಂಧಗಳ ಒಂದು ಸಾಂಸ್ಕೃತಿಕ ಇತಿಹಾಸ ಎನ್ನಬಹುದಾದಷ್ಟು ವಿಸ್ತಾರವಾದ ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಹಿಡಿಯುವ ಕಾರಂತರು ಕಾದಂಬರಿಗೆ ಮನೋವೈಜ್ಞಾನಿಕ ಆಳಗಳನ್ನೂ, ಮಾನವಶಾಸ್ತ್ರೀಯ ವಿಸ್ತಾರ ಗಳನ್ನೂ ಏಕಕಾಲದಲ್ಲಿ ಸಾಧ್ಯ ಮಾಡುತ್ತಿದ್ದಾರೆ ಎನಿಸುತ್ತದೆ. ಮಂಜುಳೆಯ ಬದುಕು ಮತ್ತು ಮನುಷ್ಯನ ಲೈಂಗಿಕ ಬದುಕು ಹೀಗೆ ಯಾವತ್ತೂ ಮುಖಾಮುಖಿ

ಯಾಗುತ್ತ ಒಂದರ ಸತ್ಯ ಇನ್ನೊಂದರಲ್ಲಿ ಪ್ರತಿಫಲಿತವಾಗುತ್ತ ಸಂಕೀರ್ಣವಾಗುತ್ತದೆ ; "ಮಂಜುಳೆಯ ಕುಲದ ಇತಿಹಾಸ ಹತ್ತೆಂಟು ತಲೆಮಾರುಗಳದ್ದಾದರೂ ಇರಬೇಕು. ಅವಳ ಮೊದಲನೆಯ ಹಿರಿಯರು ವೇಶ್ಯಾವೃತ್ತಿಗೆ ಯಾವುದೋ ಅನಿವಾರ್ಯದಿಂದ ತೇಲಿಬಂದವರಿರಬೇಕು. ಶೃಂಗಾರದ್ದೊಂದು ಅಮಲು ಇದಕ್ಕೆ ಕಾರಣವಾಗಿದ್ದಿರಲೂಬಹುದು. ಅಂತೂ ಅವರದ್ದು ಅದಕ್ಕೆ ತೆರೆದ ಜೀವನ. ಬಹಿರಂಗ ಜೀವನ. ಅಂಥ ಬದುಕಿನಲ್ಲಿ ಸುಪ್ತ ಆಸೆಗಳು, ಬಯಕೆ-ಬಿನ್ನಾಣಗಳು, ವಿರಕ್ತಿ-ಅನುರಕ್ತಿಗಳು ಇದ್ದಿರಬಹುದಾದರೂ ಇದನ್ನು ತಿಳಿದವರೆಷ್ಟು ಮಂದಿ? ತಿಳಿಯಬಲ್ಲವರೆಷ್ಟು ಮಂದಿ?"

ಕಾದಂಬರಿಯ ಪಾತ್ರಗಳಾದ ಮಂಜುಳೆ, ಶಾರಿ, ಚಂದ್ರಿ ಮುಂತಾದವರ ಬಗ್ಗೆ ಕಾದಂಬರಿಯಲ್ಲಿ ದಾಖಲಾಗಿರುವ ಕಾರಂತರ ಧೋರಣೆಗಳೂ ಮುಖ್ಯ. ವೇಶ್ಯೆ ಶಾರಿ ತನ್ನ ಮಗಳನ್ನು ಒಂದು ಆರ್ಥಿಕ ಸಂಪನ್ಮೂಲ ಎಂದು ತಿಳಿಯಬೇಕಾದ ಅನಿವಾರ್ಯತೆಯನ್ನೂ, ಅದು ಅನಿವಾರ್ಯವೆಂಬ ಭಾವನೆಯನ್ನು ಯಾವತ್ತೂ ಪೋಷಿಸಿಕೊಂಡು ಬಂದ ನಮ್ಮ ಸಂಸ್ಕೃತಿ, ಶಾರಿಯ ಮನಸ್ಥಿತಿಯನ್ನು ರೂಪಿಸಿದ ಬಗೆಯನ್ನೂ ಕಾರಂತರು ಸಹಾನುಭೂತಿಯಿಂದ ಅರ್ಥ ಮಾಡಿಕೊಳ್ಳುತ್ತಾರಾದರೂ ಮಾನಸಿಕವಾಗಿ ಅದಕ್ಕೆ ಒಗ್ಗಿಕೊಳ್ಳದ, ಆ ಆವರಣವನ್ನು ಮೀರಿ-ಅಂದರೆ ಮಾಸ್ತರಿಣಿಕೆ ಇಲ್ಲವೇ ಮತ್ಯಾವುದಾದರೂ ನೌಕರಿಯಲ್ಲಿ ತನ್ನ ಜೀವನ ನಿರ್ವಹಣೆಯನ್ನು ಕಂಡುಕೊಳ್ಳುವ ಪ್ರಯತ್ನದಲ್ಲಿ—ಹೊಸ ಜೀವನದ ಹಂಬಲ ಹೊತ್ತ ಚಂದ್ರಿಯ ಕನಸುಗಳನ್ನು ಎತ್ತಿ ಹಿಡಿಯುತ್ತಾರೆ. ಮಂಜುಳೆ ವೇಶ್ಯಾಜೀವನ ಕ್ರಮವನ್ನೇ ಅರ್ಥಪೂರ್ಣ ಬದುಕನ್ನಾಗಿ ಕಂಡುಕೊಳ್ಳಲು ಬಯಸಿದವಳು. ಭವಾನಿ, ಶಾರಿ, ಕಪಿಲೆ ಅದರಲ್ಲಿ ಜೀವನ ನಿರ್ವಹಣೆ ಮಾಡುವವರು. ಚಂದ್ರಿ ಈ ಜೀವನ ಕ್ರಮವನ್ನೇ ದಾಟಿ ಮುಂದೆ ಹೋಗಲು ಪ್ರಯತ್ನಿಸುವವಳು. ಆದ್ದರಿಂದಲೇ ಮಂಜುಳೆಯ ಜೀವನವನ್ನು ಕಾರಂತರು ತುಂಬು ಗೌರವದಿಂದ ಕಂಡರೂ, ಶಾರಿಯ ಅಂತರಂಗದಲ್ಲಿ "ಮಂಜುಳೆಯ ಪ್ರತಿಮೂರ್ತಿಯಾಗಬಹುದು ಚಂದ್ರಿ" ಎಂಬ ಭಾವನೆಯಿದ್ದರೂ, ಚಂದ್ರಿಯ ಸ್ವತಂತ್ರ ಬದುಕಿನ ಕಲ್ಪನೆಗಳು ಕಾರಂತರಿಗೆ ಹೆಚ್ಚು ಅರ್ಥಪೂರ್ಣವಾಗಿ ಕಾಣುತ್ತವೆ. ಜೀವನ ನಿರ್ವಹಣೆಗಾಗಿ ಮೈಮನಗಳನ್ನು ಮಾರುವ ಕಸುಬನ್ನು ಚಂದ್ರಿ ಪ್ರಜ್ಞಾಪೂರ್ವಕವಾಗಿಯೇ ತಿರಸ್ಕರಿಸುತ್ತಾಳೆ : "ಅಂಥ ಪ್ರಸಂಗ ಬಂದರೆ ನಾನು ಊರು ಬಿಟ್ಟು ಓಡಿಯೇನು. ಬಾವಿಗೆ ಹಾರಿಕೊಂಡೇನು. ಯಾರಾರ ಎಂಜಲು ತಿಂದು ಬದುಕುವ ಬಾಳು ನನಗೆ ಬೇಕಿಲ್ಲ." (ಈ ವಿಷಯ ಕುರಿತ ವಿವರವಾದ ನಿರೂಪಣೆಗೆ ನನ್ನ "ಕಾರಂತರ ಕಾದಂಬರಿಗಳಲ್ಲಿ ಗಂಡು-ಹೆಣ್ಣು", ಪುಸ್ತಕವನ್ನು ನೋಡಿ.)

ಪ್ರಶ್ನೆ : "ಚೋಮನದುಡಿ"ಯಲ್ಲಿ ಲೈಂಗಿಕ ಶೋಷಣೆಗೊಳಗಾದ ಬೆಳ್ಳಿ ತಾನೇ ಗುಪ್ತ ಲೈಂಗಿಕ ಸಂಬಂಧದಲ್ಲಿ ತೊಡಗಿದಾಗ ಚೋಮನಲ್ಲಾಗುವ ಕೋಲಾ ಹಲದಲ್ಲಿ ಕಾರಂತರು ತೋರುವ ಲೈಂಗಿಕ ಸಂಬಂಧ ಮತ್ತು ಪುತ್ರಿ ವಾತ್ಸಲ್ಯದ ನಡುವಿನ ಸಂದಿಗ್ಧದ ಬಗ್ಗೆ ವಿವರಿಸುವಿರಾ?

ಉತ್ತರ : ಲೈಂಗಿಕ ಸಂಬಂಧಗಳಿಗೆ ಸಂಬಂಧಪಟ್ಟಂತೆ "ಚೋಮನದುಡಿ" ಕಾದಂಬರಿಯಲ್ಲಿ ಕಾರಂತರು ಸಂಪ್ರದಾಯ ರೂಪಿಸಿದ ನೈತಿಕ ಪ್ರಜ್ಞೆ ಮತ್ತು ಮೂಲ ಪ್ರವೃತ್ತಿಗಳ ಯಾವತ್ತೂ ಸೆಳೆತಗಳಿಗಿರುವ ಘರ್ಷಣೆಯನ್ನು ಅದರೆಲ್ಲ ಸಂಕೀರ್ಣತೆಯಲ್ಲಿ ಚಿತ್ರಿಸುತ್ತಾರೆ. ಚೋಮ ಮತ್ತು ಅವನ ಮಕ್ಕಳಲ್ಲಿ ಬೆಳೆಯುವ ಧೋರಣಾತ್ಮಕ ವ್ಯತ್ಯಾಸಗಳು, ಎರಡು ಪೀಳಿಗೆಗಳ ನಡುವೆ ಸಹಜವಾಗಿಯೇ ಬೆಳೆಯುವ ವ್ಯತ್ಯಾಸಗಳಿಗೂ ಸಂಕೇತವಾಗುತ್ತವೆ.

ಮಕ್ಕಳ ಮದುವೆಯ ಬಗ್ಗೆ ಚೋಮನ ಯೋಚನೆಗಳು ಯಾವುದೇ ತಂದೆ ತನ್ನ ಮಕ್ಕಳ ದಾಂಪತ್ಯ ಜೀವನದ ಬಗ್ಗೆ ತೆಗೆದುಕೊಳ್ಳುವ ನಿಲುವುಗಳೇ ಆಗಿವೆ. ಚೋಮ, ಬೆಳ್ಳಿಯ ಮದುವೆಯ ಬಗ್ಗೆ ತುಂಬ ಕಾತುರನಾಗಿದ್ದಾನೆ. ಆದರೆ ಅಳಿಯನೊಂದಿಗೆ ಮಗಳನ್ನು ಕಳಿಸಿಬಿಡಬೇಕಾದ ಅಪ್ರಿಯ, ಆದರೆ ಅನಿವಾರ್ಯ ವಾಸ್ತವವನ್ನು ಮುಂದೂಡುತ್ತಿದ್ದಾನೆ ಅಷ್ಟೆ. ಕಾದಂಬರಿಯ ಕೊನೆಯಲ್ಲಿ ಬೆಳ್ಳಿ-ಮನ್ವೇಲರನ್ನು ಒಟ್ಟಿಗೇ ಕಂಡಾಗ ಚೋಮ ಸಿಟ್ಟಿನ ಪರಾಕಾಷ್ಠೆಯನ್ನು ಮುಟ್ಟುತ್ತಾನೆ: ನೋಡಿಯೇ ಮೈ ಕಂಪಿಸಿತು !", ಸಾಯುವ ಮುನ್ನ, 'ನನ್ನ ಬೆಳ್ಳಿ ನನ್ನನ್ನು ವಂಚಿಸಿಬಿಟ್ಟಳೇ' ಎಂದುಕೊಂಡ. ಕೊನೆಗೆ ಅವಳ ತಾರುಣ್ಯ, ತಾನವಳ ಮದುವೆಯನ್ನು ಮುಂದುವರಿಸಿದ ತಪ್ಪು, ತನಗಾಗಿ ಅವಳು ಕಾಫಿ ತೋಟಕ್ಕೆ ಹೋದುದು, ತನ್ನ ಋಣವನ್ನಷ್ಟು ಬೇಗನೆ ತೀರಿಸಿ ಬಂದುದು—ಎಲ್ಲ ಸ್ಮರಣೆಗಳೂ ಬಂದವು. "ಪಾಪ !" ಅಂದ. 'ನಾನು ಅವಳಂತೆ ಹೆಣ್ಣಾಗಿದ್ದರೆ ನನ್ನ ಪಾಡೇನು ಎಂದು ಅನಿಸಿತು. ಆದರೂ ಗಂಡು ಹೆಣ್ಣಿನ ಸಂಬಂಧಗಳು, ವಿವಾಹದ ಕಲ್ಪನೆಗಳು ಪರಂಪರಾಗತವಾಗಿ ತನ್ನಲ್ಲಿ ರೂಢಿಸಿದ್ದ ನೈತಿಕ ಎನ್ನಬಹುದಾದ ಪ್ರಜ್ಞೆಗೆ ಬೆಳ್ಳಿಯ ಕೃತ್ಯದ ಆಘಾತದ ತೀವ್ರತೆಯನ್ನು ವೃದ್ಧನಾದ ಚೋಮ ತಡೆದುಕೊಳ್ಳಲಾರ. ಕಾದಂಬರಿಯ ಕೊನೆಯಲ್ಲಿ Climax ಎನ್ನಬಹುದಾದ ಸನ್ನಿವೇಶದಲ್ಲಿ ಚೋಮನ ಉನ್ಮಾದ, ವಿಕಟತೆ, ಕೊನೆಗೆ ಸಾವಿಗೆ ಬೆಳ್ಳಿಯ ಕೃತ್ಯದ ಕಾಣಿಕೆಯನ್ನು ನಾವು ಮರೆಯಲಾಗದಿದ್ದರೂ ಕಾರಂತರು ಯಾರನ್ನೂ ಅಪರಾಧಿಗಳನ್ನಾಗಿ ನೋಡುವುದಿಲ್ಲ. ಕಾರಂತರ ಪಾಲಿಗೆ ಇದೊಂದು ದುರಂತದ ಸನ್ನಿವೇಶವಾಗುತ್ತದೆಯೇ ಹೊರತು ಅಪರಾಧದ ಸನ್ನಿವೇಶವಾಗುವುದಿಲ್ಲ. ಹಾಗಾಗಿ ಇಲ್ಲಿ ಕಾಣುವುದು "ಲೈಂಗಿಕ ಸಂಬಂಧ ಮತ್ತು ಪುತ್ರಿ ವಾತ್ಸಲ್ಯದ ನಡುವಿನ ಸಂದಿಗ್ಧವಲ್ಲ". ಬದಲಾಗಿ, ವೈಯಕ್ತಿಕವಾದ ಕರ್ತವ್ಯಲೋಪ ಪ್ರಜ್ಞೆಗೂ ಪರಂಪರಾಗತವಾದನೈತಿಕ ಪ್ರಜ್ಞೆಗೂ ಸಂಭವಿಸುವ ಸಂಕೀರ್ಣ ತಿಕ್ಕಾಟ. ಹಿಂದೆ ಲೈಂಗಿಕ ಶೋಷಣೆಗೆ

ಒಳಗಾಗಿದ್ದ ಬೆಳ್ಳಿ ತಾನೇ ಗುಪ್ತ ಲೈಂಗಿಕ ಸಂಬಂಧದಲ್ಲಿ ತೊಡಗುವ ಹಿಂದಿನ ಪ್ರೇರಣೆಗಳನ್ನೂ ಇದೇ ರೀತಿ ಅರ್ಥಮಾಡಿಕೊಳ್ಳಬೇಕು : "ಅವಳ ವಿಲಾಸ ಜೀವನದ ಆಸೆಯು ತಿರುಗಿ ಮೊಳೆಯಿತು. ಒಮ್ಮೊಮ್ಮೆ ತನ್ನ ಮನಸ್ಸಿನಲ್ಲಿ ತಾನು ಮನ್ವೇಲನ ಮಡದಿಯಾಗುವೆನೆಂದು ಚಿತ್ರಿಸಿಕೊಂಡಳು. ಗುರುವಸು ಮಾರಿಯ ಪತಿಯಾಗ ಲಿಲ್ಲವೆ?"

ಪ್ರಶ್ನೆ : "ಧರ್ಮರಾಯನ ಸಂಸಾರ"ದ ಸರಸ್ವತಿ ಗಂಡ ಸತ್ತ ನಂತರ ನಾಗಪ್ಪಯ್ಯನ ಜೊತೆ ಸಂಬಂಧ ಇಟ್ಟುಕೊಳ್ಳುವುದರಿಂದ ಅದು ಹೇಗೆ ವಿಚ್ಛೇದನ ಆಗುತ್ತದೆ" ವಿಚ್ಛೇದನಕ್ಕೆ ನಿಮ್ಮ ಸ್ಪಷ್ಟ ಅಭಿಪ್ರಾಯ ಏನು ?

ಉತ್ತರ : "ವಿಚ್ಛೇದನ" ಪದವನ್ನು "ಬೇರ್ಪಡುವುದು", "ಬಿಡಿಸಿಕೊಳ್ಳು ವುದು", "ಮುಕ್ತವಾಗುವುದು"–ಈ ಸಾಮಾನ್ಯಾರ್ಥದಲ್ಲಿ ಬಳಸಿಕೊಂಡಿದ್ದೇನೆ ಹಾಗಾಗಿ ಆ ಪದವನ್ನು ದಯವಿಟ್ಟು ಕಾನೂನಿನ ಪರಿಭಾಷೆಯ ನಿರ್ದಿಷ್ಟಾರ್ಥವಾಗಿ ಯಷ್ಟೇ ತೆಗೆದುಕೊಳ್ಳಬಾರದು. ಯಾವುದೇ ಬಗೆಯ ಗಂಡು-ಹೆಣ್ಣಿನ ಸಂಬಂಧವನ್ನು ಆ ಸಂಬಂಧವನ್ನು ನಿರ್ದೇಶಿಸುವ ಮೌಲ್ಯಗಳ ಹಿನ್ನಲೆಯಲ್ಲೇ ಅರ್ಥ ಮಾಡಿಕೊಳ್ಳ ಬೇಕು. ಧರ್ಮರಾಯನ ಸಂಸಾರದ ಸರಸ್ವತಿಯ ಪ್ರಸ್ತಾಪ ಬಂದಿರುವುದರಿಂದ ಆಕೆಯ ಉದಾಹರಣೆಯನ್ನು ಮುಂದಿಟ್ಟುಕೊಂಡೇ ವಿವರಿಸಲು ಪ್ರಯತ್ನಿಸುತ್ತೇನೆ.

ಮೈನೆರೆಯುವ ಮುನ್ನವೇ ಮಹಾಬಲಯ್ಯನೊಂದಿಗೆ ಪ್ರಥಮ ಸಮಾಗಮದ ರುಚಿ ಉಂಡ ಸರಸ್ವತಿ ಮಹಾಬಲಯ್ಯನೊಂದಿಗೆ ಮದುವೆಯಾದಾಗ ಕೆಲವೊಂದು ಮೌಲ್ಯಗಳಿಗೂ ತನ್ನನ್ನು ಒಪ್ಪಿಸಿಕೊಂಡಿದ್ದವಳೇ. "ಅವಳಿಗೆ ಒನಪು ವೈಯ್ಯಾರ ತಿಳಿಯದು. ಶೃಂಗಾರವೇನು? ದೇಹದ ಹಂಬಲಗಳೇನು—ಎಂಬುದು ತಿಳಿಯ ದಾದರೂ ಗಂಡಸು ಎಂದರೆ ಲಜ್ಜೆಯಿಂದ ಮುದುಡುವಂಥ ಸಂಪ್ರದಾಯದಲ್ಲಿ ಬೆಳೆ ದವಳು." ಸರಸ್ವತಿಯು ಮಹಾಬಲಯ್ಯನಿಗೆ "ಹಕ್ಕಿನ ಹೆಂಡತಿ". ಮಹಾಬಲಯ್ಯನ ಈ ಹಕ್ಕನ್ನು ತನ್ನ ಪರಂಪರೆ ನೀಡಿದ ಬಳುವಳಿಯೋ ಎಂಬಂತೆ ಒಪ್ಪಿಕೊಂಡಿದ್ದ ಸರಸ್ವತಿ, ಪ್ರಸ್ತದ ಮರುದಿನ ತಾಯಿ ಗಾಡಿ ಕಟ್ಟಿಸಿ ಊರಿಗೆ ಮರಳುವ ಮುನ್ನ ಸರಸ್ವತಿ ಹೇಳುವ ಮಾತುಗಳು ಆಕೆಯ ಸ್ವ-ಅರಿವಿನ, ತನ್ನ ಸ್ಥಿತಿಯನ್ನು ಕುರಿತ ಪ್ರಜ್ಞೆಯ, ಅದಕ್ಕೆ ಆಕೆಯ ಪ್ರತಿಕ್ರಿಯೆಯ ಪ್ರತೀಕಗಳೇ ಆಗುತ್ತವೆ: "ಅಮ್ಮ ನಾನು ಬಂದದ್ದು ಒಂದು ನರಕಕ್ಕೆ. ನರಕಕ್ಕೆ ಹೋದವರು ಹಿಂದಕ್ಕೆ ಬರುವುದಿಲ್ಲ. ಇಲ್ಲಿಗೆ ನನ್ನನ್ನು ಕಳಿಸಿದವರು ನೀವು. ಇವತ್ತಿಗೆ ನನ್ನ–ನಿಮ್ಮ ಋಣ ಮುಗಿಯಿತು. ಸರಸ್ವತಿ ಸತ್ತು ಹೋದಳು—ಎಂದು ಇನ್ನು ತಿಳಿಯಿರಿ ಎಂದಂದು ಧಾವಿಸಿ ತಾನಿರುವ ಕೋಣೆಗೆ ಬಂದು ಕದವಿಕ್ಕಿಕೊಂಡಳು." ತನ್ನ ಸ್ಥಿತಿಯನ್ನು ಹೀಗೆ ಅನಿವಾರ್ಯವೆಂಬಂತೆ ಒಪ್ಪಿಕೊಳ್ಳುವ ಸರಸ್ವತಿ ಕ್ರಮೇಣ ಬೆಳೆಯುತ್ತ, ಗಟ್ಟಿಯಾಗುತ್ತ, ಪಕ್ವವಾಗುತ್ತ ಇದೇ ತಾಯಿಯೊಡನೆ, ನಾಗಪ್ಪಯ್ಯನನ್ನು ಕುರಿತು, "ಅಮ್ಮ, ಅವನ ಹತ್ತಿರ

ನಾನೊಂದು ದಿವಸ 'ನನಗೆ ನೀನು, ನಿನಗೆ ನಾನು ರಕ್ಷೆ ಎಂದಿದ್ದೆ'. ಎಂಬ ತನ್ನ ಮಾತನ್ನು ನಡೆಯಿಸುವವಳೇ ಎನ್ನುವಷ್ಟು ಇತ್ಯಾತ್ಮಕವಾಗಿ ಬೆಳೆಯುತ್ತಾಳೆ; ಬದಲಾಗುತ್ತಾಳೆ. ಆ ಮೂಲಕ ತನ್ನ ಸ್ಥಿತಿಯನ್ನು ಮೀರುತ್ತಾಳೆ; ಜೀವನ ಪರವಾಗುತ್ತಾಳೆ. ಪ್ರಸ್ತುದ ರಾತ್ರಿ ಕಳೆದ ಬಳಿಕ : "ಸಿಡಿಲು ಬಡಿದಂತಾಯಿತು–ಆಕೆಗೆ. ಅವರು ಆಡಿದ ಮೊದಲಿಕೆ, ವಿಧಿಸಿದ ಶಿಕ್ಷೆಯ ಮಾತುಗಳನ್ನು ಕೇಳಿ ತನ್ನ ಭವಿಷ್ಯವನ್ನು ಕುರಿತ್ತು ಭಯ ಹುಟ್ಟಿಕೊಂಡಿತು. ಅವರ ಕಾಲಿಗೆ ಬಿದ್ದು, ಪಾದಗಳನ್ನು ಹಿಡಿದುಕೊಂಡು" 'ನನ್ನದೇನು ತಪ್ಪಿದರೂ ಸುಧಾರಿಸಿಕೊಂಡು ಹೋಗಿ, ಎಂದು ನಮ್ರಳಾಗಿ ಬೇಡಿದಳು'. ಇದೇ ಸರಸ್ವತಿ ವಿಚಿತ್ರವೆನಿಸುವ ರೀತಿಯಲ್ಲಿ ಗಟ್ಟಿಯಾಗುವ ಪ್ರಕ್ರಿಯೆ ಕುತೂಹಲ ಕಾರಿಯಾಗಿದೆ, ಬೆರಗು ಹುಟ್ಟಿಸುವಂತಿದೆ : "ಎಳೆತನದಲ್ಲಿ ಅದೇ ಸರಸ್ವತಿಯು ತನ್ನ ತಾಯಿ ಮಹಾಲಕ್ಷ್ಮಿ ತಂದೆಗೆ ಬಗ್ಗಿ, ಕುಗ್ಗಿ ನಡೆದದ್ದನ್ನು ತುಂಬ ಕಂಡಿದ್ದಾಳೆ. ಹೆಣ್ಣು ಇರಬೇಕಾದುದು ಹೀಗೆಯೇ ಎಂದು ತಿಳಿದುಕೊಂಡು ತನ್ನನ್ನು ಅದೇ ರೀತಿ ತಿದ್ದಿಕೊಂಡಿದ್ದಾಳೆ. ಆದರೆ, ಈ ಮನೆಯನ್ನು ಹೊಕ್ಕ ಬಳಿಕ ತಾನು ತಾಯಿಯಂತೆ ಆಗಲೇ ಕೂಡದು. ಹಾಗೆ ಆಗುವುದೇನೇ ಒಂದು ಅಪರಾಧ ಎಂಬ ಖಚಿತವಾದ ತೀರ್ಮಾನಕ್ಕೆ ಬಲು ಬೇಗನೆ ಬಂದಿದ್ದಾಳೆ." ಈಗ ಸರಸ್ವತಿಯ ಒಟ್ಟು ನಿಲುವು ಇದು: "ಅವರು ನನಗೆ ಮಾಡಿದ ಅನ್ಯಾಯದ ಫಲವನ್ನು ನನ್ನ ಕಣ್ಣಿಂದಲೇ ಕಂಡು ಆನಂದ ಪಡುವ ತನಕವೂ ನಾನು ಇಲ್ಲಿಯೇ ಇರುವವಳು". ಆದ್ದರಿಂದಲೇ ಮುಂದೆ ಆಕೆಯ ಕೈಗಳನ್ನು ಕಟ್ಟಿ ಆಕೆಯ ಎದುರಿನಲ್ಲೇ, ಲಾಟೀನಿನ ಬೆಳಕಿನಲ್ಲೇ ಮಹಾಬಲಯ್ಯ ಮಾಚಿಯೊಡನೆ "ಪಶುರತಿ ವಿಲಾಸ" ನಡೆಸಿದ ಸಂದರ್ಭದಲ್ಲಿ ಸರಸ್ವತಿ ತೋರಿಸುವ ಪ್ರತಿಕ್ರಿಯೆ ಆಕಸ್ಮಿಕ ಎನಿಸುವುದಿಲ್ಲ. ಸರಸ್ವತಿಯ ದೃಷ್ಟಿಯಲ್ಲಿ, "ಹೆಣ್ಣಿಗೆ ಗಂಡು ಬೇಕು, ಗಂಡಿಗೆ ಹೆಣ್ಣು ಬೇಕು ನಿಜ". ಆದರೆ ಗಂಡು-ಹೆಣ್ಣಿನ ಸಂಬಂಧವನ್ನು ತನ್ನ ಪತಿರಾಯ ಸೂಳೆ ಮಾಚಿಯ ಜೊತೆ ನಡೆಸಿದ "ಪಶುರತಿ ವಿಲಾಸ"ದ ಸ್ವರೂಪದಲ್ಲಿ ಒಪ್ಪಿಕೊಳ್ಳಲು ಆಕೆ ಸಿದ್ಧಳಿಲ್ಲ. ಈ ತೆರನ ಲೈಂಗಿಕ ಜೀವನಕ್ಕೆ ತದ್ವಿರುದ್ಧವಾದ ಆರೋಗ್ಯಪೂರ್ಣ, ಚೈತನ್ಯಶೀಲ ಲೈಂಗಿಕ ಸಂಬಂಧವನ್ನು ಸರಸ್ವತಿ-ನಾಗಪ್ಪಯ್ಯರ ಸಂಬಂಧದಲ್ಲಿ ಕಾಣುತ್ತೇವೆ.

ಸರಸ್ವತಿ-ಮಹಾಬಲಯ್ಯರ ಪ್ರಥಮ ಸಮಾಗಮದ ವರ್ಣನೆಗಳೊಂದಿಗೆ ಸರಸ್ವತಿ-ನಾಗಪ್ಪಯ್ಯರ ಪ್ರಥಮ ಸಮಾಗಮದ ವರ್ಣನೆಗಳನ್ನು ಹೋಲಿಸಿ ನೋಡಿದಾಗ ಅವುಗಳ ಶೈಲಿಗಳಲ್ಲೇ ಧ್ವನಿತವಾಗುವ ಕಾರಂತರ ಧೋರಣೆಗಳನ್ನು ಯಾವತ್ತೂ ಗುರುತಿಸಿಕೊಳ್ಳಬಹುದಾಗಿದೆ. ಅಲ್ಲಿ ಕಂಡುಬರುವ ಹುಲಿ-ಹರಿಣದ ಸಂಕೇತಗಳು, ಅದಕ್ಕೂ ಹಿಂದೆ ಸೂಚಿತವಾಗಿದ್ದ ರಾಮಾ-ಸೀತೆಯರ ಸಂಕೇತಗಳು ಇಲ್ಲಿ ಕಾಣೆಯಾಗುತ್ತ ಅವುಗಳ ಸ್ಥಾನವನ್ನು ಸೂರ್ಯಾಸ್ತ (ಕಡಲು–ಸೂರ್ಯರ ಸಮಾಗಮ), ಉರಿಯುವ ದೀಪ (ಬೆಚ್ಚನೆಯ ಮನೆ)ಗಳ ಸಂಕೇತಗಳು ಆಕ್ರಮಿಸಿಕೊಳ್ಳುವುದರಿ

ಕೇವಲ ಕಾಕತಾಳೀಯವಲ್ಲ. ಸರಸ್ವತಿ-ನಾಗಪ್ಪಯ್ಯರ ಪ್ರಥಮ ಸಮಾಗಮದಲ್ಲೇ ಭರವಸೆಯ, ಹೊಸ ಬದುಕಿನ ಕನಸುಗಳ, ಇಬ್ಬರ ಜೀವನವೂ ಒಮ್ಮೆಗೇ ಇನ್ನೊಂದು ಮಗ್ಗುಲಿಗೇ ಹೊರಳಿಕೊಂಡುಬಿಡುವ ಸೂಚನೆಗಳು ಕಾಣುತ್ತವೆ. ಮುಂದೆ ಸರಸ್ವತಿ-ನಾಗಪ್ಪಯ್ಯ ಸತಿ-ಪತಿಯರಂತೆ ಬದುಕಿ ಹೊಸ ದಾಂಪತ್ಯದ ಜನನವೊಂದನ್ನು ಸೂಚಿಸುತ್ತಿರುವಂತೆ ಕಂಡುಬರುವ ಈ ಪ್ರಸಂಗ ಅದೇ ನಿಟ್ಟಿನಲ್ಲಿ ಅರ್ಥಪೂರ್ಣವಾಗಿ ಬೆಳೆಯುತ್ತ "ಹಂಬಲ"ವು "ನಿಜಸ್ಥಿತಿ"ಯಾಗಿ ಮಾರ್ಪಡುವುದನ್ನು ಕಾಣುತ್ತೇವೆ. ಮಹಾಬಲಯ್ಯ ಸತ್ತನಂತರ ಸರಸ್ವತಿಯ ಅಂತರಂಗದ ಆಸೆಗಳು ಬಹಿರಂಗಗೊಳ್ಳುತ್ತವೆ. ಅಂದರೆ, ಸರಸ್ವತಿ ತನ್ನ ವಿಫಲ ದಾಂಪತ್ಯದ ಸೋಲನ್ನು ಪ್ರಜ್ಞಾಪೂರ್ವಕ ಹೊಸ ದಾಂಪತ್ಯದ ಆಯ್ಕೆಯಲ್ಲಿ ಗೆಲುವನ್ನಾಗಿ ಪರಿವರ್ತಿಸಿಕೊಳ್ಳುತ್ತಾಳೆ. ಈ ಹೊಸ ದಾಂಪತ್ಯ ಸರಸ್ವತಿಯ ಜೀವನದಲ್ಲಿ ಮಹತ್ತರವಾದ ಮೌಲ್ಯಾತ್ಮಕ ಬದಲಾವಣೆಯನ್ನು ಸಂಕೇತಿಸುವುದರಿಂದ "ವಿಚ್ಛೇದನ"ದ ಇತ್ಯಾತ್ಮಕ ಅಂಶಗಳನ್ನು ಅರ್ಥಪೂರ್ಣವಾಗಿ ಮೈಗೂಡಿಸಿಕೊಳ್ಳುತ್ತದೆ. "ನಂಬಿದವರ ನಾಕ ನರಕ"ದಲ್ಲೂ ಇದೇ ರೀತಿಯ ಪ್ರಕ್ರಿಯೆಗಳನ್ನು ಗಮನಿಸಬಹುದಾಗಿದೆ.

## ಮನೋವಿಜ್ಞಾನದ ನೆಲೆಯಲ್ಲಿ ಕಾರಂತರ ಕಾದಂಬರಿಗಳು

ಎ. ಎಸ್. ಧರಣೇಂದ್ರಯ್ಯ

ಪ್ರಶ್ನೆ : ನಿಮ್ಮದು ಮನೋವೈಜ್ಞಾನಿಕ ವಿಶ್ಲೇಷಣೆಯೋ ಅಥವಾ ಕಾರಂತರ ಪಾತ್ರಗಳನ್ನು ಕುರಿತ ನಿಮ್ಮ ಅನಿಸಿಕೆಯೋ ಸ್ಪಷ್ಟವಾಗುವುದಿಲ್ಲ. ಮನೋವೈಜ್ಞಾನಿಕ ದೃಷ್ಟಿ ಎಂದರೇನು ?

ಉತ್ತರ : ವ್ಯಕ್ತಿ-ಸಮೂಹಗಳ ವರ್ತನೆಗಳಿಗೆ ಸಂಬಂಧಿಸಿದಂತೆ ಆಧುನಿಕ ಮನೋವೈಜ್ಞಾನಿಕ ಸಂಶೋಧನೆಗಳನ್ನು ಆಧರಿಸಿ ರೂಪಿತವಾಗಿರುವ ಸಿದ್ಧಾಂತಗಳ ಬೆಳಕಿನಲ್ಲಿ ನಮ್ಮ ಮುಂದಿರುವ ವ್ಯಕ್ತಿ ಅಥವಾ ಪಾತ್ರಗಳ ವರ್ತನೆ ಅಥವಾ ಜೀವನ ವ್ಯವಹಾರಗಳ ಪರಿಶೀಲನೆ, ಮನೋವೈಜ್ಞಾನಿಕ ದೃಷ್ಟಿಯಿಂದ ಆದ ಪರಿಶೀಲನೆ ಎಂಬುದು ನನ್ನ ಮತ.

ನನ್ನ ಪ್ರಬಂಧದಲ್ಲಿ ಪ್ರಮುಖವಾಗಿ, ಕಾರಂತರು ತಮ್ಮ ಸಾಮಾಜಿಕ ಕಾದಂಬರಿಗಳಲ್ಲಿ ಪ್ರತಿಪಾದಿಸಿರುವ ವರ್ತನಾ ಪ್ರೇರಣೆಗಳ ವಿಶ್ಲೇಷಣೆ ಮಾಡಲು ಯತ್ನಿಸಿದ್ದೇನೆ. ಅಂತಹ ವಿಶ್ಲೇಷಣೆಗೆ ಮನೋವೈಜ್ಞಾನಿಕ ಸಿದ್ಧಾಂತಗಳ ಆಧಾರವಿದೆ ಎಂಬುದನ್ನು ನಾನು ಸಮರ್ಥಿಸಲು ದೃಷ್ಟಾಂತಗಳನ್ನು ಕೊಟ್ಟಿದ್ದೇನೆ.

ಇನ್ನು ಕಾರಂತರ ಪಾತ್ರಗಳ ವಿಶ್ಲೇಷಣೆಯನ್ನೂ ಮನೋವೈಜ್ಞಾನಿಕ ಸಿದ್ಧಾಂತಗಳನ್ನು ಆಧರಿಸಿಯೇ ಮಾಡಿದ್ದೇನೆ. ಅಂದರೆ ನನ್ನ ಅನಿಸಿಕೆಗಳಿಗೆ ಸಂಶೋಧನಾ ತಥ್ಯಾಂಶಗಳ ಆಧಾರವಿದೆ ಎಂಬುದನ್ನು ಗಮನಿಸಿ.

ಪ್ರಶ್ನೆ : ಪ್ರಮುಖ ಪ್ರೇರಣೆಗಳಾದ ಹಸಿವು, ಕಾಮದ ಪರಿಮಿತಿಯಲ್ಲಲ್ಲದೆ ಇನ್ನಾವ ಮನೋವೈಜ್ಞಾನಿಕ ವಿಧಾನದಿಂದಲೂ ಕಾರಂತರನ್ನು ನೋಡಲಾಗುವುದಿಲ್ಲವೇ ?

ಉತ್ತರ : ಕಾರಂತರ ಕೆಲವು ಸಾಮಾಜಿಕ ಕಾದಂಬರಿಗಳನ್ನು ದೃಷ್ಟಿಯಲ್ಲಿಟ್ಟು ಕೊಂಡು ನಾನು ವಿಶ್ಲೇಷಣೆ ಮಾಡಿದ್ದೇನೆಂಬುದನ್ನು ಗಮನಿಸಿ. ಈ ಕಾದಂಬರಿಗಳಲ್ಲಿ ಹೆಣ್ಣು, ಹೊನ್ನು, ಮಣ್ಣಿಗೇ ಪ್ರಾಧಾನ್ಯತೆ ಹೆಚ್ಚಾಗಿರುವುದನ್ನು ಯಾರಾದರೂ ಕಾಣಬಹುದು. ಸುಪ್ರಸಿದ್ಧ ಮನೋವಿಜ್ಞಾನಿ ಮಾಸ್ಲೋನ 'ಪ್ರೇರಣೆ' ಸಿದ್ಧಾಂತವನ್ನು ಪೂರ್ಣ ರೂಪದಲ್ಲಿ ಅನ್ವಯಿಸಲು ಬೇಕಾದ ಚರಾತ್ಮಕ ವರ್ತನೆಯು ಕಾರಂತರ ಕಾದಂಬರಿಗಳಲ್ಲಿ ಕಂಡುಬರದು. ಅವರು ತಮ್ಮ ಸಾಮಾಜಿಕ ಕಾದಂಬರಿಗಳಲ್ಲಿ ಚಿತ್ರಿಸಿ

ರುವ ವರ್ತನಾ ವ್ಯವಹಾರಗಳೆಲ್ಲಾ ಬಹುಮಟ್ಟಿಗೆ ಜೈವಿಕ ಮತ್ತು ಸಾಮಾಜಿಕ ಪ್ರೇರಣೆಗಳಿಂದಲೇ ಆವರಿಸಲ್ಪಟ್ಟಿರುವುದನ್ನು ಗುರುತಿಸುವುದು ಕಷ್ಟವಲ್ಲ. ಇದಕ್ಕೆ ಬಹುಮಟ್ಟಿಗೆ ನಮ್ಮ ಸಾಮಾಜಿಕ, ಆರ್ಥಿಕ ಜೀವನದ ರೀತಿನೀತಿಗಳೇ ಕಾರಣವೆಂಬುದನ್ನು ಅಲ್ಲಗಳೆಯಲಾಗದು. ಈ ಕಾರಣದಿಂದಲೇ ಬಹುಶಃ ಉನ್ನತ ಪ್ರೇರಣೆಯಾದ 'ಅಹಂ ವಾಸ್ತವೀಕರಣ' (self – actualization) ದ ಚಿತ್ರಣ ಬಹುಮಟ್ಟಿಗೆ ಕಡಿಮೆ. 'ಮರಳಿ ಮಣ್ಣಿಗೆ' ಕಾದಂಬರಿಯ ರಾಮ, 'ಅಳಿದಮೇಲೆ' ಕಾದಂಬರಿಯ ಯಶವಂತರಾಯ ಮುಂತಾದ ಪಾತ್ರಗಳಲ್ಲಿ ಅಹಂ ವಾಸ್ತವೀಕರಣದ ಇಚ್ಛೆ ಇಣುಕುವುದನ್ನು ಕಾಣಬಹುದು.

ಮೇಲಾಗಿ ಅತಿ ಗಹನವೆನಿಸುವಂತಹ ಮನೋವ್ಯಾಪಾರಗಳ ಚಿತ್ರಣ ಅಪರೂಪ. ಮೂಕಜ್ಜಿಯ ಕನಸುಗಳಲ್ಲಿಯೂ ಕೂಡ, ಪರಾಮನೋವೈಜ್ಞಾನಿಕ ಹೊಳಪುಗಳು ಪ್ರಖರವಾಗಿಲ್ಲ. ಅಂದಮೇಲೆ, ಕಾರಂತರ ಕಾದಂಬರಿಗಳ ಮನೋವೈಜ್ಞಾನಿಕ ಅಧ್ಯಯನಕ್ಕೆ ಸಂಕುಚಿತ ಸೀಮೆ, ಕಾದಂಬರಿಗಳಲ್ಲಿಯೇ ಅಂತರ್ಗತವಾದಂತಾಗುವುದಿಲ್ಲವೇ ?

ಪ್ರಶ್ನೆ : 'ಅಳಿದಮೇಲೆ' ಕಾದಂಬರಿಯಲ್ಲಿ ಯಶವಂತರಾಯರ ಪ್ರೇಮ ಸಂಬಂಧಗಳನ್ನು ಸಹಜವೆನ್ನುವಂತೆ ಸ್ವೀಕರಿಸುವ ಕಾರಂತರು, ಯಶವಂತರಾಯರ ಪತ್ನಿ ಕಮಲಮ್ಮ ಹಾಗೂ ವಕೀಲರ ಸಂಬಂಧದ ಬಗ್ಗೆ ತಿರಸ್ಕಾರ ಸೂಚಿಸುವುದರ ನೆಲೆಯನ್ನು ಸ್ಪಷ್ಟಪಡಿಸುವಿರಾ ?

ಉತ್ತರ : ಈ ಪ್ರಶ್ನೆಯತ್ತ ಈಗಾಗಲೇ ಕೆಲವು ವಿಮರ್ಶಕರು ಗಮನ ಹರಿಸಿದ್ದಾರೆ. ನನ್ನ ಪ್ರಬಂಧದಲ್ಲೇ ಇದನ್ನು ಪ್ರಸ್ತಾಪಿಸಿ, ಕಾರಂತರು ತಮ್ಮ ಸಂಪ್ರದಾಯಬದ್ಧ ಚೌಕಟ್ಟಿನಲ್ಲೇ ನೋಡಿದ್ದಾರೆ ಎಂಬ ಅಂಶವನ್ನು ಸ್ಪಷ್ಟಪಡಿಸಿದ್ದೇನೆ. ಎಂತಹ ಸಾಹಿತಿಗೂ ಕೆಲವು ಮಿತಿಗಳಿರುತ್ತವೆ. ಆತನೂ ತಾನು ಬೆಳೆದು ಜೀವಿಸುತ್ತಿರುವ ನೈತಿಕ ಮೌಲ್ಯಗಳನ್ನು ಧಿಕ್ಕರಿಸುವುದು ಕಷ್ಟವಾಗುತ್ತದೆ. ಅಲ್ಲದೆ ಗಂಡು-ಹೆಣ್ಣುಗಳ ನಡುವಣ ಸಂಬಂಧಗಳನ್ನು ನಿರ್ಧರಿಸುವ ನೈತಿಕ ಕಟ್ಟುಕಟ್ಟಳೆಗಳು ಬಹು ಜಟಿಲ ಮತ್ತು ವಿಶ್ವವ್ಯಾಪಿ ಎಂಬುದನ್ನು ಮರೆಯಲಾಗದು. ಕುಟುಂಬ ಜೀವನವನ್ನು ಆಧರಿಸಿರುವ ಸಮಾಜಗಳಲ್ಲಿ ಗಂಡು-ಹೆಣ್ಣುಗಳ ಲೈಂಗಿಕ ಜೀವನದಲ್ಲಿ ಸಮಾನತೆ ಇರಬೇಕಾದುದು ಉಚಿತವೋ, ಅನುಚಿತವೋ ಎಂಬುದರ ಬಗ್ಗೆ ಬರಲಿರುವ ವೈಜ್ಞಾನಿಕ ಸಂಶೋಧನೆಗಳೇ ಪರಿಹಾರ ಸೂಚಿಸಬೇಕಾಗುತ್ತದೆ. ಆದರೂ ನಾವು ಗಮನಿಸಬೇಕಾದ ಬಹುಮುಖ್ಯ ಅಂಶವೆಂದರೆ ಗಂಡು ಮತ್ತು ಹೆಣ್ಣುಗಳಲ್ಲಿ ಕಾಮವಾಂಛೆ ಎಷ್ಟು ತೀವ್ರತರವಾಗಿರುತ್ತದೆ ಎಂಬುದು ಮತ್ತು ಯಾರ ಕಾಮವಾಂಛೆಯನ್ನು (ಸಾಮಾಜಿಕ ಜೀವನ ದೃಷ್ಟಿಯಿಂದ) ಎಷ್ಟು ನಿಯಂತ್ರಿಸಬೇಕೆಂಬುದು. ಗಂಡಿನ

ಕಾಮೇಚ್ಛೆ ಹುಲ್ಲು-ಬೆಂಕಿಯಂತೆ ಕ್ಷಣಕಾಲ ಉರಿದು ಪ್ರಕಟಗೊಳ್ಳುವಂತಿದ್ದರೆ, ಹೆಣ್ಣಿನ ಕಾಮೇಚ್ಛೆ, ಬೆರಣಿಯ ಬೆಂಕಿಯಂತೆ ಸುಪ್ತವಾಗಿದ್ದು ಊದಿದಾಗ ಧಗಧಗಿಸಬಲ್ಲದು ಎಂಬ ವಿಚಾರ ಗಮನಾರ್ಹ. ಹಾಗೂ ಅವುಗಳ ಮುಕ್ತರೀತಿಯ ಪ್ರಕಟನೆಯಿಂದ ಆಗಬಹುದಾದ ವೈಯಕ್ತಿಕ ಹಾಗೂ ಸಾಮಾಜಿಕ ಪರಿಣಾಮಗಳೂ ಗಮನಾರ್ಹ.

ಪ್ರಶ್ನೆ : ಮನೋವೈಜ್ಞಾನಿಕ ನೆಲೆಯಲ್ಲೇ ನೋಡಲ್ಪಡುವ ಚಿತ್ತಾಲರಂಥವರ ಕಾದಂಬರಿಗಳಿಗೂ, ಮನೋವೈಜ್ಞಾನಿಕ ಅಂಶಗಳನ್ನು ಹೆಕ್ಕಿ ತೆಗೆಯಬಹುದಾದ ಕಾರಂತರ ಕಾದಂಬರಿಗಳಿಗೂ ಇರುವ ಮುಖ್ಯ ಅಂತರ ಸ್ಪಷ್ಟಪಡಿಸುವಿರಾ?

ಉತ್ತರ : ನಿಮ್ಮ ಪ್ರಶ್ನೆಯಲ್ಲಿಯೇ ಭಾಗಶಃ ಉತ್ತರವಿದೆ. ಚಿತ್ತಾಲರಂಥವರ ಕಾದಂಬರಿಗಳಲ್ಲಿ (ಉದಾ. ಶಿಕಾರಿ), ಮನೋವ್ಯಾಪಾರಗಳು ಸೂಕ್ಷ್ಮತರವೂ ವೈವಿಧ್ಯ ಪೂರ್ಣವೂ ಆಗಿ ಚಿತ್ರಿತವಾಗಿದ್ದರೆ, ಕಾರಂತರಲ್ಲಿ, ಆ ವ್ಯಾಪಾರಗಳು ಅತಿ ಸಂಕುಚಿತ ವಾಗುತ್ತವೆ. ಅವುಗಳಲ್ಲಿ ಸಾಂಸ್ಕೃತಿಕ ಬದ್ಧತೆ ಹೆಚ್ಚು. ಉದಾಹರಣೆಗೆ ಮೃತ್ಯು ಸದೃಶ ಸಂಕೋಲೆಗಳನ್ನು ಕಿತ್ತೆಸೆಯುವ ಇಚ್ಛೆಯುಳ್ಳ 'ಚೋಮ'ನಂತಹ ಪಾತ್ರಗಳೂ ಬದ್ಧತೆಗೆ ಬಾಗಿ ಬಲಿಯಾಗುತ್ತವೆ. ಮತ್ತೊಂದು ಅಂಶವೆಂದರೆ, ಕಾರಂತರ ಕಾದಂಬರಿ ಗಳಲ್ಲಿ ಕಂಡುಬರುವ ಜೀವನ ವ್ಯವಹಾರಗಳು ಸಾಮಾನ್ಯ ವರ್ತನೆಯ ಮಿತಿಯಲ್ಲಿ ಬರುವುದರಿಂದ, ಅವುಗಳ ವಿವರಣೆ ಅಷ್ಟು ಕಷ್ಟವೆನಿಸದು. ಅಂತಹ ವಿವರಣೆಗಾಗಿ ವಿಪುಲ ಆಳ ಅಗಲಗಳುಳ್ಳ ಸುಪ್ತಚೇತನದ ಜಟಿಲ–ಕುಟಿಲ ಕಾರ್ಯ ರೀತಿಯನ್ನು ಅರಿಯುವ ಅಗತ್ಯ ಬರದು. ಆದರೆ, 'ಶಿಕಾರಿ'ಯ ನಾಯಕನ ವರ್ತನೆಯನ್ನು ಅರ್ಥ ಮಾಡಿಕೊಳ್ಳಲು ಸುಪ್ತಚೇತನದ ಕಾರ್ಯರೀತಿಯ ಅರಿವು ಬೇಕಾಗುತ್ತದೆ. ಹಾಗಿದ್ದರೂ, 'ಮರಳಿ ಮಣ್ಣಿಗೆ' ಕಾದಂಬರಿಯ 'ರಾಮ'ನ ವರ್ತನೆಯ ಸಂಕೀರ್ಣತೆ ಯನ್ನು ಅರ್ಥಮಾಡಿಕೊಳ್ಳಲು ಸುಪ್ತಚೇತನ ವ್ಯಾಪಾರದ ರೀತಿನೀತಿಯ ಜ್ಞಾನ ಅಗತ್ಯವೆನಿಸುತ್ತದೆ. ಅದರಂತೆಯೇ ಕಾರಂತರು ಸೃಷ್ಟಿಸಿರುವ 'ಮೈಮನಗಳ ಸುಳಿ ಯಲ್ಲಿ'ನ 'ಹಳೆಯ ಭೂತ' 'ಧರ್ಮರಾಯನ ಸಂಸಾರ'ದಲ್ಲಿನ 'ಹೆಬ್ಬಾವು'ಗಳಂತಹ ಸಂಕೇತಗಳ ವಿಶ್ಲೇಷಣೆಗೆ ಮನೋವೈಜ್ಞಾನಿಕ ದೃಷ್ಟಿ ಅತ್ಯಗತ್ಯವೆನಿಸುತ್ತದೆ.

ಪ್ರಶ್ನೆ : ಕಾರಂತರನ್ನು ಸಂಪ್ರದಾಯ ಶರಣತೆಗೆ ಬದ್ಧರಾಗಿದ್ದಾರೆ ಎಂದಿದ್ದೀರಿ. ಆದರೆ ಅವರ ಬಹುತೇಕ ಕಾದಂಬರಿಗಳು ಸಂಪ್ರದಾಯ ಶರಣತೆಯಿಂದ ದೂರ ಉಳಿದಿವೆ ಎಂದು ನನ್ನ ಭಾವನೆ. 'ಚೋಮನ' ಪ್ರಸ್ತಾಪದಲ್ಲಿ ಅವರದು ವಾಸ್ತವ ಚಿತ್ರಣ. 'ದಲಿತ'ತನವನ್ನು ವಿಜೃಂಭಿಸಿ ಹೇಳುವ ಬದಲು ವಾಸ್ತವತೆಯನ್ನು ಮುಂದಿಟ್ಟು ಓದುಗರನ್ನು ವಿಚಾರಕ್ಕೆಳೆದಿದ್ದಾರೆ. ತೀರ್ಮಾನ ಓದುಗರದು. ಹಾಗಿಲ್ಲದಿದ್ದರೆ ಅದು emotional ಆಗುತ್ತಿತ್ತಲ್ಲವೇ?

ಉತ್ತರ : ಒಳ್ಳೆಯ ಪ್ರಶ್ನೆ. ಕಾರಂತರು ಸೃಷ್ಟಿಸಿರುವ ಪಾತ್ರಗಳಲ್ಲಿ 'ಚೋಮ'ನ ಪಾತ್ರ ಅತ್ಯುತ್ತಮವಾದುದು ಎಂದು ಹೇಳಿದರೆ ಬಹುಶಃ ತಪ್ಪಾಗದು ಆದರೆ ಅಂತಹ ಪಾತ್ರ ಮತ್ತೊಂದು ಎಲ್ಲಿದೆ? ವಿಚಾರವಂತ ಎನಿಸಿಕೊಳ್ಳುವ ಯಶವಂತರಾಯರಲ್ಲಿಯೂ ಸಂಪ್ರದಾಯ ಬದ್ಧತೆ ಗೌಣವಾಗಿರುವುದನ್ನು ಗುರುತಿಸ ಬಹುದು.

ಚೋಮನ ಪಾತ್ರವನ್ನು ವಿಶ್ಲೇಷಿಸುವಾಗ, ಕಾರಂತರನ್ನು ಬಿಡಿಯಾಗಿ ನೋಡದೆ ಇಡಿಯಾಗಿ ನೋಡಿದರೆ ಅವರ ಆಶಯ ಸಂಪ್ರದಾಯಬದ್ಧವೋ ಅಲ್ಲವೋ ಎಂಬುದು ಸ್ಪಷ್ಟವಾದೀತು. 'ಚೋಮನ ದುಡಿ' ಕಾದಂಬರಿಯನ್ನು, ಕಾರಂತರ ಇತರ ಕಾದಂಬರಿ ಗಳಿಂದ ಪ್ರತ್ಯೇಕಿಸಿದಾಗ ನಿಮ್ಮ ಅನಿಸಿಕೆ ನಿಜವೆನಿಸಬಹುದು. ಅಲ್ಲದೆ, 'ಚೋಮನ ದುಡಿ'ಯನ್ನು ಬರೆಯುವ ಕಾಲಕ್ಕೆ ದಲಿತರ ಮೇಲಿನ ಕಳಕಳಿ ಜೀವಂತವಿದ್ದ ಸಾಧ್ಯತೆ ಇಲ್ಲದಿಲ್ಲ.

ಪ್ರಶ್ನೆ : ಭಾರತೀಯ ಸಂಪ್ರದಾಯ, ಸಾಮಾಜಿಕ ಪರಿಸರದಲ್ಲಿ ಬೆಳೆದ ಮನಸ್ಸನ್ನು ಪಾಶ್ಚಾತ್ಯ ಮನೋವಿಜ್ಞಾನಿಗಳು ಕೊಟ್ಟ ಮಾನದಂಡದಿಂದಲೇ ಸಮರ್ಪಕವಾಗಿ ಅಳೆಯಲಾದೀತೇ?

ಉತ್ತರ : ಮಾನದಂಡದ ಸಮರ್ಪಕತೆ ನಾವು ಅಳೆಯುತ್ತಿರುವುದು 'ಏನನ್ನು'? ಎಂಬುದನ್ನು ಅವಲಂಬಿಸುತ್ತದೆ. ನಿಮ್ಮ ಪ್ರಶ್ನೆ, 'ಈಡಿಪಸ್ ಭಾವಗ್ರಂಥಿ'ಗೆ ಸಂಬಂಧಿ ಸಿದುದಾದರೆ ಪಾಶ್ಚಾತ್ಯ ಮಾನದಂಡ ನಮಗೂ ಸಮರ್ಪಕವೆನಿಸುವುದರಲ್ಲಿ ಅನುಮಾನ ವಿಲ್ಲ. ಈಡಿಪಸ್ ಭಾವಗ್ರಂಥಿ, ಕಾಮವಾಂಛೆ (libido)ಯ ಅಭಿವ್ಯಕ್ತಿ ಇದು ನಮ್ಮ ಸಂಸ್ಕೃತಿಯಲ್ಲೂ ಕಂಡು ಬರುತ್ತದೆ ಎಂಬುದಕ್ಕೆ ನಮ್ಮ ಜಾನಪದದಲ್ಲಿ, ಪುರಾಣಗಳಲ್ಲಿ ಪುರಾವೆಗಳಿಗೆ ಕೊರತೆಯಿಲ್ಲ. ಇದಕ್ಕೆ ಸಂಬಂಧಿಸಿದ ಕೆಲವು ವಿವರಗಳನ್ನು ಮತ್ತೊಂದು ಲೇಖನದಲ್ಲಿ (ಜಾನಪದ ಮತ್ತು ಮನೋವಿಜ್ಞಾನ) ಪ್ರಸ್ತಾಪಿಸಿದ್ದೇನೆ. "we are like others, like some others and like none else" ಎಂಬ ಮಾತಿನಂತೆ, ಮೂಲಭೂತ ಅಗತ್ಯಗಳ ಪ್ರೇರಣೆಗಳ ಕಾರ್ಯಶೀಲತೆಯಲ್ಲಿ ಮಾನವರೆಲ್ಲಾ ಒಂದೇ. ಆದ್ದರಿಂದ ಮಾನದಂಡ ಭಿನ್ನವಾಗಿರಬೇಕಿಲ್ಲ. ಆದರೆ ನಮ್ಮ ಸಾಮಾಜಿಕ ಹಾಗೂ ವೈಯಕ್ತಿಕ ವರ್ತನೆಗಳ ಅಳತೆಯಲ್ಲಿ, ಪಾಶ್ಚಿಮಾತ್ಯ ಮನೋ ವೈಜ್ಞಾನಿಕ ಮಾನದಂಡಗಳನ್ನು ಸೂಕ್ತ ಮಾರ್ಪಾಡುಗಳಿಂದ ಬಳಸಬೇಕಾಗುತ್ತದೆ ಅಷ್ಟೆ.

## ಕಾರಂತರ ಕಾದಂಬರಿಗಳಲ್ಲಿ ಮಹಿಳೆ : ವೃದ್ಧೆಯರು

---

ವನಮಾಲಾ ವಿಶ್ವನಾಥ

ಪ್ರಶ್ನೆ : ಪಥೇರ್ ಪಾಂಚಾಲಿಯ ಅಜ್ಜಿಯ ಚಡಪಡಿಕೆ ದರ್ಶನದ ದೃಷ್ಟಿಯಿಂದ ಅರ್ಥಪೂರ್ಣವಾದದ್ದೆ. ಹಾಗೆಯೇ ಕಾರಂತರ ಮುದುಕಿಯರು ಈ ರೀತಿಯ ಚಡಪಡಿಕೆಯಿಂದ ಹೊರತಾದವರು ಅಲ್ಲ ಅನ್ನಿಸುತ್ತೆ. ನಾಳೆ ಮುದುಕಿಯರಾಗುವವರು ಈ ಸಮಸ್ಯೆಯಿಂದ ಬಿಡುಗಡೆ ಆಗ್ತಾರೆ ಎಂಬ ನಿಲುವನ್ನು ತಾಳ್ತೀರಾ?

ಉತ್ತರ : ಕಾರಂತರ ಮುದುಕಿಯರು ಪೀಸಿಗಿರುವ (ಪಥೇರ್ ಪಾಂಚಾಲಿಯ ಮುದುಕಿ) ಚಡಪಡಿಕೆಯಿಂದ ಹೊರತಾದವರು ಅಂತ ನಾನು ಹೇಳಲಿಲ್ಲ. ಪೀಸಿಯ ಸ್ವಭಾವದ ವಿವಿಧ ಮುಖಗಳನ್ನು—ಅವಳ ವಿಶ್ವಾಸ, ಅಸಹಾಯಕತೆ, ಕುಯುಕ್ತಿ ಮುಂತಾದುವನ್ನು ನಾವು ಕಾದಂಬರಿಯಲ್ಲಿ ಕಾಣುತ್ತೇವೆ. ಆದೇ ಕಾರಂತರ ಕಾದಂಬರಿಗಳಲ್ಲಿ ಈ ಮುದುಕಿಯರ ಒಳ್ಳೆತನವನ್ನು ಮಾತ್ರ ನೋಡುತ್ತೇವೆ ಅನ್ನೋದು ನಾನು ಹೇಳಿದ ಅಂಶ.

ನಾಳಿನ ಮುದುಕಿಯರು ಚಡಪಡಿಕೆಗಳಿಂದ ಹೊರತಾಗುತ್ತಾರೆ ಅಂತ ನನಗೆ ಅನಿಸುವುದಿಲ್ಲ. ಈ ರೀತಿಯ ಚಡಪಡಿಕೆಗೆ, ಇದೇ ಕಾರಣಗಳು ಅಲ್ಲದಿರಬಹುದು ಅಷ್ಟೆ.

ಪ್ರಶ್ನೆ : ಬಾಲವಿಧವೆಯಾದ ಮೂಕಜ್ಜಿಯ ಪಾತ್ರದ ಮೂಲಕ ಕಾರಂತರು ತಮ್ಮ ಅಗಾಧವಾದ ತಾತ್ವಿಕ ವಿಚಾರಧಾರೆಗಳನ್ನು ಹಾಗೂ ವೈಚಾರಿಕ ವಿಚಾರಗಳನ್ನು ಹೇಳಲು ಹೊರಟಿದ್ದಾರೆ. ಆದರೆ ಆ ಪಾತ್ರವು ಅವುಗಳನ್ನು ತಡೆಯಬಲ್ಲ ಸಾಮರ್ಥ್ಯ ಹೊಂದಿಲ್ಲ ಎನಿಸುತ್ತದೆ. ನಿಮ್ಮ ಅಭಿಪ್ರಾಯ?

ಉತ್ತರ: ಸಂಪ್ರದಾಯಬದ್ಧ ಸಮಾಜದಲ್ಲಿ ಹುಟ್ಟಿ ಬದುಕಿಯೂ ಮೂಕಜ್ಜಿಯಂತೆ ಇರುವ ಮುದುಕಿಯನ್ನು ನಾನು ನಿಜಜೀವನದಲ್ಲೂ ಕಂಡಿದ್ದೇನೆ. ಆದ್ದರಿಂದ ಮೂಕಜ್ಜಿ ಪಾತ್ರಕ್ಕೆ ಅಷ್ಟು ತಾತ್ವಿಕ ಜ್ಞಾನ, ವೈಚಾರಿಕತೆಯನ್ನು ತಡೆದುಕೊಳ್ಳುವ ಸಾಮರ್ಥ್ಯ ಇದೆ ಅಂತ ನನ್ನ ಅನಿಸಿಕೆ. ಆದರೆ ಆ ಪಾತ್ರಕ್ಕೆ ಅತೀಂದ್ರಿಯ ಜ್ಞಾನದ ಒಂದು ಆಯಾಮ ಕೊಟ್ಟಿರೋದು, ನಮ್ಮನ್ನು ಪಾತ್ರದಿಂದ ಸ್ವಲ್ಪ ದೂರ ಮಾಡುತ್ತೆ ಅಂತ ನನ್ನ ಭಾವನೆ.

ಪ್ರಶ್ನೆ : ಕಾರಂತರ ವೃದ್ಧೆಯರ ಪಾತ್ರಗಳಲ್ಲಿ ಘರ್ಷಣೆ ಅಷ್ಟಾಗಿಲ್ಲದಿರುವುದರಿಂದ ವೈವಿಧ್ಯತೆಯೂ ಹೆಚ್ಚಾಗಿ ಕಂಡುಬಂದಿಲ್ಲವೆನಿಸುತ್ತದೆಯಲ್ಲವೇ ?

ಉತ್ತರ : ಹೌದು.

ಪ್ರಶ್ನೆ : ಕಾರಂತರ ಕಾದಂಬರಿಗಳಲ್ಲಿ ದುಷ್ಟ ವೃದ್ಧೆಯರು ಅಂದರೆ ಸುಮ್ಮನೆ ಪಿರಿಪಿರಿ ಮಾಡುವ, ಸೊಸೆಯಂದಿರನ್ನು ಕಾಡುವ, ವೃದ್ಧೆಯರು ಇದ್ದಾರೆಯೆ? ಇಲ್ಲದಿದ್ದಲ್ಲಿ ಅಂತಹ ಪಾತ್ರಗಳನ್ನು ಕುರಿತು ಬರೆಯದಿದ್ದಲ್ಲಿ ಅದೊಂದು ಕೊರತೆಯಲ್ಲವೇ ?

ಉತ್ತರ : ಇಲ್ಲ. ಇದು ಒಂದು ಕೊರತೆ ಎಂಬುದು ನಿಜ. ಇದನ್ನೇ ನಾನು ನನ್ನ ಮೊದಲ ಪ್ರಶ್ನೆಯ ಉತ್ತರದಲ್ಲೂ ಹೇಳಲು ಪ್ರಯತ್ನಿಸಿರುವುದು.

ಪ್ರಶ್ನೆ : ಕಾರಂತರ ಕಾದಂಬರಿಯ ವೃದ್ಧೆಯರು 'ಬಿಳಿ' ಎಂದಿರಿ. ಆದರೆ ಪಾಶ್ಚಾತ್ಯ ಸಂವೇದನೆಯನ್ನು ರೂಢಿಸಿಕೊಂಡು ಕರಿ–ಬಿಳಿಗಳ ಘರ್ಷಣೆಯಲ್ಲಿ ಬದುಕುವುದು, ಸಂಕೀರ್ಣವಾಗಿ ಆಲೋಚಿಸುವುದು ಅಪ್ಪಟ ಭಾರತೀಯ ವೃದ್ಧೆಯರಿಗೆ ಹೇಗೆ ಸಾಧ್ಯ? ಭಾರತೀಯ typical ಸಂವೇದನೆಯ ಫಲಗಳು ಅವು ಎನ್ನಿಸದೆ ?

ಉತ್ತರ : ನಾನು 'ಬಿಳಿ' ಎಂಬ ಪದವನ್ನು ಬಳಸಿರುವುದು ಈ ಅರ್ಥದಲ್ಲಲ್ಲ. ಇಂಗ್ಲಿಷ್‌ನಲ್ಲಿ ಎಲ್ಲಾ ಕೆಟ್ಟ ಗುಣಗಳನ್ನೂ ಒಳಗೊಂಡ ಖಳನಾಯಕ ಅಥವಾ ನಾಯಕಿಯ ಪಾತ್ರಗಳಿಗೆ 'Black' (ಕರಿ) ಪಾತ್ರಗಳು ಎಂದೂ ಸಕಲ ಸದ್ಗುಣಗಳನ್ನೊಳಗೊಂಡ ಪಾತ್ರಗಳಿಗೆ 'white' (ಬಿಳಿ) ಪಾತ್ರಗಳೆಂದೂ ಹೇಳುತ್ತಾರೆ. ಇದು ಎರಡು ಅತಿರೇಕಗಳನ್ನು ಸೂಚಿಸುತ್ತದೆ. ಕಾರಂತರ ಮುದುಕಿಯರಲ್ಲಿ ಬರಿಯ ಒಳ್ಳೆತನವನ್ನೇ ಕಾಣುತ್ತೇವೆ. ಆದ್ದರಿಂದ ಅವು 'ಬಿಳಿ' ಪಾತ್ರಗಳು, ಎಂಬರ್ಥದಲ್ಲಿ ಮಾತ್ರ ನಾನು ಈ ಪದವನ್ನು ಪ್ರಯೋಗಿಸಿರುವುದು.

## ಕಾರಂತರ ಕಾದಂಬರಿಗಳಲ್ಲಿ ಮಹಿಳೆ : ಗ್ರಾಮೀಣ ಮಹಿಳೆಯರು

---

ಡಿ. ವಿಜಯ

ಪ್ರಶ್ನೆ: ದುಡಿಮೆ, ತ್ಯಾಗ, 'ಒಳ್ಳೆಯತನ' ಇವು ಕಾರಂತರು ವೈಭವಿಸುವ ಎಲ್ಲಾ ಪಾತ್ರಗಳ ಹಿನ್ನೆಲೆಯಲ್ಲೂ ಇರುವಂಥವು. ಕೇವಲ ಮಹಿಳೆಯರದ್ದಲ್ಲ. ಉದಾ :- 'ಬೆಟ್ಟದ ಜೀವ'ದ ಗೋಪಾಲಯ್ಯ.

ಉತ್ತರ: ಈ ಗುಣಗಳು ಕೇವಲ ಮಹಿಳೆಯರದ್ದು ಎಂದು ನಾನು ಕೂಡ ಹೇಳುತ್ತಿಲ್ಲ.

ಪ್ರಶ್ನೆ: ಕಾರಂತರ ಕಾದಂಬರಿಯಲ್ಲಿ ಬರುವ ಮಹಿಳೆಯ ಪಾತ್ರಗಳು ಸಮಾಜದ ಚೌಕಟ್ಟನ್ನು ಬಿಟ್ಟು ಹೊರಬರುವುದಿಲ್ಲ ಎಂಬ ಆಕ್ಷೇಪದೊಂದಿಗೆ ಅದು ವಾಸ್ತವವೂ ಹೌದಲ್ಲವೇ ?

ಉತ್ತರ : ಒಬ್ಬ ಲೇಖಕ ಆ ವಾಸ್ತವತೆಯನ್ನು ಮೀರಿ ಏನಾದರೂ ಧ್ವನಿಸುವುದು ಸಾಧ್ಯವಿಲ್ಲವೆ?

ಪ್ರಶ್ನೆ: ಕಾರಂತರ ಕಾದಂಬರಿಗಳಲ್ಲಿ ಗ್ರಾಮೀಣ ಮಹಿಳೆಯರಿಗಿರುವ ಜೀವನ ಪ್ರೀತಿ, ಗಟ್ಟಿತನ, ದುಡಿಮೆಯಿಂದ ಹೆಚ್ಚಾಗಿ ನಿರ್ಣಯವಾಗುತ್ತದೆ. ಅಂದರೆ ನಗರದ ದುಡಿಯದ ಮಹಿಳೆಯರು ಈ ಕಾರಣದಿಂದಲೇ ಸಪ್ಪೆಯಾಗುತ್ತಾರೆಯೆ ?

ಉತ್ತರ: ಹೌದು, ಕಾರಂತರ ಹೆಚ್ಚಿನ ನಗರದ ಮಹಿಳೆಯರು ಈ ಗುಣಗಳಿಲ್ಲದೆ ಟೊಳ್ಳಾಗಿದ್ದಾರೆ. ಇದರಿಂದಾಗಿ ಕಾರಂತರ ಅನಾದರಕ್ಕೂ ಪಾತ್ರರಾಗಿದ್ದಾರೆ.

ಪ್ರಶ್ನೆ: ಕಾರಂತರು ಚಿತ್ರಿಸುವ ಹೆಣ್ಣಿನ ಮನಸ್ಸು ಮತ್ತು ಅವರ ಜೀವನವನ್ನು ಅವರು ಸಮಾಜದಲ್ಲಿರುವಂತೆಯೇ ಚಿತ್ರಿಸುವುದು ತಪ್ಪೆ? ಹೀಗೆ ಚಿತ್ರಿಸುವುದರಿಂದಲೂ ಸಾಮಾಜಿಕ ಎಚ್ಚರ ಇರುವುದಿಲ್ಲವೆ?

ಉತ್ತರ: ಇರುವಂತೆ ಚಿತ್ರಿಸುವುದು ತಪ್ಪೆಂದಾಗಲೀ, ಹಾಗೆ ಚಿತ್ರಿಸಿದಾಗ ಸಾಮಾಜಿಕ ಎಚ್ಚರವಿರುವುದಿಲ್ಲ ಎಂದಾಗಲೀ ನಾನು ಅಭಿಪ್ರಾಯಿಸುತ್ತಿಲ್ಲ. ಆದರೆ ವಸ್ತುಸ್ಥಿತಿ ತನ್ನ ಭೂತ, ಭವಿಷ್ಯದ ಪರಿಧಿಯೊಳಗಿಂದ ಒಂದು ವ್ಯಾಪಕ ದನಿಯನ್ನು ಚಿಮ್ಮಿಸಿದರೆ ಬರವಣಿಗೆಗೆ ಹೊಸ ಮಗ್ಗುಲುಗಳು ದೊರೆತಾವು ಎಂಬ ಅನಿಸಿಕೆ ಮಾತ್ರ ನನ್ನದು.

ಪ್ರಶ್ನೆ: ಕಾರಂತರ ನಿಲುವು ಕ್ರಾಂತಿಕಾರಕ ದೃಷ್ಟಿಯತ್ತ ಇದೆಯೆಂದಾಗಲೀ ಅಥವಾ ವಾಸ್ತವವಾದಿ ದೃಷ್ಟಿಯತ್ತ ಇದೆಯೆಂದಾಗಲಿ ಹೇಳಲು ಬರುವುದಿಲ್ಲ ಎಂದಿರಿ. ಆದರೆ 'ಪ್ರತಿಭಟನೆ'ಯನ್ನು ತೋರುವ ಪಾತ್ರಗಳ ಜೀವನದಲ್ಲಿನ ಅಸಫಲತೆ ಯನ್ನು ತೋರುವುದರಿಂದ ಸಾಂಪ್ರದಾಯಿಕ ಚೌಕಟ್ಟಿನೊಳಗೇ ವಾಸ್ತವವಾದಿ ಮೌಲ್ಯಗಳನ್ನೇ ಒಪ್ಪಿಕೊಂಡಂತೆ ಆಗಲಿಲ್ಲವೇ ?

ಉತ್ತರ: ನಾನು ಗ್ರಹಿಸಿದ ಕಾರಂತರ ಕೇಂದ್ರ ಧೋರಣೆಯನ್ನು ಕುರಿತು ಈ ಲೇಖನದ ಪ್ರಾರಂಭದಲ್ಲಿ ಹೇಳಿದ್ದೇನೆ. ಪ್ರತಿಭಟನೆಯ ಸಫಲತೆಯನ್ನಾಗಲೀ ಅಸಫಲತೆಯನ್ನಾಗಲೀ ಸೂಚಿಸದ ಸಂದರ್ಭಗಳು ಕಾರಂತರ ಮುಜುಗರಸ್ಥಿತಿಯ ಸೂಚಿಗಳಾಗಿವೆಯೆ ಎಂಬ ಅನುಮಾನವನ್ನೂ ಸೂಚಿಸಿದ್ದೇನೆ. ಕೇವಲ ಪ್ರತಿಭಟನೆಯ ಅಸಾಫಲ್ಯದಿಂದ ಒಬ್ಬ ಲೇಖಕ ಸಂಪ್ರದಾಯವಾದಿಯಾಗುತ್ತಾನೆಯೆ ?

ಈ ಕೃತಿಯ ಲೇಖಕರು


| | |
|---|---|
| ಡಾ॥ ಎಸ್. ಎಲ್. ಭೈರಪ್ಪ | ರೀಜನಲ್ ಕಾಲೇಜ್ ಆಫ್ ಎಜುಕೇಷನ್<br>ಮಾನಸ ಗಂಗೋತ್ರಿ<br>ಮೈಸೂರು ವಿಶ್ವವಿದ್ಯಾಲಯ<br>ಮೈಸೂರು – 570 006 |
| ಡಾ॥ ಡಿ. ಆರ್. ನಾಗರಾಜ್ | ಕನ್ನಡ ಅಧ್ಯಯನ ಕೇಂದ್ರ<br>ಜ್ಞಾನಭಾರತಿ<br>ಬೆಂಗಳೂರು ವಿಶ್ವವಿದ್ಯಾಲಯ<br>ಬೆಂಗಳೂರು – 560 056 |
| ಜಿ. ಎಚ್. ನಾಯಕ | ಕನ್ನಡ ಅಧ್ಯಯನ ಸಂಸ್ಥೆ<br>ಮಾನಸ ಗಂಗೋತ್ರಿ<br>ಮೈಸೂರು ವಿಶ್ವವಿದ್ಯಾಲಯ<br>ಮೈಸೂರು - 570 006 |
| ಕೆ. ವಿ. ನಾರಾಯಣ | ಕನ್ನಡ ಅಧ್ಯಯನ ಕೇಂದ್ರ<br>ಜ್ಞಾನಭಾರತಿ<br>ಬೆಂಗಳೂರು ವಿಶ್ವವಿದ್ಯಾಲಯ<br>ಬೆಂಗಳೂರು - 560 056 |
| ಬರಗೂರು ರಾಮಚಂದ್ರಪ್ಪ | ಕನ್ನಡ ಅಧ್ಯಯನ ಕೇಂದ್ರ<br>ಜ್ಞಾನಭಾರತಿ<br>ಬೆಂಗಳೂರು ವಿಶ್ವವಿದ್ಯಾಲಯ<br>ಬೆಂಗಳೂರು - 560 056 |
| ಡಿ. ಎಸ್. ನಾಗಭೂಷಣ | ಕಾರ್ಯಕ್ರಮ ನಿರ್ವಾಹಕ<br>ಆಕಾಶವಾಣಿ ಕೇಂದ್ರ<br>ಭದ್ರಾವತಿ |
| ಕೆ. ಸತ್ಯನಾರಾಯಣ | ನಂ. 54, 3ನೇ ಅಡ್ಡರಸ್ತೆ<br>ಜರ್ನಲಿಸ್ಟ್ಸ್ ಕಾಲೋನಿ<br>ಬೆಂಗಳೂರು - 560 002 |

| | |
|---|---|
| ಪೋಲಂಕಿ ರಾಮಮೂರ್ತಿ | ಇಂಗ್ಲಿಷ್ ವಿಭಾಗ<br>ಮಾನಸ ಗಂಗೋತ್ರಿ<br>ಮೈಸೂರು ವಿಶ್ವವಿದ್ಯಾಲಯ<br>ಮೈಸೂರು - 570 006 |
| ಟಿ. ಪಿ. ಅಶೋಕ | ಇಂಗ್ಲಿಷ್ ವಿಭಾಗ<br>ಲಾಲ್ ಬಹದ್ದೂರ್ ಶಾಸ್ತ್ರಿ ಪ್ರಥಮದರ್ಜೆ<br>ಕಾಲೇಜು<br>ಸಾಗರ, ಶಿವಮೊಗ್ಗ ಜಿಲ್ಲೆ-577 401 |
| ಎ. ಎಸ್. ಧರಣೇಂದ್ರಯ್ಯ | ಮನೋವಿಜ್ಞಾನ ವಿಭಾಗ<br>ಕರ್ನಾಟಕ ವಿಶ್ವವಿದ್ಯಾಲಯ<br>ಧಾರವಾಡ - 580 003 |
| ವನಮಾಲಾ ವಿಶ್ವನಾಥ | ನಂ. 492/F/3, 7 ನೇ ಅಡ್ಡರಸ್ತೆ<br>7ನೇ ಬ್ಲಾಕು, ಜಯನಗರ<br>ಬೆಂಗಳೂರು - 560 082 |
| ಡಾ॥ ಡಿ. ವಿಜಯ | ಕನ್ನಡ ಅಧ್ಯಯನ ಸಂಸ್ಥೆ<br>ಮಾನಸ ಗಂಗೋತ್ರಿ<br>ಮೈಸೂರು ವಿಶ್ವವಿದ್ಯಾಲಯ<br>ಮೈಸೂರು–570 006 |
| ಬಿ. ಎಸ್. ವೆಂಕಟಲಕ್ಷ್ಮಿ | ಎ-16/1<br>ಜೀವನ ವಿಮಾನಗರ<br>ಎಚ್. ಎ. ಎಲ್. ಮೂರನೇ ಹಂತ<br>ಬೆಂಗಳೂರು-560 005 |
| ಡಾ॥ ಯು. ಆರ್. ಅನಂತಮೂರ್ತಿ | ಇಂಗ್ಲಿಷ್ ವಿಭಾಗ<br>ಮಾನಸಗಂಗೋತ್ರಿ<br>ಮೈಸೂರು ವಿಶ್ವವಿದ್ಯಾಲಯ<br>ಮೈಸೂರು-570 006 |
| ಡಾ॥ ಶಂಕರ ಮೊಕಾಶಿ ಪುಣೇಕರ | ಕನ್ನಡ ಅಧ್ಯಯನ ಸಂಸ್ಥೆ<br>ಮಾನಸ ಗಂಗೋತ್ರಿ<br>ಮೈಸೂರು ವಿಶ್ವವಿದ್ಯಾಲಯ<br>ಮೈಸೂರು–570 006 |

ಡಾ॥ ಜಿ. ಎಸ್. ಆಮೂರ
ಇಂಗ್ಲಿಷ್ ವಿಭಾಗ
ಮರಾಠವಾಡ ವಿಶ್ವವಿದ್ಯಾಲಯ
ಔರಂಗಾಬಾದ್
ಮಹಾರಾಷ್ಟ್ರ-431 001

ಪಿ. ಲಂಕೇಶ್
ನಂ. 15/24
ಗೋವಿಂದಪ್ಪ ರಸ್ತೆ
ಬಸವನ ಗುಡಿ
ಬೆಂಗಳೂರು-560 004

ಯಶವಂತ ಚಿತ್ತಾಲ
ನಂ. 2, ಬ್ಯಾಂಡ್ ಸ್ಟ್ಯಾಂಡ್
ಅಪಾರ್‌ಮೆಂಟ್ಸ್
212 ಎ. ಬಾಂದ್ರಾ
ಮುಂಬೈ-400 050

ಕನ್ನಡ ಅಧ್ಯಯನ ಕೇಂದ್ರದ ವಿಚಾರ ಸಂಕಿರಣದ ಪ್ರಕಟಣೆಗಳು

---

ಸಂಪಾದಕರು :

ಡಾ॥ ಜಿ. ಎಸ್. ಶಿವರುದ್ರಪ್ಪ

ಹೊಸಗನ್ನಡ ಕಾವ್ಯದ ಎರಡು ಮಾರ್ಗಗಳು
ಕನ್ನಡ ನಾಟಕ : ಪರಂಪರೆ ಮತ್ತು ಪ್ರಯೋಗ
ಪಂಪ : ಒಂದು ಅಧ್ಯಯನ
ಕನ್ನಡ ವಿಮರ್ಶೆಯ ನೆಲೆ-ಬೆಲೆ
ಕವಿ ಬೇಂದ್ರೆ
ಸಾಹಿತ್ಯ ಮತ್ತು ಸಾಮಾನ್ಯ ಮನುಷ್ಯ
ಮಹಿಳೆ ಮತ್ತು ಕನ್ನಡ ಸಾಹಿತ್ಯ
ಶ್ರೀ ಕುವೆಂಪು
ಕರ್ನಾಟಕ ಜಾನಪದ
ದಶವಾರ್ಷಿಕ ಸಾಹಿತ್ಯ ಸಮೀಕ್ಷೆ
ಕಾದಂಬರಿಕಾರರಾಗಿ ಕಾರಂತ
ಶ್ರವಣಬೆಳಗೊಳ : ಒಂದು ಸಮೀಕ್ಷೆ